ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ.

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)

## ಪ್ರಥಮಖಂಡ — ನಾಲ್ಕನೆಯಭಾಗ

ಅನುವಾದಕ

ಚಾಮರಾಜನಗರದ ವೆಂಕಟರಮಣಶಾಸ್ತ್ರೀ.

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಪ್ರಸ್ತಾವನೆ.



ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಈ ಪ್ರಥಮಖಂಡದ ಏಳನೆಯ ಭಾಗದಲ್ಲಿ ಮೊದಲುಮೊದಲು ಗಜೇಂದ್ರಮೋಕ್ಷಸ್ತೋತ್ರ, ವಿಷ್ಣುಪಂಜರ ಸ್ತೋತ್ರವೇ ಮುಂತಾದ ಸ್ತೋತ್ರಗಳೂ, ಕಡಕಡೆಯಲ್ಲಿ ಗಣೇಶಸ್ತೋತ್ರ, ನೃಸಿಂಹಸ್ತೋತ್ರಗಳೂ ಸಹ ಸಂದರ್ಭಾನುಸಾರವಾಗಿ ಬಂದಿರುವುವು ಮತ್ತು ಯಕ್ಷರಾಕ್ಷಸಗಂಧರ್ವಾದಿಗಳ ಉತ್ಪತ್ತಿಕ್ರಮವೂ ಸಹ ಬಹಳ ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದು

ರಾಮಾಯಣಕಥೆಗೆ ಸಂಬಂಧಿಸಿದಂತೆ ಭರತನ ಚರಿತ್ರೆಯನ್ನೂ, ಭರತನು ಶೈಲೂಷಾದಿ ಗಂಧರ್ವರಮೇಲೆ ಯುದ್ಧಕ್ಕೆ ಹೊರಡುವುದನ್ನೂ, ಆಕಾಲದಲ್ಲಿ ನಾರದಾಯನರೆಂಬ ಗಂಧರ್ವಗುರುಗಳು, ಭರತನು ಮಹಾವಿಷ್ಣುವಿನ ಅಂಶವಾದ್ದರಿಂದ ಅವನ ಸಂಗಡ ಯುದ್ಧಕ್ಕೆ ಹೋಗದೆ ಸಂಧಾನಮಾಡಿಕೊಳ್ಳುವುದೇ ಶ್ರೇಯಸ್ಕರವೆಂದು ಗಂಧರ್ವರಾಜನಿಗೆ ನಾನಾವಿಧವಾಗಿ ವಿವರಿಸಿರುವ ನೀತಿಗಳನ್ನೂ ಈ ಸಂಪುಟದಲ್ಲಿ ನೋಡಬಹುದು

ಈರೀತಿಯಾಗಿ ನೀತಿಯನ್ನು ಹೇಳುವ ಸಂದರ್ಭದಲ್ಲಿಯೇ ಮಾಲಿಸುಮಾಲಿ ಮಾಲ್ಯವಂತರೆಂಬ ಮಹಾವೀರರೂ, ರಾವಣಕುಂಭಕರ್ಣಾದಿಗಳೂ ಬೇರೆಬೇರೆ ಅವತಾರಗಳನ್ನು ಧರಿಸಿದ ಮಹಾವಿಷ್ಣುವಿನಿಂದ ಸಂಹೃತರಾದ ಸಮಗ್ರಚರಿತ್ರೆಯನ್ನು ಮನೋಹರವಾಗಿ ವಿವರಿಸಿರುವರು

ಭರತನು ಯುದ್ಧಕ್ಕೆ ಹೊರಟ ಸಮಯದಲ್ಲಿಯೂ, ದಾರಿಯಲ್ಲಿ ಸಿಕ್ಕುವ ಗಂಗಾ ಚಂದ್ರಭಾಗಾ, ವಿತಸ್ತಾನದಿಗಳನ್ನು ದಾಟುವ ಸಮಯದಲ್ಲಿಯೂ, ಯುಧಾಜಿನ್ಮಹಾರಾಜನ ರಾಜಧಾನಿಯಲ್ಲಿ ನಡೆದ ಅತ್ಯದ್ಭುತವಾದ ಭರತನ ಮೆರವಣಿಗೆಯ ಸಂದರ್ಭದಲ್ಲಿಯೂ ವಿವರಿಸಿರುವ ವರ್ಣನಾಭಾಗವು ಈ ಗ್ರಂಥದಲ್ಲಿರುವಂತೆ ಇನ್ನಾವ ಗ್ರಂಥದಲ್ಲಿಯೂ ದೊರೆಯುವುದಿಲ್ಲ

ವಾಚಕರು ಈ ಸಂಪುಟದ ೨೬೩ನೇ ಅಧ್ಯಾಯದಲ್ಲಿ ಬರುವ ಪುಷ್ಕರನ ವೃತ್ತಾಂತವನ್ನು ಅತ್ಯವಶ್ಯವಾಗಿ ತಿಳಿಯುವ ಇಷ್ಟವಿದ್ದರೆ ಅವರಿಗೆ ಈ ಗ್ರಂಥವಾಚನದ ಸವಿಯೇ ಮುಂದಟ್ಟಾಗುವುದಿಲ್ಲ ಈ ಪುಷ್ಕರನೇ ಈ ಮಹಾಪುರಾಣದ ೨-೩ ನೇ ಖಂಡಗಳ

ಪ್ರಮುಖಪಾತ್ರನೆಂದು ಎಲ್ಲರೂ ತಿಳಿದಿರಬೇಕು ಈ ಪುಷ್ಕರನೇ ಪರಶುರಾಮನಿಗೆ ವೇದಶಾಸ್ತ್ರ ಪುರಾಣೇತಿಹಾಸ, ಕಾವ್ಯಶೃಂಗಾರಗಳನ್ನೂ, ನಾನಾವಿಧ ಪಾಪಗಳೂ, ಪ್ರಾಯಶ್ಚಿತ್ತ ಪ್ರಯೋಗಾದಿಗಳನ್ನೂ, ಜ್ಯೋತಿಷಗಣಿತವೈದ್ಯಶಾಸ್ತ್ರಾದಿ ಸಕಲ ಶಾಸ್ತ್ರ ಗಳನ್ನು ವಿವರಿಸುವ (ಉಪದೇಶಿಸಿರುವ) ಭಾಗವೇ ಈ ಪುರಾಣದ ಆದ್ಯಂತಗಳಲ್ಲಿಯೂ ತುಂಬಿದೆಯಾದ್ದರಿಂದ ಈ ಮುಂದಿನ ಸಂದರ್ಭವನ್ನಿಲ್ಲಿ ಬರೆದಿರುವರು. ಹೀಗೆ ಅನೇಕ ಅಮೂಲ್ಯ ವಿಷಯಗಳಿಂದ ತುಂಬಿರುವ ಇಂತಹ ಗ್ರಂಥರತ್ನಗಳನ್ನು ಆರಿಸಿಯಾರಿಸಿ ಕನ್ನಡಲೋಕದಲ್ಲಿ ತಂದು ಹರಡುತ್ತಿರುವ ಕರ್ಣಾಟಕ ಸಿಂಹಾಸನಾಧೀಶ್ವರರಾದ ನಮ್ಮ **ಶ್ರೀಮನ್ಮಹಾರಾಜ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ.** ರವರಿಗೆ ಜಗನ್ನಿಯಾಮಕರಾದ ಹರಿಹರ ಬ್ರಹ್ಮಾದಿಗಳು ಸಕಲ ಕಲ್ಯಾಣಗಳನ್ನೂ, ಪುತ್ರ ಸಂಪತ್ತನ್ನೂ ಅನುಗ್ರಹಿಸಿ ದೀರ್ಘಾಯುರಾರೋಗ್ಯಗಳಿಂದ ಕಾಪಾಡಲೆಂದು ಅಚಿಂತ್ಯಾವ್ಯಕ್ತರೂಪಿಯನ್ನು ಪ್ರಾರ್ಥಿಸುತ್ತೇನೆ.

ಅಧ್ಯಾತ್ಮರಾಮಾಶ್ರಮ,
ಮೈಸೂರು
೨೪—೪—೧೯೪೫

**ಸಿ. ವೆಂಕಟರಮಣಶಾಸ್ತ್ರೀ,**
ಅನುವಾದಕ.



# ವಿಷಯಾನುಕ್ರಮಣಿಕೆ.

ಪುಟಸಂಖ್ಯೆ

ಶಾಪವನ್ನು ಹೊಂದಿ ಕೈಲಾಸಪರ್ವತವನ್ನಲ್ಲಾಡಿಸಿ ಕೈಜಜ್ಜಿ ಕೊಂಡು ಕಿರಿಚಿಕೊಂಡಾಗ ಶಿವನಿಂದ ರಾವಣನೆಂಬ ಹೆಸರನ್ನು (ಬಿರುದನ್ನು) ಹೊಂದಿ ಅಷ್ಟಕ್ಕೂ ಬಿಡದೆ ಯಮನನ್ನು ಕೆಣಕಿ ಅಲ್ಲಿ ವಿಪರೀತ ಜಗಳವಾಡಿ ಬ್ರಹ್ಮನಿಂದ ಬುದ್ಧಿ ಹೇಳಿಸಿಕೊಂಡು ಅಷ್ಟಕ್ಕೂ ಬಿಡದೆ ಸೂರ್ಯನ ಸಂಗಡ ಯುದ್ಧಕ್ಕೆ ಹೊರಟು,ಅಲ್ಲೂ ಸಹ ಬ್ರಹ್ಮನು ಸುರ್ಯನನ್ನು ಸಮಾಧಾನಮಾಡಿ ಯುದ್ಧವನ್ನು ಬಿಡಿಸಿದ ಮೇಲೆ ರಾವಣನು ಅಷ್ಟಕ್ಕೆ ಸುಮ್ಮನಾಗದ ಇಂದ್ರಾದಿ ಸಕಲ ದೇವತೆಗಳನ್ನೂ ಜಯಿಸುವನು

## ಇನ್ನೂರ ಇಪ್ಪತ್ತನಾಲ್ಕರನೆಯ ಅಧ್ಯಾಯ--

ರಾವಣನು ಪಾತಾಳಲೋಕಕ್ಕೆ ನುಗ್ಗಿ ಅಲ್ಲಿದ್ದ ಕಾಲಖಂಜಾದಿ ದೈತ್ಯರನ್ನು ಗೆದ್ದು ಬ್ರಹ್ಮನ ಮಾತಿಗೆ ಬೆಲೆಕೊಟ್ಟು ನಿವಾತಕ ಚಾದಿಗಳೊಡನೆ ಸ್ನೇಹಮಾಡಿಕೊಳ್ಳುವನು ವರುಣಲೋಕಕ್ಕೆ ಹೋಗಿ ಅಲ್ಲಿಯೂ ಜಯಶಾಲಿಯಾಗಿ ಬರುವನು ಇಷ್ಟಾದ ಬಳಿಕ ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ವಾಲಿಯ ಮೇಲೆ ಯುದ್ಧ ಮಾಡಲು ಪ್ರಯತ್ನಪಡುವ ಸಮಯದಲ್ಲಿ ತಾರನೆಂಬುವನು ವಾಲಿಯ ಪರಾಕ್ರಮವನ್ನು ತಿಳಿಸಿ ಅವನ ಸಂಗಡ ಯುದ್ಧ ಮಾಡದಂತೆ ತಡೆದು ರಾವಣನನ್ನು ಹಿಂದಕ್ಕೆ ಕಳಿಸುವ ವೃತ್ತಾಂತ 274-284

## ಇನ್ನೂರ ಇಪ್ಪತ್ತೈದು--ಇನ್ನೂರ ಇಪ್ಪತ್ತಾರನೆಯ ಅಧ್ಯಾಯ—

ಈಶ್ವರನು ಅಂಧಕಾಸುರನ ಮೇಲೆ ಯುದ್ಧಮಾಡುವ ವೃತ್ತಾಂತ ಅಂಧಕಾಸುರರು ಕೋಟಿಗಟ್ಟಲೆ ಹುಟ್ಟಲಿಕ್ಕಾರಂಭಿಸಲು ಅವರ ರಕ್ತ ಪಾನಮಾಡಲಿಕ್ಕಾಗಿಈಶ್ವರನು ಮಾಹೇಶ್ವರ್ಯಾದಿಮಾತೃಗಣ ಗಳನ್ನು ಸೃಷ್ಟಿಸುವನು ಈ ಮಾಹೇಶ್ವರ ಗ್ರಹಗಳು ಅಂಧಕರ ರಕ್ತಗಳನ್ನು ಹೀರಿ ಮೂಲಾಂಧಕನನ್ನು ಕೊಂದುಬಿಡು ವುವು ಬಳಿಕ ಅವು ಈಶ್ವರನನ್ನುಅಲಕ್ಷ್ಯವಾಗಿ ಕಂಡು ಅವನ ಮೇಲೆಯೇ ಬೀಳತೊಡಗಲು ಈಶ್ವರನು ನೃಸಿಂಹ ಸ್ತೋತ್ರ ಮಾಡುವನು ನೃಸಿಂಹನು ಮಾತೃಗಣಗಳಿಗೆ ಪ್ರತಿಯಾಗಿ ಬೇರೆ ಬೇರೆ ಗ್ರಹಗಳನ್ನು ನಿರ್ಮಾಣಮಾಡಲು ಮೊದಲು ಸೃಷ್ಟಿಸಿದ ರುದ್ರನ ಕಡೆಯ ಗಣಗಳು ನರಸಿಂಹಸ್ವಾಮಿಗೆ ಶರಣುಬೀಳುವುವು

---

ಪಾಠಕಮಹಾಶಯರಲ್ಲಿ ವಿಜ್ಞಾಪನೆ —

ಈಗ ಬರೆವ ೨೨೩ ನೇ ಅಧ್ಯಾಯದಲ್ಲಿರುವ ವಿಷಯಗಳು ಸಂಪೂರ್ಣವಾಗಿರುವಂತೆ ತೋರುವುದಿಲ್ಲ ಅವಕ್ಕಾಗಿ ಸಂಸ್ಕೃತಮೂಲದಲ್ಲಿರುವ ವಿಷಯಾನುಕ್ರಮಣಿಕಾಪ್ರಕರಣದಲ್ಲಿ (ಇತಃ ಪರಂ ಪಾಠಃ ಖಂಡಿತಃ ಏತದಧ್ಯಾಯಶೇಷಶ್ಚತುರ್ವಿಂಶತ್ಯುತ್ತರ ದ್ವಿಶತತಮೋಧ್ಯಾಯಶ್ಚ ನೋಪಲಬ್ಧಃ) ಹೀಗೆಂದು ಬರೆದಿದಾರೆ ಅದರ ಅರ್ಥವೇನೆಂದರೆ ,—

ಈ ೨೨೩ ನೇ ಅಧ್ಯಾಯದ ೩೫ ನೇ ಶ್ಲೋಕವಾದಮೇಲೆ ಮುಂದೆ ಈ ಅಧ್ಯಾಯವು ಪೂರ್ತಿಯಾಗಿಯೂ ಮತ್ತು ೨೨೪ನೇ ಅಧ್ಯಾಯದ ಪಾಠವೂ ಪ್ರಾಚೀನ ಪುಸ್ತಕಗಳಲ್ಲಿ ದೊರೆತಿಲ್ಲವೆಂದು ಬೊಂಬಾಯಿ ವೆಂಕಟೇಶ್ವರ ಪ್ರೆಸ್ಸಿನ ಮಾಲೀಕರು ಟಿಪ್ಪಣಿಯನ್ನು ಬರೆದಿದಾರೆ

ಈರೀತಿ ಸಿಕ್ಕದೆ ಇರುವ ಈ ಭಾಗದಲ್ಲಿ ಯಾವಯಾವ ಸಂದರ್ಭಗಳಿವೆಯೋ ಹೇಳಲಿಕ್ಕೆ ಬರುವಂತಿಲ್ಲ. ಮೂಲವೇ ಇಲ್ಲದಿರುವಾಗ ನಾವಾದರೂ ಆ ಭಾಗದಲ್ಲಿ ಸ್ವತಂತ್ರಿಸಿ ಏನನ್ನೂ ಬರೆಯಲೂ ಬರುವುದಿಲ್ಲ ಮೂಲಗ್ರಂಥವನ್ನು ಇದ್ದ ಕಿದ್ದಂತೆ ಕನ್ನಡಕ್ಕೆ ಭಟ್ಟಿ ಇಳಿಸುವುದಷ್ಟೋ ಅಷ್ಟೇ ನಮ್ಮ ಕೆಲಸ ಈ ವಿಚಾರದಲ್ಲಿ ಪಾಠಕರು ಯಾರನ್ನೂ ದೂರುಮಾಡುವಂತಿಲ್ಲ ( ಓರಿಕೆಯನ್ನೋದಿರಿ )

ಇಲ್ಲಿಗೆ ಪ್ರಥಮಖಂಡದ ಚತುರ್ಥ ಸಂಪುಟದ ವಿಷಯಾನುಕ್ರಮಣಿಕೆ
ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವಿನವತ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಶ್ರುತವಾನಸ್ಮಿ ಧರ್ಮಜ್ಞ ದೇವವೇಶ್ಮೋಪಲೇಪನೇ ।
ಫಲಂ ಗದತಿ ತೇ ಬ್ರಹ್ಮಂಚ್ಛ್ರೋತುಮಿಚ್ಛಾಮ್ಯಹಂ ಪುನಃ ॥ ೧ ॥

ಲೇಪನಾದಪಿ ಯತ್ಸ್ವರ್ಗಫಲದಂ ಚ ಯಥಾ ಭವೇತ್ ।
ತನ್ಮೇ ಕರ್ಮ ತ್ವಮಾಚಕ್ಷ್ವ ಸರ್ವಜ್ಞೋಽಸಿ ಭೃಗೂತ್ತಮ ॥ ೨ ॥

॥ ಮಾರ್ಕಂಡೇಯ ಉವಾಚ ॥

ಸ್ತುತಿರ್ಲಘುತರಾ ತಸ್ಯ ಲೇಪನಾದಪಿ ಯಾದವ ।
ತಥಾ ಬಹುಫಲಾ ಪ್ರೋಕ್ತಾ ತಾಂ ಕುರುಷ್ವ ಯದೀಚ್ಛಸಿ ॥ ೩ ॥

---

### ನೂರತೊಂಭತ್ತೆರಡನೆಯ ಅಧ್ಯಾಯವು.

೧. ವಜ್ರಮಹಾರಾಜನು ಮಾರ್ಕಂಡೇಯನನ್ನು ಕುರಿತು ಕೇಳುತ್ತಾನೆ — ಎಲೈ ಮಾರ್ಕಂಡೇಯನ, ವಿಷ್ಣುದೇವಾಲಯದ ಮುಂದೆ ಸಾರಿಸುವುದರ ಫಲವನ್ನು ಈಗ ಕೇಳಿಯಾಯಿತು ಇದಕ್ಕಿಂತ ಸುಲಭವಾದ ಕ್ರಮದಿಂದ ಆಯಾಸವೇನೂ ಇಲ್ಲದೆ ಭಗವಂತನನ್ನು ಒಲಿಸಿಕೊಳ್ಳುವ ಕ್ರಮವೇನೆಂಬುದನ್ನು ಮುಂದೆ ಕೇಳ ಬೇಕೆಂದಿದ್ದೇನೆ

೨ ಈರೀತಿ ಲೇಪನ (ಸಾರಿಸು) ಕ್ಕಿಂತ ಸುಲಭವಾಗಿ ಸ್ವರ್ಗ ಫಲವನ್ನು ಕೊಡುವ ಉಪಾಯವಾವುದೋ ಸರ್ವಜ್ಞನಾದ ನೀನು ಆ ಉಪಾಯವನ್ನು ನನಗೆ ದಯಮಾಡಿ ತಿಳಿಸು

೩. ಮಾರ್ಕಂಡೇಯನು ಹೇಳುತ್ತಾನೆ -ದೇವಾಲಯಲೇಪನಕ್ಕಿಂತಲೂ

**ಯೇ ಸ್ತುವಂತಿ ಮಹಾದೇವಂ ಶಂಖಚಕ್ರಗದಾಧರಂ ।**
**ತೇಷಾಂ ನ ದುರ್ಲಭಂ ಕಿಂಚಿದಿಹ ಲೋಕೇ ಪರತ್ರ ಚ ॥ ೪ ॥**

**ವಾಸುದೇವಂ ಸ್ತುವನ್ಮರ್ತ್ಯಃ ಸರ್ವಪಾಪಂ ವ್ಯಪೋಹತಿ ।**
**ಸ್ವರ್ಗಂ ಚಾತ್ಯಂತಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೫ ॥**

**ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮಮರ್ಥಾರ್ಥೀ ಚಾಪ್ನುಯಾದ್ಧನಂ ।**
**ಕಾಮಾನವಾಪ್ನುಯಾತ್ಕಾಮೀ ಪ್ರಜಾರ್ಥೀ ಪ್ರಾಪ್ನುಯಾತ್ಪ್ರಜಾಃ ॥ ೬ ॥**

**ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ।**
**ಭಯಾನ್ಮುಚ್ಯೇತ ಭೀತಶ್ಚ ಮುಚ್ಯೇದಾಪನ್ನ ಆಪದಃ ॥ ೭ ॥**

---

ದೇವರನ್ನು ಸ್ತೋತ್ರಮಾಡುವುದು/ಬಹಳ ಲಘುವಾದ ಉಪಾಯವಲ್ಲ 'ಪ್ರಾರ್ಥನಾ' ಹಾಗೂ ಭಗವಂತನನ್ನು ಸ್ತೋತ್ರಮಾಡುವುದರಿಂದ ಬಹಳ ಫಲವನ್ನು ಪಡೆಯಬಹುದು. ನಿನಗೆ ಇಚ್ಛೆಯಿದ್ದರೆ ಭಗವಂತನನ್ನು ಸ್ತೋತ್ರಮಾಡು

೪ ಶಂಖ-ಚಕ್ರ-ಗದಾಧಾರಿಯಾದ ಶ್ರೀಮನ್ಮಹಾವಿಷ್ಣುವನ್ನು ಯಾರು ಸ್ತೋತ್ರಮಾಡುತ್ತಾರೆಯೋ ಅವರಿಗೆ ಈ ಲೋಕದಲ್ಲೂ ಪರಲೋಕದಲ್ಲೂ ಯಾವುದೂ ದುರ್ಲಭವಾದುದೇ ಇರುವುದಿಲ್ಲ

೫ ಯಾರು ಭಗವಂತನಾದ ವಾಸುದೇವನನ್ನು ಸ್ತೋತ್ರಮಾಡುವರೋ ಅಂತಹ ಮನುಷ್ಯರು ಸಕಲ ಪಾಪಗಳನ್ನೂ ಕಳೆದುಕೊಳ್ಳುವರಲ್ಲದೆ ಅನಂತವಾದ ಸ್ವರ್ಗಸುಖವನ್ನು ಹೊಂದುವರೆಂಬುದರಲ್ಲಿ ಸಂದೇಹವಿಲ್ಲ

೬ ಭಗವಂತನನ್ನು ಕುರಿತು ನನಗೆ ಧರ್ಮವುಂಟಾಗುವಂತೆ ಬೇಡಿಕೊಂಡರೆ ಧರ್ಮಬುದ್ಧಿಯನ್ನು ಕೊಡುತ್ತಾನೆ ದುಡ್ಡಿಲ್ಲ, ದುಡ್ಡುಬೇಕೆಂದು ಬೇಡಿಕೊಂಡರೆ ಬೇಕಾದಷ್ಟು ಹಣವನ್ನು ಕೊಡುತ್ತಾನೆ ಇನ್ನೇನಾದರೂ ಆಶೆಯಿಟ್ಟು ಸ್ತುತಿಮಾಡಿದರೆ ಆ ಆಶೆಯೂ ನೆರವೇರುತ್ತದೆ. ನನಗೆ ಯಶಸ್ಸು ಬರಬೇಕೆಂದು ಸ್ತೋತ್ರಮಾಡಿ ಬೇಡಿಕೊಂಡರೆ ಈ ಲೋಕದಲ್ಲಿ ಮಹತ್ತಾದ ಕೀರ್ತಿಯುಂಟಾಗುತ್ತದೆ

೭. ರೋಗದಿಂದ ನರಳುತ್ತಿರುವವರು ದೇವರ ಸ್ತೋತ್ರಮಾಡುತ್ತ ಬಂದರೆ ರೋಗವು ಪರಿಹಾರವಾಗುವುದು ಸೆರೆಮನೆಯಲ್ಲಿರುವವನು ಸ್ತೋತ್ರಮಾಡಿದರೆ ಜೈಲಿನಿಂದ ಬಿಡುಗಡೆಹೊಂದುವನು. ಬಹಳ ಭಯದಿಂದಲೂ, ಕಷ್ಟದಿಂದಲೂ ಸಂಕಟಪಡುತ್ತಿರುವವರು ಪರಮಾತ್ಮನನ್ನು ಸ್ತೋತ್ರಮಾಡಿದರೆ ಭಯಸಂಕಟಗಳು ದೂರ ಓಡಿಹೋಗುವುವು

ದುರ್ಗಾಣ್ಯತಿತರತ್ಯಾಶು ಪುರುಷಃ ಪುರುಷೋತ್ತಮಂ ।
ಸ್ತುವನ್ನನ್ಯಪರಾದುರ್ಗಾಲ ನಾತ್ರ ಕಾರ್ಯಾ ವಿಚಾರಣಾ ॥ ೮ ॥

ತಸ್ಮಾತ್ಸರ್ವಪ್ರಯತ್ನೇನ ದಿವ್ಯೈರ್ಋಷಿಕೃತೈಃ ಸ್ತವೈಃ ।
ಸ್ತೋತವ್ಯೋ ನರೇಂದ್ರ ಸತತಂ ದೇವದೇವಂ ಸುಭಾಷಿತೈಃ ॥ ೯ ॥

ಕಮಲಪತ್ರಶುಭಾಮಲಲೋಚನಂ
ಹರಿಮರಿಘ್ನಮಚಿಂತ್ಯಪರಾಕ್ರಮಂ ।
ಶರಣಮೇತ್ಯ ಮಹಾಭಯಪೀಡಿತಾ
ಭುವಿ ಭವಂತಿ ನರಾ ಭಯವರ್ಜಿತಾಃ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸ್ತುತಿಮಾಹಾತ್ಮ್ಯವರ್ಣನಂ ನಾಮ
ದ್ವಿನವತ್ಯಧಿಕ ಶತತಮೋಽಧ್ಯಾಯಃ.

೮-೧೦. ಪುರುಷೋತ್ತಮನನ್ನು ಸ್ತೋತ್ರಮಾಡಿದವನು ಮಹತ್ತರವಾದ ದುರ್ಗಗಳನ್ನೂ ಸಹ ದಾಟಬಲ್ಲನು. ಆದ್ದರಿಂದ ಸಕಲ ಪ್ರಯತ್ನವನ್ನೂ ಮಾಡಿ ದೇವರನ್ನು ಕುರಿತು ಋಷಿಗಳು ರಚಿಸಿರುವ ಸ್ತೋತ್ರಗಳನ್ನು ಪ್ರತಿದಿನವೂ ದೇವರ ಮುಂದೆ ಕುಳಿತು ಪಾರಾಯಣ-ಮಾಡುವುದರ ಮೂಲಕ ಸ್ತೋತ್ರಮಾಡಬೇಕಾದುದು ಮುಖ್ಯ ಕರ್ತವ್ಯ. ಈರೀತಿ ನಾನು ಹೇಳಿದಂತೆ ಕಮಲಪತ್ರದಂತೆ ನೇತ್ರವುಳ್ಳ, ಶತ್ರು ಸಂಹಾರಕನಾದ, ಅಚಿಂತ್ಯ ಪರಾಕ್ರಮಶಾಲಿಯಾದ ಪರಮಾತ್ಮನನ್ನು ಶರಣುಹೊಂದಿ ಯಾವನು ಸ್ತೋತ್ರಮಾಡುತ್ತಾನೋ ಅಂತಹ ಮನುಷ್ಯನು, ಈ ಲೋಕದಲ್ಲಿ ಮಹಾ ಭಯದಿಂದ ಕೂಡಿದವನಾದಾಗ್ಯೂ ಸ್ವಾಮಿಯ ಅನುಗ್ರಹದಿಂದ ಆ ಭಯಗಳೆಲ್ಲಾ ಪರಿಹಾರವಾಗಿ ಶಾಂತಚಿತ್ತನಾಗುವನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಸ್ತೋತ್ರಮಹಾತ್ಮ್ಯೆ ಎಂಬ ಹೆಸರಿನ
ಒಂದುನೂರ ತೊಂಭತ್ತೆರಡನೆಯ ಅಧ್ಯಾಯ
ಮುಗಿದುದು

**ಯೇ ಸ್ತುವಂತಿ ಮಹಾದೇವಂ ಶಂಖಚಕ್ರಗದಾಧರಂ ।**
**ತೇಷಾಂ ನ ದುರ್ಲಭಂ ಕಿಂಚಿದಿಹ ಲೋಕೇ ಪರತ್ರ ಚ** ॥ ೪ ॥

**ವಾಸುದೇವಂ ಸ್ತುವನ್ಮರ್ತ್ಯಃ ಸರ್ವಪಾಪಂ ವ್ಯಪೋಹತಿ ।**
**ಸ್ವರ್ಗಂ ಚಾತ್ಯಂತಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ** ॥ ೫ ॥

**ಧರ್ಮಾರ್ಥೀಪ್ರಾಪ್ನುಯಾದ್ಧರ್ಮಮರ್ಥಾರ್ಥೀ ಚಾಪ್ನುಯಾದ್ಧನಂ ।**
**ಕಾಮಾನವಾಪ್ನುಯಾತ್ಕಾಮೀ ಪ್ರಜಾರ್ಥೀ ಪ್ರಾಪ್ನುಯಾತ್ಪ್ರಜಾಃ** ॥ ೬ ॥

**ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ।**
**ಭಯಾನ್ಮುಚ್ಯೇತ ಭೀತಶ್ಚ ಮುಚ್ಯೇದಾಪನ್ನ ಆಪದಃ** ॥ ೭ ॥

---

ದೇವರನ್ನು ಸ್ತೋತ್ರಮಾಡುವುದು/ಬಹಳ ಲಘುವಾದ ಉಪಾಯವಯ್ಯ 'ವಪ್ರ[illegible]' ಹಾಗೂ ಭಗವಂತನನ್ನು ಸ್ತೋತ್ರಮಾಡುವುದರಿಂದ ಬಹಳ ಫಲವನ್ನು [illegible] ನಿನಗೆ ಇಚ್ಛೆಯಿದ್ದರೆ ಭಗವಂತನನ್ನು ಸ್ತೋತ್ರಮಾಡು

೪ ಶಂಖ-ಚಕ್ರ-ಗದಾಧಾರಿಯಾದ ಶ್ರೀಮನ್ಮಹಾವಿಷ್ಣುವನ್ನು ಯಾರು ಸ್ತೋತ್ರಮಾಡುತ್ತಾರೆಯೋ ಅವರಿಗೆ ಈ ಲೋಕದಲ್ಲೂ ಪರಲೋಕದಲ್ಲೂ ಯಾವುದೂ ದುರ್ಲಭವಾದುದೇ ಇರುವುದಿಲ್ಲ

೫ ಯಾರು ಭಗವಂತನಾದ ವಾಸುದೇವನನ್ನು ಸ್ತೋತ್ರಮಾಡುವರೋ ಅಂತಹ ಮನುಷ್ಯರು ಸಕಲ ಪಾಪಗಳನ್ನೂ ಕಳೆದುಕೊಳ್ಳುವರಲ್ಲದೆ ಅನಂತವಾದ ಸ್ವರ್ಗಸುಖವನ್ನು ಹೊಂದುವರೆಂಬುದರಲ್ಲಿ ಸಂದೇಹವಿಲ್ಲ

೬ ಭಗವಂತನನ್ನು ಕುರಿತು ನನಗೆ ಧರ್ಮವುಂಟಾಗುವಂತೆ ಬೇಡಿಕೊಂಡರೆ ಧರ್ಮಬುದ್ಧಿಯನ್ನು ಕೊಡುತ್ತಾನೆ ದುಡ್ಡಿಲ್ಲ, ದುಡ್ಡು ಬೇಕೆಂದು ಬೇಡಿಕೊಂಡರೆ ಬೇಕಾದಷ್ಟು ಹಣವನ್ನು ಕೊಡುತ್ತಾನೆ ಇನ್ನೇನಾದರೂ ಆಶೆಯಿಟ್ಟು ಸ್ತುತಿಮಾಡಿದರೆ ಆ ಆಶೆಯೂ ನೆರವೇರುತ್ತದೆ. ನನಗೆ ಯಶಸ್ಸು ಬರಬೇಕೆಂದು ಸ್ತೋತ್ರಮಾಡಿ ಬೇಡಿಕೊಂಡರೆ ಈ ಲೋಕದಲ್ಲಿ ಮಹತ್ತಾದ ಕೀರ್ತಿಯುಂಟಾಗುತ್ತದೆ

೭. ರೋಗದಿಂದ ನರಳುತ್ತಿರುವವರು ದೇವರ ಸ್ತೋತ್ರಮಾಡುತ್ತ ಬಂದರೆ ರೋಗವು ಪರಿಹಾರವಾಗುವುದು ಸೆರೆಮನೆಯಲ್ಲಿರುವವನು ಸ್ತೋತ್ರಮಾಡಿದರೆ ಜೈಲಿನಿಂದ ಬಿಡುಗಡೆಹೊಂದುವನು ಬಹಳ ಭಯದಿಂದಲೂ, ಕಷ್ಟದಿಂದಲೂ ಸಂಕಟಪಡುತ್ತಿರುವವರು ಪರಮಾತ್ಮನನ್ನು ಸ್ತೋತ್ರಮಾಡಿದರೆ ಭಯಸಂಕಟಗಳು ದೂರ ಓಡಿಹೋಗುವುವು

ಮಾರ್ಗಾಣ್ಯತಿತರತ್ಯಾಶು ಪುರುಷಃ ಪುರುಷೋತ್ತಮಂ ।
ಸ್ತುವನ್ನೃಪತಿಶಾರ್ದೂಲ ನಾತ್ರ ಕಾರ್ಯಾ ವಿಚಾರಣಾ ॥ ೮ ॥

ತಸ್ಮಾತ್ಸರ್ವಪ್ರಯತ್ನೇನ ದಿವ್ಯೈರ್ಋಷಿಕೃತೈಃ ಸ್ತವೈಃ ।
ಸ್ತೂಯಮಾನ್ನರೇಂದ್ರ ಸತತಂ ದೇವದೇವಂ ಸುಭಾಷಿತೈಃ ॥ ೯ ॥

ಕಮಲಪತ್ರಶುಭಾಮಲಲೋಚನಂ
ಹರಿಮರಿಘ್ನಮಚಿಂತ್ಯಪರಾಕ್ರಮಂ ।
ಶರಣಮೇತ್ಯ ಮಹಾಭಯಪೀಡಿತಾ
ಭುವಿ ಭವಂತಿ ನರಾ ಭಯವರ್ಜಿತಾಃ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸ್ತುತಿಮಾಹಾತ್ಮ್ಯವರ್ಣನಂ ನಾಮ
ದ್ವಿನವತ್ಯಧಿಕ ಶತತಮೋಽಧ್ಯಾಯಃ.

೮-೧೦. ಪುರುಷೋತ್ತಮನನ್ನು ಸ್ತೋತ್ರಮಾಡಿದವನು ಮಹತ್ತರವಾದ ಮಾರ್ಗಗಳನ್ನೂ ಸಹ ದಾಟಬಲ್ಲನು ಆದ್ದರಿಂದ ಸಕಲ ಪ್ರಯತ್ನವನ್ನೂ ಮಾಡಿ ದೇವರನ್ನು ಕುರಿತು ಋಷಿಗಳು ರಚಿಸಿರುವ ಸ್ತೋತ್ರಗಳನ್ನು ಪ್ರತಿದಿನವೂ ದೇವರ ಮುಂದೆ ಕುಳಿತು ಪಾರಾಯಣ-ಮಾಡುವುದರ ಮೂಲಕ ಸ್ತೋತ್ರಮಾಡಬೇಕಾದುದು ಮುಖ್ಯ ಕರ್ತವ್ಯ ಈರೀತಿ ನಾನು ಹೇಳಿದಂತೆ ಕಮಲಪತ್ರದಂತೆ ನೇತ್ರವುಳ್ಳ, ಶತ್ರು ಸಂಹಾರಕನಾದ, ಅಚಿಂತ್ಯ ಪರಾಕ್ರಮಶಾಲಿಯಾದ ಪರಮಾತ್ಮನನ್ನು ಶರಣುಹೊಂದಿ ಯಾವನು ಸ್ತೋತ್ರಮಾಡುತ್ತಾನೋ ಅಂತಹ ಮನುಷ್ಯನು, ಈ ಲೋಕದಲ್ಲಿ ಮಹಾ ಭಯದಿಂದ ಕೂಡಿದವನಾದಾಗ್ಯೂ ಸ್ವಾಮಿಯ ಅನುಗ್ರಹದಿಂದ ಆ ಭಯಗಳೆಲ್ಲಾ ಪರಿಹಾರವಾಗಿ ಶಾಂತಚಿತ್ತನಾಗುವನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಸ್ತೋತ್ರಮಹಾತ್ಮ್ಯೆ ಎಂಬ ಹೆಸರಿನ
ಒಂದುನೂರ ತೊಂಭತ್ತೆರಡನೆಯ ಅಧ್ಯಾಯ
ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರಿನವತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ಸ್ತುತೇನ ದೇವದೇವೇನ ಗಜೇಂದ್ರಸ್ಯ ತು ಯತ್ಕೃತಂ ॥ ೧ ॥

ಪುರಾ ವಜ್ರ ಮಹಾಬಾಹೂ ಗಂಧರ್ವೌ ಯೌ ಹಹಾ ಹೂಹೂ ।
ಗೀತೇಃ ಪರಸ್ಪರಂ ಸ್ಪರ್ಧಾಂ ಚಕ್ರತುಸ್ತೌ ಪರಂತಪ ॥ ೨ ॥

ಸ್ಪರ್ಧಮಾನೌ ಪರಂ ರಾಜಂಶ್ಚಕ್ರತುಸ್ತೌ ಪರಸ್ಪರಂ ।
ಆವಯೋಃ ಪ್ರಾಶ್ನಿಕಃ ಸಾಧುಃ ಕೋಽಸ್ಮಿನ್ ಲೋಕೇ ಭವಿಷ್ಯತಿ ॥ ೩ ॥

### ನೂರ ತೊಂಭತ್ತಮೂರನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಎಲೈ ಮಹಾರಾಜನೇ ! ಈ ವಿಷಯದಲ್ಲಿ ಪುರಾತನಕಾಲದಲ್ಲಿ ನಡೆದ ಒಂದು ಇತಿಹಾಸವನ್ನು ನಿನಗೆ ಹೇಳುತ್ತೇನೆ ಕೇಳು. ಗಜೇಂದ್ರನು ದೇವಾದಿದೇವನನ್ನು ಸ್ತೋತ್ರಮಾಡಿದುದರ ಫಲವಾಗಿ ಎಂತಹ ಭಯದಿಂದ ಬಿಡುಗಡೆಯಾದನೆಂಬುದೇ ಆ ಇತಿಹಾಸವಯ್ಯಾ !

೨-೯. ಎಲೈ ಮಹಾಭುಜಪರಾಕ್ರಮಶಾಲಿಯಾದ ವಜ್ರಮಹಾರಾಜನೆ ! ಕೇಳು. ಪೂರ್ವಕಾಲದಲ್ಲಿ ದೇವಲೋಕದಲ್ಲಿ ಹಾಹಾ, ಹೂಹೂ ಎಂಬ ಹೆಸರಿನ ಇಬ್ಬರು ಗಾಯಕರಾದ ಗಂಧರ್ವರು ವಾಸವಾಗಿದ್ದರು. ಅವರಿಬ್ಬರೂ ಗಾನವಿದ್ಯೆಯಲ್ಲಿ ಕುಶಲರು ಒಂದಾವರ್ತಿ ಗಾನವಿಚಾರದಲ್ಲಿ ಇಬ್ಬರಿಗೂ ನಾನು ದೊಡ್ಡವ, ತಾನು ದೊಡ್ಡವ ಎಂಬುದಾಗಿ ಸ್ಪರ್ಧೆ (ಹುರುಡು) ಹುಟ್ಟಿತು ಆಗ ನಮ್ಮಿಬ್ಬರಲ್ಲಿ

ತಯೋರಥಾಹುರ್ಗಂಧರ್ವಾ ದೇವಲೋಽಯಂ ಭವಿಷ್ಯತಿ ।
ಏವಮುಕ್ತೌ ತತಸ್ತೌ ತು ನೇಚ್ಛೇತಾಂ ದೇವಲಂ ಮುನಿಂ ॥ ೪ ॥

ನಾಯಂ ಜಾನಾತಿ ಗೀತಸ್ಯ ವಿಶೇಷಮಿತಿ ಮೋಹಿತೌ ।
ತೌ ಶಶಾಪ ಮಹಾಕ್ರುದ್ಧೋ ದೇವಲಃ ಸುಮಹಾತಪಾಃ ॥ ೫ ॥

ಅವಜ್ಞಾ ಜಾನತೋ ಯಸ್ಮಾದ್ಭವದ್ಭ್ಯಾಂ ಮಮ ವೈ ಕೃತಾ ।
ತಸ್ಮಾಚ್ಛಾಪಂ ಪ್ರದಾಸ್ಯಾಮಿ ಯುವಯೋರ್ದೇವಗಾನಯೋಃ ॥ ೬ ॥

ಹಾಹಾ ಭವಿಷ್ಯತಿ ಕರೀ ಹೂಹೂ ನಕ್ರೋ ಭವಿಷ್ಯತಿ ।
ನಕ್ರಂ ಚ ದೇವದೇವೇಶೋ ಗಜಾಕರ್ಷಣತತ್ಪರಂ ॥ ೭ ॥

---

ಯಾರು ಶ್ರೇಷ್ಠರೆಂಬುದನ್ನು ಪರೀಕ್ಷಿಸಿ ನಿಷ್ಕರ್ಷಿಸಲು ಯೋಗ್ಯತೆಯುಳ್ಳವರಾರೆಂದು
ಕೇಳಲು, ಆ ಗಂಧರ್ವರು ಅಲ್ಲಿ ಭಗವಚ್ಚಿಂತನಮಾಡುತ್ತಾ ಕುಳಿತಿದ್ದ ಓರ್ವ ಋಷಿ
ಯನ್ನು ತೋರಿಸಿ, ಎಲೈ ಹಾಹಾ, ಹೂಹೂಗಳೇ! ಇದೋ, ಇಲ್ಲಿ ನೋಡಿ ಇಲ್ಲಿ
ಕುಳಿತಿರುವ ಈ ದೇವಲನೆಂಬ ದೇವಮುನಿಯು ನಿಮ್ಮಿಬ್ಬರ ಯೋಗ್ಯತೆಯನ್ನು ಪರೀ
ಕ್ಷಿಸಿ ಯಾರು ಹೆಚ್ಚೆಂಬುದನ್ನು ತಿಳಿಸುವನೆನ್ನಲು, ಆ ಗಾಯಕರೀರ್ವರೂ, ಇವನಿಗೆ
ಗಾನವಿದ್ಯೆಯೇನು ಗೊತ್ತಿದ? ಇವರ ವೈಶಿಷ್ಟ್ಯವನ್ನಿವನೇನು ಬಲ್ಲ? ನಾವು ಇವನನ್ನು
ಪರೀಕ್ಷಕನನ್ನಾಗಿ ಅಂಗೀಕರಿಸುವುದಿಲ್ಲವೆಂದು ಅಜ್ಞಾನದಿಂದ ಆ ಮುನಿಯನ್ನು ಜರಿದು
ಮಾತನಾಡಿಬಿಟ್ಟರು ಇವರು ದುರಹಂಕಾರದಿಂದ ಕೊಬ್ಬಿ ಆಡಿದ ಮಾತನ್ನು ಆ
ದೇವಮುನಿಯು ಕೇಳಿ, ಕೋಪಗೊಂಡವನಾಗಿ, ಎಲೋ ಗಂಧರ್ವಗಾಯಕರಿರಾ!
ನನ್ನ ಯೋಗ್ಯತೆಯನ್ನು ನೀವು ಸ್ವಲ್ಪವೂ ವಿಚಾರಿಸದೆ ಅವಮಾನಕರವಾದ ಮಾತು
ಗಳನ್ನಾಡಿದುದರಿಂದ ನೀವಿಬ್ಬರೂ ಶಾಪಾರ್ಹರಾಗಿರುವಿರಿ ನೀವು ಈ ದಿವ್ಯಲೋಕ
ದಲ್ಲಿರಲು ಯೋಗ್ಯರಲ್ಲ ಶಾಪವನ್ನು ಕೊಡುತ್ತೇನೆ, ನಡೆಯಿರಿ. ನೀವಿಬ್ಬರೂ
ಈಗಲೇ ಭೂಲೋಕಕ್ಕೆ ಹೊರಡಿರಿ ಅಲ್ಲಿ ಹಾಹಾ ಎಂಬ ಗಂಧರ್ವನು ಮದಿಸಿದ
ಆನೆಯಾಗಿ ಹುಟ್ಟಲಿ ಈ ಹೂಹೂ ಎಂಬ ಗಂಧರ್ವನು ನೀರಿನಲ್ಲಿ ಮೊಸಳೆಯಾಗಿ
ಹುಟ್ಟಲಿ, ಎಂದು ಶಪಿಸಿದೊಡನೆಯೇ ಆ ಗಂಧರ್ವರಿಬ್ಬರೂ ಗಾಬರಿಯಾಗಿ ದೇವಲ
ನಿಗೆ ಅಡ್ಡಬಿದ್ದು, ಸ್ವಾಮಿ! ತಪ್ಪಾಯಿತು ವಿಶಾಪವನ್ನನುಗ್ರಹಿಸಬೇಕೆನ್ನಲು,
ದೇವಲನು ಹೇಳಿದನು --ನೀರಿನಲ್ಲಿ ಮೊಸಳೆಯಾಗಿ ಹುಟ್ಟುವ ಗಂಧರ್ವನು ಆ
ನೀರನ್ನು ಕುಡಿಯುವುದಕ್ಕಾಗಿ ಆನೆಯ ಆಕಾರದಿಂದ ಬರುವ ಗಂಧರ್ವನ ಕಾಲನ್ನು
ಹಿಡಿದು ನುಂಗಲಾರಂಭಿಸಿದಾಗ, ಆ ಗಜೇಂದ್ರನು ಮೃತ್ಯುಭಯದಿಂದ ಭಗವಂತನಾದ

ನಾಗಸ್ತುತಸ್ತು ಚಕ್ರೇಣ ದ್ವಿಧಾ ಕರ್ತಾ ತದಾ ಯುವಾಂ ।
ಉಭೌ ಸ್ವಂ ಲಪ್ಸ್ಯಥೋ ರೂಪಂ ಶಾಪಸ್ಯಾಂತೇ ತು ಗಾಯನೌ ॥ ೮ ॥

ಶಾಪೇನ ತೌ ತಸ್ಯ ತತಸ್ತು ಜಾತೌ
ಮಯಾ ಯಥೋಕ್ತೌ ತವ ರಾಜಸಿಂಹ ।
ಗಜಸ್ತು ತೇನಾಪಿ ಜನಾರ್ದನೇನ
ಸಂಮೋಚಿತೌ ತೌ ದ್ವಿಜವರ್ಯಶಾಪಾತ್ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಧರ್ವಯೋರ್ಗಜನಕ್ರೀಕರಣಂನಾಮ
ತ್ರಿನವತ್ಯಧಿಕ ಶತತಮೋಽಧ್ಯಾಯಃ

---

ಮಹಾವಿಷ್ಣುವನ್ನು ಕುರಿತು ಸ್ತೋತ್ರಮಾಡುತ್ತಾನೆ ಈಗ ಆ ಗಜೇಂದ್ರನ ಸ್ತೋತ್ರ ವನ್ನು ಕೇಳಿದೊಡನೆ ಪರಮಾತ್ಮನು ಕೂಡಲೆ ಓಡಿಬಂದು ಆ ಮೊಸಳೆಯನ್ನು ತನ್ನ ಚಕ್ರದಿಂದ ಎರಡು ಪಾಲಾಗಿ ಕತ್ತರಿಸುವನು, ಆ ಕೂಡಲೆ ನಿಮ್ಮಿಬ್ಬರಿಗೂ ಈ ಶಾಪ ಕಳೆದುಹೋಗಿ ಪೂರ್ವದಂತೆ ಗಂಧರ್ವಲೋಕಕ್ಕೆ ಬರುವಿರಿ' ಈ ನನ್ನ ಮಾತು ಸುಳ್ಳಾಗಲಾರದೆಂದು ಹೇಳಲು, ಕೂಡಲೆ ಆ ಶಾಪಗ್ರಸ್ತಗಂಧರ್ವರು ಭೂಮಿಗಿಳಿದು ಬಂದು ದುರಹಂಕಾರದ ಫಲವಾಗಿ ಆನೆ-ಮೊಸಳೆಗಳಾಗಿ ಹುಟ್ಟಬೇಕಾಯಿತು' ಕಂಡೆಯಾ? ಬಾಯಿಕೊಬ್ಬಿನ ಫಲವನ್ನು! ಅಯ್ಯ! ವಜ್ರರಾಜ! ಆ ಗಜೇಂದ್ರನು ಮೊಸಳೆಯ ಬಾಯಿಗೆ ಸಿಕ್ಕಿದಾಗ ನಾರಾಯಣನನ್ನು ಸ್ತೋತ್ರಮಾಡಿ ಆ ಭಗವಂತನ ದರ್ಶನ ಪಡೆದು ಮೋಕ್ಷವನ್ನು ಪಡೆದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ಗಂಧರ್ವರು ಆನೆ-
ಮೊಸಳೆಗಳಾಗಿ ಹುಟ್ಟಿದರೆಂಬ ವೃತ್ತಾಂತದ ನೂರತೊಂಭತ್ತ
ಮೂರನೆಯ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರ್ನವತ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಭಗವಂಚ್ಛ್ರೋತುಮಿಚ್ಛಾಮಿ ಗಜೇಂದ್ರಸ್ಯ ವಿಮೋಕ್ಷಣಂ ।
ವಿಸ್ತರೇಣ ಮಹಾಭಾಗ ಶಾಪಾನ್ನಕ್ರಸ್ಯ ಚೋಭಯೋಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಅಸ್ತ್ಯಸ್ಮಿಂಚ್ಛೃಂಗವಾನ್ನಾಮ ಜಂಬೂದ್ವೀಪೇ ಕುಲಾಚಲಃ ।
ಮಹಾಪಾತುಸಮುನ್ನದ್ಧೈರ್ಯುತಃ ಶೃಂಗೈರ್ನಭಂಕಷೈಃ ॥ ೨ ॥

ಯಸ್ಯ ಶೃಂಗತ್ರಯಂ ಮಧ್ಯಂ ಭಾತಿ ರಾಜನ್ವಿಶೇಷವತ್ ।
ಬ್ರಹ್ಮಾರ್ಕಸೋಮನಿಲಯಂ ಮನೋಹಾರಿ ದಿವಂ ಗತಂ ॥ ೩ ॥

---

### ನೂರತೊಂಭತ್ತನಾಲ್ಕನೆಯ ಅಧ್ಯಾಯವು.

೧ ವಜ್ರಮಹಾರಾಜನು ಕೇಳುತ್ತಾನೆ —ಸ್ವಾಮಿ ! ಮಾರ್ಕಂಡೇಯ ಋಷಿಗಳೆ ! ಈ ಗಜೇಂದ್ರ ಮೋಕ್ಷದ ಕಥೆಯನ್ನು ಸ್ವಲ್ಪ ವಿಸ್ತಾರವಾಗಿ ಹೇಳಬೇಕು ! ನಾಗ ಮಕರ ಇವರಿಬ್ಬರೂ ಭೂಲೋಕದಲ್ಲಿ ಯಾವ ರೀತಿ ಇದ್ದರು ? ಅವರಿಗೆ ಕಡೆಗೆ ಮೋಕ್ಷವಾದುದು ಹೇಗೆ ? ಈ ಸಂಗತಿಯನ್ನು ತಿಳಿಸಿರಿ

### ಗಜೇಂದ್ರ ಮೋಕ್ಷದ ಕಥೆ.

೧-೧೨ ಮಾರ್ಕಂಡೇಯನು ಹೇಳುತ್ತಾನೆ — ಈ ಜಂಬೂದ್ವೀಪದಲ್ಲಿ ಶೃಂಗವಂತವೆಂಬ ಮಹಾಪರ್ವತವಿದೆ ಈ ಮಹಾ

ನಾಗಸ್ತು ತಸ್ಯ ಚಕ್ರೇಣ ದ್ವಿಧಾ ಕರ್ತಾ ತದಾ ಯುವಾಂ ।
ಉಭೌ ಸ್ವಂ ಲಪ್ಸ್ಯಥೋ ರೂಪಂ ಶಾಪಸ್ಯಾಂತೇ ತು ಗಾಯನೌ ॥ ೮ ॥

ಶಾಪೇನ ತೌ ತಸ್ಯ ತತಸ್ತು ಜಾತೌ
ಮಯಾ ಯಥೋಕ್ತೌ ತವ ರಾಜಸಿಂಹ ।
ಗಜಸ್ತು ತೇನಾಪಿ ಜನಾರ್ದನೇನ
ಸಂಮೋಚಿತೌ ತೌ ದ್ವಿಜವರ್ಯಶಾಪಾತ್ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಧರ್ವಯೋರ್ಗಜನಕ್ರೀಕರಣಂನಾಮ
ತ್ರಿನವತ್ಯಧಿಕ ಶತತಮೋಽಧ್ಯಾಯಃ

---

ಮಹಾವಿಷ್ಣುವನ್ನು ಕುರಿತು ಸ್ತೋತ್ರಮಾಡುತ್ತಾನೆ ಈಗ ಆಗಜೇಂದ್ರನ ಸ್ತೋತ್ರ ವನ್ನು ಕೇಳಿದೊಡನೆ ಪರಮಾತ್ಮನು ಕೂಡಲೆ ಓಡಿಬಂದು ಆ ಮೊಸಳೆಯನ್ನು ತನ್ನ ಚಕ್ರದಿಂದ ಎರಡು ಪಾಲಾಗಿ ಕತ್ತರಿಸುವನು, ಆ ಕೂಡಲೆ ನಿಮ್ಮಿಬ್ಬರಿಗೂ ಈ ಶಾಪ ಕಳೆದುಹೋಗಿ ಪೂರ್ವದಂತೆ ಗಂಧರ್ವಲೋಕಕ್ಕೆ ಬರುವಿರಿ' ಈ ನನ್ನ ಮಾತು ಸುಳ್ಳಾಗಲಾರದೆಂದು ಹೇಳಲು, ಕೂಡಲೆ ಆ ಶಾಪಗ್ರಸ್ತಗಂಧರ್ವರು ಭೂಮಿಗಿಳಿದು ಬಂದು ದುರಹಂಕಾರದ ಫಲವಾಗಿ ಆನೆ-ಮೊಸಳೆಗಳಾಗಿ ಹುಟ್ಟಬೇಕಾಯಿತು! ಕಂಡೆಯಾ? ಬಾಯಿಕೊಬ್ಬಿನ ಫಲವನ್ನು! ಅಯ್ಯ! ವಜ್ರರಾಜ! ಆ ಗಜೇಂದ್ರನು ಮೊಸಳೆಯ ಬಾಯಿಗೆ ಸಿಕ್ಕಿದಾಗ ನಾರಾಯಣನನ್ನು ಸ್ತೋತ್ರಮಾಡಿ ಆ ಭಗವಂತನ ದರ್ಶನ ಪಡೆದು ಮೋಕ್ಷವನ್ನು ಪಡೆದನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ಗಂಧರ್ವರು ಆನೆ-
ಮೊಸಳೆಗಳಾಗಿ ಹುಟ್ಟಿದರೆಂಬ ವೃತ್ತಾಂತದ ನೂರತೊಂಭತ್ತ
ಮೂರನೆಯ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರ್ನವತ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಭಗವಂಚ್ಛ್ರೋತುಮಿಚ್ಛಾಮಿ ಗಜೇಂದ್ರಸ್ಯ ವಿಮೋಕ್ಷಣಂ ।
ವಿಸ್ತರೇಣ ಮಹಾಭಾಗ ಶಾಪಾನ್ನಕ್ರಸ್ಯ ಚೋಭಯೋಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಅಸ್ತ್ಯಸ್ಮಿಂಚ್ಛೃಂಗವಾನ್ನಾಮ ಜಂಬೂದ್ವೀಪೇ ಕುಲಾಚಲಃ ।
ಮಹಾದಾತುಸಮುನ್ನದ್ಧೈರ್ಯುಕ್ತಃ ಶೃಂಗೈರ್ನಭಂಕಷೈಃ ॥ ೨ ॥

ಯಸ್ಯ ಶೃಂಗತ್ರಯಂ ಮಧ್ಯಂ ಭಾತಿ ರಾಜನ್ವಿಶೇಷವತ್ ।
ಬ್ರಹ್ಮಾರ್ಕಸೋಮನಿಲಯಂ ಮನೋಹಾರಿ ದಿವಂ ಗತಂ ॥ ೩ ॥

---

### ನೂರತೊಂಭತ್ತನಾಲ್ಕನೆಯ ಅಧ್ಯಾಯವು.

೧ ವಜ್ರಮಹಾರಾಜನು ಕೇಳುತ್ತಾನೆ —ಸ್ವಾಮಿ! ಮಾರ್ಕಂಡೇಯ ಋಷಿಗಳೆ! ಈ ಗಜೇಂದ್ರ ಮೋಕ್ಷದ ಕಥೆಯನ್ನು ಸ್ವಲ್ಪ ವಿಸ್ತಾರವಾಗಿ ಹೇಳಬೇಕು! ಶಾಪ ಪಡೆದ ಅವರಿಬ್ಬರೂ ಭೂಲೋಕದಲ್ಲಿ ಯಾವ ರೀತಿ ಇದ್ದರು? ಅವರಿಗೆ ಕಡೆಗ ಮೋಕ್ಷನಾದುದು ಹೇಗೆ? ಈ ಸಂಗತಿಯನ್ನು ತಿಳಿಸಿರಿ

### ಗಜೇಂದ್ರ ಮೋಕ್ಷದ ಕಥೆ.

೧-೧೮ ಮಾರ್ಕಂಡೇಯನು ಹೇಳುತ್ತಾನೆ — ಈ ಜಂಬೂದ್ವೀಪದಲ್ಲಿ ಶೃಂಗವಂತವೆಂಬ ಮಹಾಪರ್ವತವಿದೆ ಈ ಮಹಾ

ತೇಷಾಮುಥ್ಯೈಕಂ ಸೌವರ್ಣಮುಪರಂ ರಾಜತಂ ಮಹತ್ ।
ಸರ್ವರತ್ನಮಯಂ ಚೈಕಂ ಮಧ್ಯಮಂ ಬ್ರಹ್ಮಣಃ ಕ್ಷಯಂ ॥ ೪ ॥

ಕಾಂಚನಂ ಸೂರ್ಯನಿಲಯಂ ರಾಜತಂ ಶಶಿನಃ ಕ್ಷಯಂ ।
ತ್ರಿಕೂಟಂ ಶೈಲರಾಜಾಭಂ ರತ್ನವೃಕ್ಷದ್ರುಮೈರ್ಯುತಂ ॥ ೫ ॥

ನ ತತ್ಕೃತಘ್ನಾಃ ಪಶ್ಯಂತಿ ನ ನೃಶಂಸಾ ನ ನಾಸ್ತಿಕಾಃ ।
ನಾತಪ್ತತಪಸಃ ಕೇಚಿನ್ನೈವ ಪಾಪಕೃತೋ ಜನಾಃ ॥ ೬ ॥

ತಸ್ಯ ಸಾನುಮತಃ ಪೃಷ್ಠೇ ಸರೋಽವ್ಯಾಕೋಚಪಂಕಜಂ ।
ಕಾರಂಡವಸಮಾಕೀರ್ಣಂ ರಾಜಹಂಸೋಪಶೋಭಿತಂ ॥ ೭ ॥

ಸಚ್ಚಿತ್ತಮಿವ ಗಂಭೀರಂ ಸಚ್ಚಿತ್ತಮಿವ ನಿರ್ಮಲಂ ।
ಬಹೂಪಯೋಗ್ಯಂ ಚ ತಥಾ ಸತಾನ್ನಿಷ್ಕೃತಿಕೃನ್ನೈವ ॥ ೮ ॥

---

ಪರ್ವತದಲ್ಲಿ ಸಮಸ್ತ ಗೈರಿಕಾದಿಧಾತುಗಳೂ ನಿಬಿಡವಾಗಿವೆ ಈ ಪರ್ವತದ ತುದಿಯು ಆಕಾಶವನ್ನು ನೋಕುವಂತೆ ಅತ್ಯಂತ ಉನ್ನತವಾಗಿದ. ಆ ಬೆಟ್ಟದ -ಮಧ್ಯಭಾಗದಲ್ಲಿ ಮೂರು ಎತ್ತರವಾದ ಶಿಖರಗಳಿವೆ ಆ ಆಕಾಶಮಾರ್ಗದಲ್ಲಿರುವ ಆ ಮೂರು ಶಿಖರ ಗಳೂ ಬ್ರಹ್ಮ ಮತ್ತು ಸೂರ್ಯ, ಚಂದ್ರರ ವಾಸಸ್ಥಳವಾಗಿವ ಅವರಲ್ಲೊಂದು ಶಿಖ ರವು ಚಿನ್ನದಿಂದಲೂ, ಮತ್ತೊಂದು ಬೆಳ್ಳಿಯಿಂದಲೂ, ಬೇರೊಂದು ಸಮಸ್ತ ರತ್ನ ಗಳಿಂದಲೂ ಮಾಡಲ್ಪಟ್ಟಿದಾಗಿದ ಮಧ್ಯದಲ್ಲಿರುವ ಸರ್ವರತ್ನಮಯವಾದ ಶಿಖರ ದಲ್ಲಿ ಬ್ರಹ್ಮನ ಮನೆಯಿದೆ ಚಿನ್ನದ ಶಿಖರದಲ್ಲಿರುವ ಸ್ವರ್ಣಮಯ ಗೃಹವೇ ಸೂರ್ಯನ ವಾಸಸ್ಥಾನ ಬೆಳ್ಳಿಯ ಮನೆಯೇ ಚಂದ್ರನ ವಾಸಗೃಹ. ಶೈಲರಾಜ ನಾದ ತ್ರಿಕೂಟ ಪರ್ವತ ರಾಜನಂತಿರುವ ಈ ಮಹಾಪರ್ವತದಲ್ಲಿ ವಿವಿಧ ರತ್ನದ ಕೊಂಬೆಗಳುಳ್ಳ ಮರಗಳು ಯಾವಾಗಲೂ ತುಂಬಿರುತ್ತವೆ ಆ ಪರ್ವತವು ಕೃತಘ್ನರ (ಮಾಡಿದ ಉಪಕಾರವನ್ನು ಮರೆಯುವವ) ದೃಷ್ಟಿಗಾಗಲೀ, ಘಾತುಕರ ಕಣ್ಣಿಗಾಗಲೀ, ನಾಸ್ತಿಕರ (ಪರಲೋಕವೂ ದೇವರೂ ಇಲ್ಲವೇ ಇಲ್ಲವೆಂದು ವಾದಿಸುವವರು) ನೇತ್ರ ಗಳಿಗಾಗಲೀ, ಮಹಾಪಾಪಿಗಳ ನಯನಗಳಿಗಾಗಲೀ ಗೋಚರವಾಗುವುದಿಲ್ಲ ಅಂತಹ ಮಹಾಪರ್ವತದ ತಪ್ಪಲಿನ ಹಿಂಭಾಗದಲ್ಲಿ ಒಂದು ತಾವರೇ ಕೊಳವಿದೆ

ಆ ತಾವರಸ ಸರೋವರದೊಳ್ ಸರ್ವದಾ ಕಮಲಪುಷ್ಪಗಳು ವಿಕಸಿತವಾಗಿ ಶೃಂಗಾರವನ್ನುಂಟುಮಾಡುತ್ತಿರುವುವು. ಮತ್ತಾಸರಸಿಯೊಳ್ ರಾಜಹಂಸ-ಕಾರಂಡ

ಮೀನಚ್ಛಿನ್ನಾಭ್ರಶಕಲಸ್ಫಟಿಕಲ್ಹಾರತಾರಕಂ ।
ಮಹಾಕುಮುದರಾತ್ರೀಶಂ ದ್ವಿತೀಯಮಿವ ಚಾಂಬರಂ ॥ ೯ ॥

ಉತ್ಫುಲ್ಲಪದ್ಮರಜಸಾ ಮಧುಪೈಃ ಪರಿಪಿಂಜರೈಃ ।
ಸಮಂತಾದ್ವ್ಯಾಪ್ಯ ಸತ್ಪದ್ಮಂ ತಪನೀಯಸಮೈರಿವ ॥ ೧೦ ॥

ಚ್ಯುತೇನ ಪದ್ಮಾದ್ರಜಸಾ ಹಂಸೈಃ ಕೇಶರಮುಂಥನೈಃ ।
ವಾಯುನಾ ಭ್ರಾಮ್ಯಮಾಣೇನ ದುರ್ನಿಧಾವ್ಯೋದಕೋಂಬುಜಂ ॥ ೧೧ ॥

ಮಹಾಂತಃ ಪದ್ಮಿನೀಪತ್ರಾ ವಾಯುಪ್ರಸ್ತಾಭ್ರಶೀಕರೈಃ ।
ಯುಕ್ತಾ ಮುಕ್ತಾಫಲಾಕಾರೈರ್ಯತ್ರ ಭಾಂತಿ ಸಹಸ್ರಶಃ ॥ ೧೨ ॥

ಸ್ಫುತ್ಯಂತಿ ಕಮಲಾ ಯತ್ರ ಶಫರೀ ಸ್ಫುರಣಾಹತಾಃ ।
ಭ್ರಮರೋದ್ಗೀತಸಂಘೋಷೈ ರಸತ್ಸಾರಸನಾದಿಕಂ ॥ ೧೩ ॥

---

ವಾದಿ ಪಕ್ಷಿಗಳು ಸರ್ವದಾ ಸನ್ನಿಹಿತವಾಗಿರುವವು ಆ ಸರೋವರದ ನೀರಾದರೋ ಸತ್ಪುರುಷರ ಮನಸ್ಸಿನಂತೆ ಗಂಭೀರವಾಗಿಯೂ, ಸಜ್ಜನರ ಮನಸ್ಸಿನಂತೆ ನಿರ್ಮಲ ವಾಗಿಯೂ ಇರುವುದು. ಆ ಕೊಳದ ನೀರು ಬಹು ರುಚಿಕರವಾಗಿ ಬಹಳ ಪ್ರಾಣಿ ಗಳಿಗೆ ಉಪಕಾರವನ್ನುಂಟುಮಾಡುತ್ತಿರುವುದು ಈ ಕಾಸಾರವನ್ನು ನೋಡಿದರೆ ಎರಡನೇ ಆಕಾಶವೋ ಎಂಬಂತೆ ಪ್ರಕಾಶಮಾನವಾಗಿರುವುದು ಅದಂತೆಂದೊಡೆ — ಮೀನುಗಳೆಂಬ ಮೇಘಪಂಕ್ತಿಗಳಿಂದಲೂ ಬಿಲ್ಲಲ್ಲೀ ಅರಳಿದ ಕಲ್ಹಾರ ಪುಷ್ಪಗಳೆಂಬ ಮಿನುಮಿನುಗುವ ನಕ್ಷತ್ರಗಳಿಂದಲೂ. ಮಹಾಕುಮುದಪುಷ್ಪವೆಂಬ ಚಂದ್ರನಿಂದಲೂ ವಿರಾಜಿಸುತ್ತಲಿರುವೀ ಸರಸಿಯು, ಆಕಾಶೋಪಮವೆಂದು ಹೇಳಲೇನಡ್ಡಿಯುಂಟು! ಅರಳಿದ ತಾವರೇಹೂವಿನ ಹುಡಿಗಳಿಗೆ (ರಜಸ್ಸಿಗೆ) ಮುತ್ತಿರುವ ದುಂಬಿಗಳು ಎತ್ತೆ ತ್ತಲೂ ಹಾರಾಡುತ್ತಿರುವುವು ಇದನ್ನು ನೋಡಿದರೆ ತಪಸ್ವಿಗಳು ಭಗವತ್ಪಾದ-ಕಮಲ ರಜಸ್ಸಿಗೆ ಮನಸೋತು ಸುತ್ತಿಕೊಂಡಂತೆ ಕಾಣುತ್ತಿರುವುದು ಪದ್ಮಪುಷ್ಪಗಳಿಂದ ಜಾರಿ ಬಿದ್ದ ರಜಃಕಣಗಳನ್ನು ನೋಡಿ ಹಂಸಪಕ್ಷಿಗಳು ಹಾರಿಬಂದು ತಾವರೇದಂಟನ್ನು ಕಡೆದು ಇನ್ನೂ ಈ ಹೂಗಳಲ್ಲಿ ಎಷ್ಟು ರಜಃಕಣಗಳಿವೆಯೋ? ಎಂದು ಹುಡುಕಿ ನೋಡುತ್ತಿರುವುವು ಗಾಳಿ ಬೀಸಿಬೀಸಿದಂತೆಲ್ಲಾ ತಾವರೇಗಿಡಗಳೂ ಸಹ ಅತ್ತಿತ್ತ ಅಳ್ಳಾಡುತ್ತಿರುವುದನ್ನೂ ಆ ಕಮಲಪತ್ರಗಳ ವಿಸ್ತಾರವಾದ ಪತ್ರದ ಮೇಲೆ ತುಂಬಿದ ನೀರಿನ ಹನಿಗಳನ್ನು ನೋಡಿದರೆ ಸಾವಿರಾರು ಮುತ್ತಿನ ಮಣಿಗಳು ಆ ಸರೋವರದ

ಹಸಂತಮಿವ ಹಂಸೌಘೈರ್ನೃತ್ಯಂತಮಿವ ಚೋರ್ಮಿಭಿಃ ।
ಉದ್ಗೀತಮಿವ ಕುರ್ವಾಣಂ ಕಾರಂಡವರವೈಃ ಶುಭೈಃ ॥ ೧೪ ॥

ಮಧ್ಯೇತ್ವಗಾಧಂ ಚತುರಃ ಪ್ರತೀಹಾರೈರಿವೋದ್ಧತೈಃ ।
ಉತ್ಸಾರಯಂತಂ ಕಲ್ಲೋಲೈರ್ವಾಯುಕ್ಷಿಪ್ತದ್ರುಮೋದ್ಭವಾ ॥ ೧೫ ॥

ಭ್ರಮರಾಂತರಸಂಲೀನಕಲ್ಹಾರಕುಸುಮಾಕ್ಷಭಿಃ ।
ಪಶ್ಯಂತಮಿವ ಶೈಲಸ್ಯ ಶೃಂಗಾಣಾಂ ತನ್ಮಹೋಚ್ಛ್ರಯಂ ॥ ೧೬ ॥

ಯತ್ರಾತಿಶೀತಲಂ ತೋಯಂ ಲಘು ಸ್ವಾದು ಸುಧಾನಿಭಂ ।
ಅನ್ಯಚ್ಛೃಂಗಂ ಮನೋಹಾರಿ ಭೃಂಗನಾದನಿನಾದಿತಂ ॥ ೧೭ ॥

ತಸ್ಮಿನ್ಸರಸಿ ಮುಸ್ನಾತ್ವಾ ವಿರೂಪೋಽಂತರ್ಜಲೇಶಯಃ ।
ಹೂಹೂರ್ಜಗಾಮ ಗ್ರಾಹತ್ವಂ ಶಾಪಾದ್ವೈ ದೇವಲಸ್ಯ ತು ॥ ೧೮ ॥

---

ಪದ್ಮಪತ್ರಗಳ ಮೇಲೆ ರಾಶಿಮಾಡಲ್ಪಟ್ಟಿವೆಯೋ ಎಂಬಂತೆ ಕಾಣುತ್ತಲಿದ್ದುವು. ನೀರಿನೊಳಗಿನಿಂದ ಮೀನುಗಳು ಮೇಲಕ್ಕೆ ಬಂದು ಆ ತಾವರೇಗಿಡದ ಬುಡವನ್ನು ಅಲ್ಲಾಡಿಸುತ್ತಿರುವುದನ್ನು ನೋಡಿದರೆ ಸಾವಿರಾರು ಮಂದಿ ಸುಂದರಿಯರು ಈ ಸರೋವರದಲ್ಲಿ ಚಿತ್ರವಿಚಿತ್ರವಾಗಿ ನಾಟ್ಯಮಾಡುತ್ತಿರುವರೋ ಎಂಬಂತೆ ತೋರುತ್ತಿತ್ತು. ಮತ್ತು ಆ ತಾವರೇಹೂವಿನ ಸುವಾಸನೆಗಾಗಿ ಆ ಗಿಡದ ಮೇಲೆ ಹಾರಾಡುತ್ತಿರುವ ದುಂಬಿಗಳನ್ನು ನೋಡಿದರೆ ನಾಟ್ಯಗಾತಿಯರ ನಾಟ್ಯಕ್ಕೆ ತಕ್ಕ ಸಂಗೀತಗಾರರು ಇಲ್ಲಿ ಸೇರಿ ಗಾನಮಾಡುವಂತೆ ತೋರುತ್ತಲಿದೆ. ಹಂಸಪಕ್ಷಿಗಳು ಓಡಾಡುತ್ತಿರುವುದನ್ನು ನೋಡಿದರೆ, ಈ ಗೀತನೃತ್ಯಗಳಿಗೆ ಮನಸೋತು ಆನಂದದಿಂದ ಶುಭ್ರದಂತ ಪಂಕ್ತಿಗಳಿಂದ ನಗುತ್ತಿರುವಂತೆ ತೋರುತ್ತಲಿವೆ. ಆ ಸರೋವರದಲ್ಲಿ ಅಲೆಗಳು ಅತ್ತಿಂದಿತ್ತ ಇತ್ತಿಂದತ್ತ ಚಲಿಸುವುದನ್ನು ನೋಡಿದರೆ, ಗೀತನೃತ್ಯಗಳನ್ನು ನೋಡಿ ಈ ಅಲೆಗಳು ತಾವೂ ಕುಣಿಯುತ್ತಿರುವಂತೆ ಕಾಣುತ್ತಿವೆ. ಕಾರಂಡವ ಪಕ್ಷಿಗಳ ಧ್ವನಿಗಳನ್ನು ಕೇಳಿದರೆ ದೊಡ್ಡ ಸಂಗೀತಗಾರನ ಆಲಾಪನೆಯಂತೆ ತೋರುತ್ತಲಿದೆ. ವಾಯುವಿನಿಂದ ಹೊಡೆಯಲ್ಪಡುತ್ತಿರುವ ತೀರವೃಕ್ಷಗಳನ್ನು ನೋಡಿದರೆ ಬಾಗಿಲಲ್ಲಿ ನಿಂತ ಗಾವಲುಗಾರರು ಒಳಕ್ಕೆ ಇತರರನ್ನು ಬಿಡದೆ ಹೊಡೆದೋಡಿಸುವಂತೆ ಕಾಣುತ್ತದೆ.

ಈ ಸರೋವರದ ನೀರು ಬಹಳ ಶೀತಲವಾಗಿಯೂ, ಸ್ವಚ್ಛವಾಗಿಯೂ, ಅಮೃತದಂತೆ ಬಹು ಸಿಹಿಯಾಗಿಯೂ ಇದೆ. ಈ ನೀರಿನ ರುಚಿಗೂ ತಾವರೇಹೂವಿನ

ತಸ್ಮಿನ್ನೇವ ತಥಾ ಶೈಲೇ ಹಾಹಾ ಗಂಧರ್ವಸತ್ತಮಃ ।
ಬಭೂವ ಯೂಥಪೋ ಹಸ್ತೀ ಚಲತ್ಪರ್ವತಸನ್ನಿಭಃ ॥ ೧೯ ॥

ಅಥ ದಂತೋಜ್ಜ್ವಲವಪುಃ ಕದಾಚಿದ್ಗಜಯೂಥಪಃ ।
ಆಜಗಾಮ ಮಹೀಪಾಲ ಚೋತ್ಫುಲ್ಲಕಮಲಂ ಸರಃ ॥ ೨೦ ॥

ವಂಶದಂಡೈಃ ಸ ಕಲಭೈರ್ವೃತಶ್ಚೈವ ಕರೇಣುಭಿಃ ।
ವಾಸಯನ್ಮದಗಂಧೇನ ತಂ ತ್ರಿಕೂಟಂ ಮಹೀಧರಂ ॥ ೨೧ ॥

ಸ ಗಜೋಽಂಜನಸಂಕಾಶೋ ಮದಾಕುಂಚಿತಲೋಚನಃ ।
ಸಲೀಲಂ ಪಂಕಜವನೇ ಯೂಥಮಧ್ಯಗತೋ ವ್ರಜಂ ॥ ೨೨ ॥

ಗೃಹೀತಸ್ತೇನ ರೌದ್ರೇಣ ಗ್ರಾಹೇಣಾವ್ಯಕ್ತಮೂರ್ತಿನಾ ।
ಪಶ್ಯತಃ ಸರ್ವಯೂಥಸ್ಯ ಕ್ರೋಶತಶ್ಚಾತಿದಾರುಣಂ ॥ ೨೩ ॥

---

ಸುವಾಸನೆಗೂ ಬಹು ಎತ್ತರದ ತನಕ ಮತ್ತಿರುವ ಭೃಂಗಸಿಚಯುವನ್ನು ನೋಡಿದರೆ ಈ ಸರೋವರದಲ್ಲೂ ಸಹ ಬೇರೊಂದು ಶಿಖರವು ಎದ್ದಿರುವಂತೆ ತೋರುತ್ತದೆ ಇಂತಹ ವರ್ಣನಾತೀತವಾದ ಮನೋಹರವಾದ ಸರೋವರದಲ್ಲಿ ದೇವಲಋಷಿಯ ಶಾಪದಿಂದ ವಿರೂಪವನ್ನು ಧರಿಸಿದ ಹೂಹೂ ಎಂಬ ಹೆಸರಿನಶ್ರೇಗಂಧರ್ವಗಾಯಕನು ಈ ಸರೋವರದ ನೀರಿನಲ್ಲಿ ಮುಳುಗಿ ಅಲ್ಲಿ ಒಂದು ಮೊಸಳೆಯ ಹೊಟ್ಟೆಯಲ್ಲಿ ಹುಟ್ಟಿ ಮೊಸಳೆಯಾಗಿ ಬೆಳೆಯುತ್ತಲಿದ್ದನು.

೧೯-೨೮ ಅದೇ ಶೃಂಗವತ್ಪರ್ವತದಲ್ಲಿಯೇ ಹಾಹಾ ಎಂಬ ಹೆಸರಿನ ಗಂಧರ್ವ ನಾಯಕನೂ ಸಹ ದೇವಲ ಶಾಪಗ್ರಸ್ತನಾಗಿ ಒಂದು ಆನೆಯ ಸಲಗ (ಗುಂಪಿನ ಯಜಮಾನ) ನಾಗಿ ಹುಟ್ಟಿದನು, ಆ ಕಾಡಾನೆಯು ಓಡಾಡುವ ಬೆಟ್ಟದಂತೆ ಕಾಣುತ್ತಿತ್ತು ಅದರ ದಂತ (ಕೊಂಬು) ಗಳು ಉದ್ದವಾಗಿಯೂ ಉಜ್ವಲವಾಗಿಯೂ ಪ್ರಕಾಶಿಸುತ್ತಿದ್ದುವು. ಹೀಗೇ ಕೆಲವು ಕಾಲ ಕಳೆಯಲು ಆ ಆನೆಯು ತನ್ನ ಬಳಗದೊಡನೆ ಅಲ್ಲಿಂದಿಲ್ಲಿಗೆ ಓಡಾಡುತ್ತಾ ಆ ತಾವರೇಕೊಳದ ಬಳಿಗೆ ಅನೇಕ ಹೆಣ್ಣಾನೆಗಳ ಗುಂಪನ್ನೂ ಸಹ ಕೂಡಿಸಿಕೊಂಡು ಬಂತು ಆ ಆನೆಗಳು ತಮ್ಮ ಕಪೋಲದಲ್ಲಿ ಸುರಿಯುತ್ತಿರುವ ಮದೋದಕಗಳಿಂದ ಹೊರಟ ಗಂಧೋದಕದಿಂದ ಆ ಪರ್ವತ

**ಸ ಚಕಾರ ಮಹಾಯತ್ನಮಾತ್ಮನಃ ಪರಿಮೋಕ್ಷಣೇ ।**
**ಗ್ರಾಹೋಽಪಿ ಯತ್ನಮಾತಿಷ್ಠತ್ಕುಂಜರಾಕರ್ಷಣೇ ಮಹತ್ ॥ ೧೪ ॥**

**ಗ್ರಾಹೋಽಪಿ ಬಲಿನಂ ನಾಗಂ ನ ಶಶಾಕ ಮಹಾಂಭಸಿ ।**
**ಆಕ್ರಷ್ಟುಂ ನ ಚ ನಾಗೋಽಪಿ ತಥಾತ್ಮಾನಂ ವಿಮೋಕ್ಷಿತುಂ ॥ ೧೫ ॥**

**ವಿಸ್ಫೂರ್ಜ್ಯ ಚ ಯಥಾಶಕ್ತಿ ವಿಕೃಷ್ಯ ಚ ಮಹಾರವಾನ್ ।**
**ವ್ಯಥಿತಃ ಸ ನಿರುದ್ಯೋಗಃ ಪಶ್ಚಿಮಾಮಾಗತೋ ದಶಾಂ ॥ ೧೬ ॥**

**ಸ ತು ನಾಗವರಃ ಶ್ರೀಮಾನ್ನಾರಾಯಣಪರಾಯಣಃ ।**
**ಜಗಾಮ ಶರಣಂ ವಿಷ್ಣುಂ ತುಷ್ಟಾವ ಚ ಪರಂತಪಃ ॥ ೧೭ ॥**

ಪ್ರಾಂತ್ಯವನ್ನೆಲ್ಲಾ ಸುವಾಸನಾಯುಕ್ತವನ್ನಾಗಿ ಮಾಡಿದ್ದವು ಈ ಶಾಪಗ್ರಸ್ತನಾದ ಮದ್ದಾನೆಯಾದರೋ ಮದೋದಕವನ್ನು ಸುರಿಸುತ್ತಾ ತನ್ನ ಕಪ್ಪಿನಿಂದ ಕಾಡಿಗೆಯ ಬೆಟ್ಟವೋ ಎಂಬಂತೆ ತೋರುತ್ತಾ ಆ ಆನೆಗಳ ಗುಂಪನ್ನು ಬಿಟ್ಟು ಒಂಟಿಯಾಗಿ ಆಟವಾಡಿಕೊಂಡು ಈ ತಾವರೇಕೊಳದ ಬಳಿಗೆ ಬಂತು ಬಂದೊಡನೆ ಆ ಆನೆಯು ಆ ಕೊಳದೊಳಗಿಳಿದು ತನ್ನ ಮುಂದಿನೆರಡು ಕಾಲುಗಳನ್ನೂ ನೀರಿನಲ್ಲಿಟ್ಟುಕೊಂಡು ನಿಂತಿತು ಆರೀತಿ ನಿಂತಕೂಡಲೆ ಕೊಳದೊಳಗಿದ್ದ ಆ ಶಾಪಗ್ರಸ್ತಮಕರವು ಅದರ ಎರಡು ಕಾಲನ್ನೂ ಹಿಡಿದಳದು ತನ್ನ ಬಾಯಲ್ಲಿಟ್ಟು ನುಂಗಲಾರಂಭಿಸಿತು

ಹೊರಕ್ಕೆ ಕಾಣಿಸಿಕೊಳ್ಳದೆ ಮೊಸಳೆಯು ಒಳಗೇ ತನ್ನನ್ನೆಳೆಯುತ್ತಿದ್ದುದನ್ನು ನೋಡಿ ಆನೆಯು ಬಲು ಗಾಬರಿಯಾಗಿ ಪ್ರಾಣಭಯದಿಂದ ಕಾಲನ್ನು ಮೇಲಕ್ಕೆಳೆಯಲು ಆರಂಭಿಸಿತು. ಮೊಸಳೆಯು ನೀರಿನೊಳಕ್ಕೆಳೆಯಲಾರಂಭಿಸಿತು. ಹೀಗೆ ನಡೆದು ಬರುತ್ತಿರುವಾಗ ಆ ಆನೆಗೆ ಏನೂ ತೋರದೆ ತನ್ನ ಬಳಗಗಳ ಕಡೆ ನೋಡಿ ಕಿರಿಚಿಕೊಳ್ಳಲು (ಅಳಲು) ಆರಂಭಿಸಿತು ಆ ಕೂಗನ್ನು ಕೇಳಿದರೆ ಬಹು ಭಯವಾಗುತ್ತಿತ್ತು ಎಲ್ಲಾ ಆನೆಗಳೂ ಓಡಿ ಬಂದು ಅವನ್ನು ಹಿಂದಕ್ಕೆ ಜಗ್ಗಿ ಎಳೆದರೂ ಪ್ರಯೋಜನವಾಗಲಿಲ್ಲ ಆಗ ಆನೆಯು ಏನೂ ದಿಕ್ಕು ತೋರದಂತಾಗಿ ತನ್ನ ಪ್ರಾಣವು ಉಳಿಯಲಾರದೆಂದು ನಿರ್ಧರಿಸಿ ಎಷ್ಟು ಶಕ್ತಿಯನ್ನುಪಯೋಗಿಸಿ ಮೇಲಕ್ಕೆಳೆದರೂ, ಎಷ್ಟು ಭಯಂಕರವಾಗಿ ಕಿರಿಚಿದರೂ ವ್ಯರ್ಥವಾಗುತ್ತ ಬಂದು, ಮೊಸಳೆಯು ಎಳೆತವು ಹೆಚ್ಚಾಗುತ್ತ ಬಂದಹಾಗೆಲ್ಲಾ ಪೂರ್ವಜನ್ಮಸ್ಮರಣೆಯಿಂದ ಆ ಆನೆಯು ತಾನಿನ್ನು ಬದುಕಲಾರೆನೆಂದು ಯೋಚಿಸಿ ಜೀವ ಹೋಗುತ್ತಿದ್ದ ಆ ಕಾಲದಲ್ಲಿ,

ಗೃಹೀತ್ವಾ ಸ ಕರಾಗ್ರೇಣ ಸರಸಃ ಕಮಲೋತ್ತಮಂ ।
ನಿವೇದ್ಯ ಭಕ್ತ್ಯಾ ಕೃಷ್ಣಾಯ ಗಜಃ ಸ್ತೋತ್ರಮುದೀರಯತ್ ॥ ೨೮ ॥

॥ ಗಜ ಉವಾಚ ॥

ನಮೋನಮಃ ಕಾರಣವಾಮನಾಯ
ನಾರಾಯಣಾಯಾಸುರದಾರಣಾಯ ।
ಶ್ರೀಶಾರ್ಙ್ಗಚಕ್ರಾಸಿಗದಾಧರಾಯ
ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥ ೨೯ ॥

ಆದ್ಯಾಯ ವೇದನಿಲಯಾಯ ಮಹೋರಗಾಯ
ಸಿಂಹಾಯ ದೈತ್ಯನಿಲಯಾಯ ಚತುರ್ಭುಜಾಯ ।
ಬ್ರಹ್ಮೇಂದ್ರರುದ್ರಮುನಿಚಾರಣಸಂಸ್ತುತಾಯ
ದೇವೋತ್ತಮಾಯ ವರದಾಯ ನಮೋಽಚ್ಯುತಾಯ ॥ ೩೦ ॥

---

ಭಗವಂತನಾದ, ಆಪದ್ಬಾಂಧವನಾದ, ಅನಾಥರಕ್ಷಕನಾದ, ನಾರಾಯಣನೆ, ಗತಿಯೆಂದು ನಿರ್ಧರಿಸಿ ಪ್ರಾಣದಾಶೆಯನ್ನು ಸುತರಾಂ ತೊರೆದು, ಆ ಕಮಲ ಸರೋವರದಲ್ಲಿದ್ದ ಒಂದು ಅರಳಿದ ತಾವರೆಹೂವನ್ನು ಸೊಂಡಲಿನಿಂದ ಕಿತ್ತು ಪರಮಾತ್ಮನಾದ ಮಹಾವಿಷ್ಣುವಿಗೆ ಭಕ್ತಿಯಿಂದ ಅರ್ಚನೆಮಾಡಿ, ಮನುಷ್ಯರಂತೆ ಸ್ತೋತ್ರಮಾಡಲಾರಂಭಿಸಿತು

ಟಿಪ್ಪಣಿ —ಭಕ್ತರ ಪಾರಾಯಣಕ್ಕಾಗಿ ವ್ಯಾಸರು ಸ್ತುತಿಸಿರುವ ಈ ಗಜೇಂದ್ರಮೋಕ್ಷಸ್ತೋತ್ರವು ಇಲ್ಲಿ ಭಾಷಾಂತರಕಾರನ ಸುಕೃತ ಪರಿಪಾಕದಿಂದ ಲಿಖಿಸಲ್ಪಟ್ಟಿದೆ.

## ಗಜೇಂದ್ರಮೋಕ್ಷ ಸ್ತೋತ್ರಂ

(ನಿತ್ಯ ಪಾರಾಯಣೋಪಯುಕ್ತವಾದುದು)

ಗಜೇಂದ್ರನು ಪರಮಾತ್ಮನನ್ನು ಸ್ತೋತ್ರಮಾಡುತ್ತಾನೆ —

೨೯-೪೮ ಗಜೇಂದ್ರಮೋಕ್ಷದ ೨೦ ಶ್ಲೋಕಗಳ ಸ್ತೋತ್ರಾರ್ಥಸಿದು

೨೯ ಓ ಪರಮಾತ್ಮಾ! ವಾಮನಾವತಾರಿ! ನಾರಾಯಣ! ಅಸುರ ಭಯಂಕರ! ಶಂಕಚಕ್ರಗದಾಧಾರಿ! ಪುರುಷೋತ್ತಮ! ನಿನಗೆ ಅನೇಕ ಬಾರಿ ನಮಸ್ಕರಿಸುತ್ತೇನೆ! ನನಗೆ ಬಂದಿರುವ ಕಷ್ಟವನ್ನು ಪರಿಹರಿಸು

೩೦ ಓ ಆದಿಪುರುಷ! ವೇದನಿಲಯ! ಮಹೋರಗರೂಪ! ಸಿಂಹರೂಪ!

ನಾಗೇಂದ್ರಭೋಗಶಯನಾಸನಸುಪ್ರಿಯಾಯ
ಗೋಕ್ಷೀರಹೇಮಶುಕನೀಲಘನೋಪಮಾಯ ।
ಪೀತಾಂಬರಾಯ ಮಧುಕೈಟಭನಾಶನಾಯ
ಭಕ್ತಪ್ರಿಯಾಯ ವರದೀಪ್ತಸುದರ್ಶನಾಯ ॥ ೩೧ ॥

ನಾಭಿಪ್ರಜಾತಕಮಲಸ್ಥಚತುರ್ಮುಖಾಯ
ಕ್ಷೀರೋದಕಾರ್ಣವನಿಕೇತಯಶೋಧರಾಯ ।
ನಾನಾವಿಚಿತ್ರ ಮುಕುಟಾಂಗದಭೂಷಣಾಯ
ಸರ್ವೇಶ್ವರಾಯ ವಿಜಯಾಯ ನಮೋ ನರಾಯ ॥ ೩೨ ॥

ವಿಶ್ವಾತ್ಮನೇ ಪರಮಕಾರಣಕಾರಣಾಯ
ಫುಲ್ಲಾರವಿಂದವಿಪುಲಾಯತಲೋಚನಾಯ ।
ದೇವೇಂದ್ರಭಾವನಪರೀಕ್ಷಿತಲೋಚನಾಯ ।
ಯೋಗೀಶ್ವರಾಯ ವಿಜಯಾಯ ನಮೋ ವರಾಯ ॥ ೩೩ ॥

ವೈತ್ಯನಿಲಯ! ಚತುರ್ಭುಜ! ಬ್ರಹ್ಮೇಂದ್ರರುದ್ರ-ಮುನಿಚರಣಾದಿಗಳಿಂದ ಸಂಸ್ತುತನೇ! ದೇವೋತ್ತಮ! ವರದರಾಜ! ಅಚ್ಯುತ! ನಿನಗೆ ನಮಸ್ಕಾರ

೩೧. ಆದಿಶೇಷನೆಂಬ ಮಂಚದ ಮೇಲೆ ಮಲಗಿ ಸುಪ್ರಸನ್ನನಾಗಿರುವ ಮಹಾಪ್ರಭುವೇ! ಹಾಲಿನ ಬಣ್ಣದಂತೆಯೂ, ಚಿನ್ನದ ಬಣ್ಣದಂತೆಯೂ, ಗಿಣಿಯ ಬಣ್ಣದಂತೆಯೂ, ನೀಲಮೇಘ ವರ್ಣದಂತೆಯೂ, ಪೀತಾಂಬರದಂತೆಯೂ ಹೊಳೆಯುತ್ತಿರುವ ನನ್ನ ಧೊರೆಯೆ! ಮಧುಕೈಟಭರನ್ನು ವಧಿಸಿದ ಭಕ್ತಪ್ರಿಯನೇ! ಮಹಾತೇಜಃಪುಂಜವಾದ ಚಕ್ರಾಯುಧವನ್ನು ಧರಿಸಿರುವ ಪರಮಾತ್ಮನೇ! ನಿನಗೆ ನಮಸ್ಕಾರ

೩೨ ಸ್ವಾಮಿ! ಪರಮಾತ್ಮಾ! ನಿನ್ನ ಹೊಕ್ಕಳೆಂಬ ಕಮಲದಲ್ಲಿ ಬ್ರಹ್ಮನು ಜನಿಸಿದನು ನೀನು ಕ್ಷೀರಸಮುದ್ರದಲ್ಲಿ ಮನೆಮಾಡಿಕೊಂಡಿರುತ್ತೀಯೆ! ನೀನು ಚಿತ್ರವಿಚಿತ್ರವಾದ ಕಿರೀಟಾಂಗದಾದಿ ಭೂಷಣಗಳಿಂದ ಭೂಷಿತನಾಗಿದ್ದೀಯೆ! ನೀನೇ ಸರ್ವೇಶ್ವರನು, ನೀನೇ ವಿಜಯಿಯು, ನರನಂತೆ ಅವತಾರಮಾಡಿದ ನಿನಗೆ ನಮಸ್ಕಾರಮಾಡುತ್ತೇನೆ

೩೩ ಭಗವಂತ! ನೀನೇ ವಿಶ್ವಾತ್ಮಕನು! ಸಕಲ ಕಾರಣಕ್ಕೂ ಕಾರಣ

ಲೋಕಾಯನಾಯ ತ್ರಿದಶಾಯನಾಯ
ಬ್ರಹ್ಮಾಯಣಾಯಾತ್ಮಗುಣಾಯನಾಯ ।
ಧರ್ಮಾಯಣಾಯೈಕಜನಾಯನಾಯ
ಮಹಾವರಾಹಾಯ ಸದಾ ನತೋಽಸ್ಮಿ ॥ ೩೪ ॥

ಅಚಿಂತ್ಯಮವ್ಯಕ್ತಮನಂತರೂಪಂ
ನಾರಾಯಣಂ ಕಾರಣಮಾದಿದೇವಂ ।
ಯುಗಾಂತಶೇಷಂ ಪುರುಷಂ ಪುರಾಣಂ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೩೫ ॥

ಯಮಕ್ಷರಂ ಬ್ರಹ್ಮ ವದಂತಿ ಸರ್ವಗಂ
ನಿಶಮ್ಯ ಯಂ ಮೃತ್ಯುಮುಖಾತ್ಪ್ರಮುಚ್ಯತೇ ।
ತಮೀಶ್ವರಂ ದೃಪ್ತಮನುತ್ತಮೈರ್ಗುಣೈಃ
ಪರಾಯಣಂ ವಿಷ್ಣುಮುಪೈತಿ ಶಾಶ್ವತಂ ॥ ೩೬ ॥

---

ಸ್ವರೂಪನು, ಅರಳಿದ ಕಮಲದಂತೆ ನೇತ್ರಕಾಂತಿಯುಳ್ಳವನು ದೇವೇಂದ್ರನಿಂದ ಪದೇ ಪದೇ ಭಾವಗರ್ಭಿತವಾಗಿ ಸ್ತೋತ್ರಮಾಡಲ್ಪಡುತ್ತಿರುವವನು. ನೀನು ಯೋಗೀಶ್ವರನು, (ಯತ್ರಯೋಗೀಶ್ವರ ಕೃಷ್ಣಃ) ವಿಜಯನು, ಸರ್ವಶ್ರೇಷ್ಠನು, ಇಂತಹ ಪ್ರಭಾವಶಾಲಿಯಾದ ನಿನಗೆ ನಮಸ್ಕಾರ

೩೪ ಲೋಕರಕ್ಷಕಾ! ಆಪದ್ಬಾಂಧವಾ! ಲೋಕಗಳಿಗೆಲ್ಲಾ ನೀನೇ ಕಣ್ಣಿನಂತಿರುವವನು ನೀನೇ ತ್ರಿಲೋಕರಕ್ಷಕನು, ಬ್ರಹ್ಮನನ್ನು ಬೆಳಕಿಗೆ ತಂದವನು ನೀನೇ, ಆತ್ಮಗುಣಗಳಿಂದ ಲೋಕಸ್ಥಿತಿಗೆ ಕಾರಣನಾದವನು ನೀನೇ, ನೀನೇ ಧರ್ಮಸ್ವರೂಪನು, ಲೋಕೈಕ ವಿಭುವೂ ನೀನೇ, ಮಹಾವರಾಹರೂಪವನ್ನು ಧರಿಸಿದವನೂ ನೀನೇ, ಇಂತಹ ಲೀಲಾಮೂರ್ತಿಯಾದ ನಿನಗೆ ನಮಸ್ಕಾರ

೩೫ ಅಚಿಂತ್ಯನೂ, ಅವ್ಯಕ್ತನೂ, ಅನಂತರೂಪಿಯೂ ಆದ ನಾರಾಯಣನೇ, ಆದಿದೇವನೇ, ಲೋಕಕಾರಣನೇ, ಪುರಾಣಪುರುಷನೇ, ಪ್ರಳಯದಲ್ಲಿ ಒಬ್ಬನೇ ಒಬ್ಬನಾಗಿ ಉಳಿದು ಲೋಕವನ್ನು ನೋಡುತ್ತಿರುವ ಮಹಾನುಭಾವನೇ, ವಾಸುದೇವನೆ, ನಿನ್ನನ್ನು ಮರೆಹೊಕ್ಕಿದ್ದೇನೆ

೩೬ ಸ್ವಾಮಿ! ನೀನು ಅದೃಶ್ಯನು, ಅಚ್ಛೇದ್ಯನು, ಅನಾದ್ಯಂತ ರಹಿತನು,

ಕಾರ್ಯಕ್ರಿಯಾಕಾರಣಮಪ್ರಮೇಯಂ
ಹಿರಣ್ಯನಾಭಂ ಕನಕಾರವಿಂದಂ ।
ಮಹಾಬಲಂ ವೇದನಿಧಿಂ ಸುರೋತ್ತಮಂ
ವ್ರಜಾಮಿ ವಿಷ್ಣುಂ ಶರಣಂ ಜನಾರ್ದನಂ ॥ ೩೮ ॥

ವಿಚಿತ್ರಕೇಯೂರಮಹಾರ್ಹನಿಷ್ಕಂ
ರತ್ನೋತ್ತಮಾಲಂಕೃತಸರ್ವಗಾತ್ರಂ ।
ಪೀತಾಂಬರಂ ಕಾಂಚನಭಕ್ತಿಚಿತ್ರಂ
ಮಾಲಾಧರಂ ಕೇಶವಮಭ್ಯುಪೈಮಿ ॥ ೩೯ ॥

ಭವೋದ್ಭವಂ ವೇದವಿದಾಂ ವರಿಷ್ಠಂ
ಯೋಗಾತ್ಮನಾಂ ಸಾಂಖ್ಯವಿದಾಂ ವರಿಷ್ಠಂ ।
ಆದಿತ್ಯಚಂದ್ರಾಶ್ವಿವಸುಪ್ರಭಾವಂ
ಪ್ರಭುಂ ಪ್ರಪದ್ಯೇಽಚ್ಯುತಮಾತ್ಮಭೂತಂ ॥ ೪೦ ॥

---

ಮಹರ್ಷಿಗಳು ನಿನ್ನನ್ನು ಬ್ರಹ್ಮನಿಧಿಯೆಂದೂ ಸುರೇಶ್ವರನೆಂದು ಹೊಗಳುತ್ತಿರುವರು. ಅಂತಹ ಸನಾತನ ಪುರುಷನಾದ ವಾಸುದೇವನೇ! ನಿನ್ನನ್ನು ಶರಣುಹೊಕ್ಕಿದ್ದೇನೆ

೩೭. ಯಾವ ನಿನ್ನನ್ನು ವೇದಾಂತಿಗಳು ನಾಶರಹಿತನೆಂದೂ, ಪರಬ್ರಹ್ಮನೆಂದೂ ಹೇಳುತ್ತಿರುವರೋ, ಯಾವ ನಿನ್ನ ಮಹಿಮೆಯನ್ನು ತಿಳಿದವರು, ಮೃತ್ಯುಮುಖದಿಂದ ಬಿಡುಗಡೆ ಹೊಂದುವರೋ, ಅಂತಹ ಅತ್ಯುತ್ತಮಗುಣಗಳಿಂದ ಕೂಡಿದ ಶಾಶ್ವತ ಬ್ರಹ್ಮಮೂರ್ತಿಯನ್ನು ನಾನು ಮರೆಹೊಕ್ಕಿದ್ದೇನೆ

೩೮. ಕಾರ್ಯ ಕ್ರಿಯಾಕಾರಣಗಳಿಗೆಲ್ಲಾ ಕಾರಣನಾದವನೇ! ಓ ಹಿರಣ್ಯನಾಭನೇ! ಕನಕಾರವಿಂದದಂತೆ ಮುಖವುಳ್ಳವನೇ! ಮಹಾಬಲನೇ! ವೇದನಿಧಿಯೇ! ಸುರೋತ್ತಮನೇ! ಜನಾರ್ದನನೇ! ನಿನ್ನನ್ನೀಗ ಶರಣುಹೊಕ್ಕಿದ್ದೇನೆ ॥ ೧೦ ॥

೩೯-೪೦ ಸಕಲಾವಯವಗಳಲ್ಲಿಯೂ ವಿವಿಧ ವಿಚಿತ್ರಾಭರಣಗಳನ್ನು ಧರಿಸಿ ರಾರಾಜಿಸುತ್ತಿರುವ ಸುಂದರಮೂರ್ತಿಯೇ, ವೇದವೇದ್ಯನೇ, ಯೋಗಿಗಳಿಗೂ, ಸಾಂಖ್ಯರಿಗೂ ಮೆಚ್ಚಿ ವರಕೊಡುವ ಮಹಾನುಭಾವನೇ, ಸೂರ್ಯ, ಚಂದ್ರ, ಅಶ್ವಿನೀದೇವತೆಗಳು, ಅಷ್ಟವಸುಗಳೇ ಮುಂತಾದ ರೂಪಗಳಿಂದ ತೋರುತ್ತಿರುವ ಲೋಕೈಕಾತ್ಮನೇ, ನಿನ್ನನ್ನು ಮರೆಹೊಕ್ಕಿದ್ದೇನೆ

ಶ್ರೀವತ್ಸಾಂಕಂ ಮಹಾದೇವಂ ವೇದಗುಹ್ಯಮನುತ್ತಮಂ ।
ಪ್ರಪದ್ಯೇ ಸೂಕ್ಷ್ಮಮಚಲಂ ಭಕ್ತಾನಾಮಭಯಪ್ರದಂ ॥ ೪೧ ॥

ಪ್ರಭವಂ ಸರ್ವಲೋಕಾನಾಂ ನಿರ್ಗುಣಂ ಚ ಗುಣಾತ್ಮನಾಂ ।
ಪ್ರಪದ್ಯೇ ಮುಕ್ತಸಂಗಾನಾಂ ಯತೀನಾಂ ಪರಮಾಂ ಗತಿಂ ॥ ೪೨ ॥

ಭಗವಂತಂ ಸುರಾಧ್ಯಕ್ಷಮಕ್ಷರಂ ಪುಷ್ಕರೇಕ್ಷಣಂ ।
ಶರಣ್ಯಂ ಶರಣಂ ಭಕ್ತ್ಯಾ ಪ್ರಪದ್ಯೇ ಬ್ರಾಹ್ಮಣಪ್ರಿಯಂ ॥ ೪೩ ॥

ಬ್ರಹ್ಮಾದೇಶಂ ತ್ರಿಲೋಕೇಶಮಾದ್ಯಮೇಕಮನಾಮಯಂ ।
ಭೂತಾತ್ಮಾನಂ ಮಹಾತ್ಮಾನಂ ಪ್ರಪದ್ಯೇ ಮಧುಸೂದನಂ ॥ ೪೪ ॥

ಕ್ಷೇತ್ರಜ್ಞಂ ಪುರುಷಂ ವಿಷ್ಣುಂ ತ್ರಿಗುಣಾತೀತಮವ್ಯಯಂ ।
ನಾರಾಯಣಮಣೀಯಾಂಸಂ ಪ್ರಪದ್ಯೇ ಶರಣಂ ಹರಿಂ ॥ ೪೫ ॥

---

೪೧ ಶ್ರೀವತ್ಸವೆಂಬ ಮಚ್ಚೆಯನ್ನು ಧರಿಸಿದವನೇ, ಮಹಾದೇವನೇ, ವೇದಗುಹ್ಯನೇ, ಉತ್ತಮ ಪುರುಷನೇ, ಸೂಕ್ಷ್ಮರೂಪನೇ, ಅಚಲನೇ, ಭಕ್ತಾಭಯಪ್ರದನೇ, ನಿನ್ನನ್ನು ಮರೆಹೊಕ್ಕಿದ್ದೇನೆ || ೧೩ ||

೪೨ ಸರ್ವಲೋಕದ ಉತ್ಪತ್ತಿಗೂ ಕಾರಣನೇ, ನಿರ್ಗುಣನೇ, ಗುಣಾತ್ಮಕನೇ! ಮುಕ್ತಸಂಗನೆ, ಯತಿಗಳಿಗೆ ಪರಮಗತಿಯಾದವನೇ, ನಿನ್ನನ್ನು ಶರಣು ಹೊಂದಿದ್ದೇನೆ

೪೩ ಓ ಭಗವಂತ, ಸುರಾಧ್ಯಕ್ಷ, ಅಕ್ಷರ, ಪುಷ್ಕರೇಕ್ಷಣ, ಶರಣರಿಗೆ ಶರಣ್ಯನೇ ಬ್ರಾಹ್ಮಣಪ್ರಿಯನೇ, ನಿನಗೆ ಶರಣಾಗತನಾಗಿದ್ದೇನೆ || ೧೫

೪೪ ಓ ಬ್ರಹ್ಮಜನಕನೇ, ತ್ರಿಲೋಕೇಶ್ವರನೇ, ಆದಿಮೂರ್ತಿಯೇ, ಅನಾಮಯನೆ, ಭೂತಾತ್ಮನೇ, ಮಹಾತ್ಮನೇ, ಮಧುಸೂದನನೇ, ನಿನ್ನನ್ನು ನಂಬಿದೆನು

೪೫ ಎಲ್ಲಾ ಕ್ಷೇತ್ರಗಳಲ್ಲೂ ಇರುವವನೇ, ತ್ರಿಗುಣಾತೀತನೇ, ಅವ್ಯಯನೇ, ಸೂಕ್ಷ್ಮಕ್ಕಿಂತ ಸೂಕ್ಷ್ಮನೇ, ಹರೇ, ನಾರಾಯಣ, ಕಾಪಾಡು ಕಾಪಾಡು.

**ಏಕಾಯ ಲೋಕತಂತ್ರಾಯ ಪರತಃ ಪರಮಾತ್ಮನೇ ।**
**ನಮಃ ಸಹಸ್ರಶಿರಸೇ ಅನಂತಾಯ ಮಹಾತ್ಮನೇ ॥ ೪೬ ॥**

**ವರೇಣ್ಯಮನಘಂ ದೇವಮ್ಋಷಯೋ ವೇದಪಾರಗಾಃ ।**
**ಕೀರ್ತಯಂತ್ಯಭವಂ ಸರ್ವೇ ತಂ ಪ್ರಪದ್ಯೇ ಸನಾತನಂ ॥ ೪೭ ॥**

**ನಮಸ್ತೇ ಪುಂಡರೀಕಾಕ್ಷ ಭಕ್ತಾನಾಮಭಯಪ್ರದ ।**
**ಸುಬ್ರಹ್ಮಣ್ಯ ನಮಸ್ತೇಽಸ್ತು ತ್ರಾಹಿ ಮಾಂ ಶರಣಾಗತಂ ॥ ೪೮ ॥**

**॥ ಮಾರ್ಕಂಡೇಯ ಉವಾಚ ॥**

**ಭಕ್ತಿಂ ತಸ್ಯ ತು ಸಂಚಿತ್ಯ ನಾಗಸ್ಯಾನೋಘಸಂಸ್ತವಃ ।**
**ಪ್ರಿತಿಮಾನಭವದ್ರಾಜನ್ಸತ್ಯಶ್ಚಕ್ರಗದಾಧರಃ ॥ ೪೯ ॥**

**ಸಾನ್ನಿಧ್ಯಂ ಕಲ್ಪಯಾಮಾಸ ಗ್ರಾಹಂ ಚಕ್ರೇಣ ಮಾಧವಃ ।**
**ಮೋಕ್ಷಯಾಮಾಸ ಚ ಗಜಂ ಪಾಶೇಭ್ಯಃ ಶರಣಾಗತಂ ॥ ೫೦ ॥**

---

೪೬ ಲೋಕೈಕತಂತ್ರನೇ! ಪರಮಾತ್ಮನೇ! ಸಹಸ್ರಶೀರ್ಷನೇ! ಅನಂತನೇ! ಮಹಾತ್ಮನೇ! ನಿನ್ನನ್ನು ಮರೆಹೊಕ್ಕೆನ್ನೆ, ಸ್ವಾಮಿ ॥ ೧೮ ॥

೪೭ ಪರಮಾತ್ಮನಾದ ನಿನ್ನನ್ನು ವೇದಪಾರಂಗತರಾದ ಮಹರ್ಷಿಗಳು ವರೇಣ್ಯನೆಂದೂ, ಅನಘನೆಂದೂ, ದೇವಾದಿದೇವನೆಂದೂ ಹೊಗಳುತ್ತಾರೆ ನಿನಗೆ ಜನನಮರಣಗಳಿಲ್ಲವೆಂದು ಹೇಳುತ್ತಾರೆ ಇಂತಹ ಪ್ರತಿಭಾಶಾಲಿಯಾದ ಸನಾತನ ಮೂರ್ತಿಯೇ, ನಿನಗೆ ನಮಸ್ಕಾರ ॥ ೧೯ ॥

೪೮ ಓ ಪುಂಡರೀಕಾಕ್ಷಾ! ಭಕ್ತಾದಿಗಳಿಗೆ ಅಭಯಪ್ರದನೇ! ಸುಬ್ರಹ್ಮಣ್ಯಸ್ವಾಮಿಯೆ! ನಿನ್ನನ್ನು ಮರೆಹೊಕ್ಕಿದ್ದೇನೆ, ಕಾಪಾಡು

ಗಜೇಂದ್ರಮೋಕ್ಷದ ಕನ್ನಡ ಅರ್ಥ ಪೂರೈಸಿತು

೪೯-೫೩ ಆ ಗಜೇಂದ್ರನ ಭಕ್ತಿಪರವಾದ ಸ್ತುತಿಯನ್ನು ಕೇಳಿ, ಪರಮಾತ್ಮನಾದ ಭಕ್ತತ್ರಾಣಪರಾಯಣನಾದ ಮಹಾವಿಷ್ಣುವು ಒಹಳವಾಗಿ ಸುಪ್ರೀತನಾಗಿ ಶಂಖ-ಚಕ್ರಗದಾಧಾರಿಯಾಗಿ ಆ ಕೂಡಲೆ ಆ ಸರೋವರದ ಬಳಿಗೆ ಬಂದು ತನ್ನ ಚಕ್ರ

ಸ ಹಿ ದೇವಲಶಾಪೇನ ಹಾಹಾ ಗಂಧರ್ವಸತ್ತಮಃ ।
ಗಜತ್ವಮಭವತ್ತ್ಯಕ್ತ್ವಾ ಮೋಕ್ಷಂ ಪ್ರಾಪ್ಯ ದಿವಂ ಗತಃ ॥ ೫೧ ॥

ಗ್ರಾಹಾದ್ವಿಮುಕ್ತಃ ಸದ್ಯಸ್ತು ಗಜೋ ಗಂಧರ್ವತಾಂ ಗತಃ ।
ಗ್ರಾಹೋ ಗಂಧರ್ವತಾಂ ಪ್ರಾಪ್ತೋ ಯಃ ಕೃಷ್ಣೇನ ನಿಪಾತಿತಃ ॥ ೫೩ ॥

ತಸ್ಯಾಪಿ ದೇವಲಕೃತಃ ಶಾಪದೋಷೋಽಭವತ್ಪುರಾ ।
ಪ್ರೀತಿಮಾಂಸ್ತ್ರಾಯತೇ ವಿಷ್ಣುಃ ಸದ್ಯಃ ಸಂಸಾರಸಾಗರಾತ್ ॥ ೫೪ ॥

ಕ್ರುದ್ಧೋಽಪಿ ನಿಘ್ನನ್ ದೇವತ್ವಮರಾತೀನಾಂ ಪ್ರಯಚ್ಛತಿ ।
ತೌ ಚ ಸ್ವಂ ಸ್ವಂ ವಪುಃ ಪ್ರಾಪ್ಯ ಪ್ರಣಿಪತ್ಯ ಜನಾರ್ದನಂ ॥ ೫೫ ॥

---

ದಿಂದ ಆ ಮೊಸಳೆಯನ್ನು ಎರಡು ತುಂಡಾಗಿ ಕತ್ತರಿಸಿ ಗಜೇಂದ್ರನ ಕಾಲುಗಳನ್ನು ಬಿಡಿಸಿ ಶರಣಾಗತನಾದ ಆ ಭಕ್ತನಿಗೆ ಮೋಕ್ಷವನ್ನು ಕೊಟ್ಟನು ಆ ಕೂಡಲೆ ಆ ಆನೆಯು ದೇವಲಋಷಿಯ ಶಾಪದಿಂದ ಬಿಡುಗಡೆಹೊಂದಿ ಆ ಕೂಡಲೆ ಪೂರ್ವದ ಸ್ವರೂಪವನ್ನು ಧರಿಸಿ ಮಹಾವಿಷ್ಣುವನ್ನು ಸ್ತುತಿಸುತ್ತಾ ಸ್ವರ್ಗಲೋಕಕ್ಕೆ ಹೊರಟು ಹೋಯಿತು ಅದೇ ಮೇರೆ ವಿಷ್ಣುಚಕ್ರಹತವಾದ ಆ ಮೊಸಳೆಯೂ ಕೂಡ ಆ ದೇಹವನ್ನು ತ್ಯಾಗಮಾಡಿ ದಿವ್ಯರೂಪವನ್ನು ಧರಿಸಿ ಗಂಧರ್ವಲೋಕಕ್ಕೆ ಹೊರಟು ಈ ರೀತಿ ಇಬ್ಬರಿಬ್ಬರು ಗಂಧರ್ವರೂ ಶಾಪದಿಂದ ಬಿಡುಗಡೆ ಹೊಂದಿ ಪೂರ್ವದಂತೆ ಅಮರತ್ವವನ್ನು ಹೊಂದಿದರು ಯಾರ ವಿಷಯದಲ್ಲಿ ಪರಮಾತ್ಮನು ಅನುಗ್ರಹಮಾಡುವನೋ ಅಂಥವನನ್ನು ಸಂಸಾರಸಾಗರದಿಂದ ದಾಟಿಸಿ ಆ ಮಹಾಭಕ್ತನಿಗೆ ಸ್ವರ್ಗಸಾಮ್ರಾಜ್ಯವನ್ನು ಅನುಗ್ರಹಿಸುವನು.

೫೪-೫೫ ಭಗವಂತನಾದ ಮಹಾವಿಷ್ಣುವು ತನ್ನ ಶತ್ರುಗಳ ಮೇಲೆ ಕೋಪಿಸಿಕೊಂಡು ಯುದ್ಧರಂಗದಲ್ಲಿ ಸಂಹರಿಸಿದಾಗ್ಯೂ, ಅಂಥವರಿಗೂ ಸಹ ದೇವತ್ವವನ್ನನುಗ್ರಹಿಸಿ ಕಾಪಾಡುವನು. ಇದೇ ಮೇರೆ ಗಜರಾಜನಿಗೆ ಅಪರಾಧಮಾಡಿದ ಮೊಸಳೆಯನ್ನೂ, ಭಕ್ತಗಜೇಂದ್ರನನ್ನೂ ಸಮದೃಷ್ಟಿಯಿಂದ ಭಗವಂತನಾದ ಶ್ರೀಕೃಷ್ಣನು ಗಂಧರ್ವಲೋಕಕ್ಕೆ ಕಳಿಸುವುದರ ಮೂಲಕ ,ಭಕ್ತಪರಾಧೀನನೆಂಬ ಹೆಸರನ್ನು ಸಾರ್ಥಕಮಾಡಿಕೊಂಡನೆಂಬ ಈ ವಿಚಾರವು ಪೂರ್ವದಲ್ಲಿ ನನಗ ಆ ದೇವಾದಿದೇವ ನಿಂದಲೇ ತಿಳಿಸಲ್ಪಟ್ಟಿತಯ್ಯಾ ! ವಜ್ರರಾಜ !

ಗಂಧರ್ವಾಧಿಪತೀ ಶೀಘ್ರಂ ಪರಾಂ ನಿರ್ವೃತಿಮಾಗತೌ ।
ಇದಂ ಚೈವ ಮಹಾಬಾಹೋ ಪುರಾ ದೇವೋಽಭ್ಯಭಾಷತ ॥ ೫೫ ॥

ದೃಷ್ಟ್ವಾ ವಿಮುಕ್ತೌ ಗಜಗ್ರಾಹೌ ಭಗವಾನ್ಮಧುಸೂದನಃ ।
ಯೋಽಗ್ರಹೀನ್ನಾಗರಾಜಂ ಚ ಮಾಂ ಚೈವ ಪ್ರಣಿಧಾನವಾನ್ ॥ ೫೬ ॥

ಸ್ಮರಿಷ್ಯತಿ ಸರಶ್ಚೇದಂ ಯುವಯೋರ್ಮೋಕ್ಷಣಂ ತಥಾ ।
ಗುಲ್ಮಂ ಕೀಚಕವೇಣೂನಾಮಿಮಂ ಶೈಲವರಂ ತಥಾ ॥ ೫೭ ॥

ಅಶ್ವತ್ಥಂ ಭಾಸ್ಕರಂ ಗಂಗಾಂ ನೈಮಿಷಾರಣ್ಯಮೇವ ಚ ।
ಪ್ರಯಾಗಂ ಬ್ರಹ್ಮತೀರ್ಥಂ ಚ ದಂಡಕಾರಣ್ಯಮೇವ ಚ ॥ ೫೮

ಸಂಸ್ಮರಿಷ್ಯಂತಿ ಯೇ ಮರ್ತ್ಯಾಃ ಸಮ್ಯಕ್ಛ್ರೋಷ್ಯಂತಿ ಚಾಪಿ ಯೇ ।
ನ ತೇ ದುಃಸ್ವಪ್ನಪಾಪಸ್ಯ ಭೋಕ್ತಾರೋ ಮತ್ಪರಿಗ್ರಹಾತ್ ॥ ೫೯ ॥

ಸರ್ವಪಾಪೈರ್ವಿಮೋಕ್ಷ್ಯಂತಿ ಕಲ್ಯಾಣಾನಾಂ ಚ ಭಾಗಿನಃ ।
ಭವಿಷ್ಯಂತಿ ತಥಾ ಪುಣ್ಯಾಂ ಗತಿಂ ಯಾಸ್ಯಂತಿ ಮಾನವಾಃ ॥ ೬೦ ॥

---

೫೬ ಆ ಸಮಯದಲ್ಲಿ ನಾನು ಪರಮಾತ್ಮನ ಜತೆಯಲ್ಲಿಯೇ ಇದ್ದೆನು ಆ ರೀತಿ ಮುಕ್ತರಾದ ಆ ಗಂಧರ್ವಯುಗ್ಮರನ್ನು ಕುರಿತು ಸ್ವಾಮಿಯು ಇಂತು ಹೇಳಿದನು —

೫೭-೬೦ ಎಲೈ ಗಜೇಂದ್ರಮಕರರೇ! ಕೇಳಿರಿ ನೀವು ಪ್ರವೇಶಿಸಿದ ಈ ಸರೋವರವನ್ನೂ, ನಿಮಗೆ ನಾನು ಮೋಕ್ಷಕೊಟ್ಟ ವೃತ್ತಾಂತವನ್ನೂ, ಈ ಸರೋವರದ ತೀರದಲ್ಲಿರುವ ಪೊದೆ ಮತ್ತು ಬಿದಿರುಮೆಳೆಗಳನ್ನೂ, ಈ ಕುಲಾಚಲವನ್ನೂ, ಅರಳೀಮರವನ್ನೂ, ಸೂರ್ಯನನ್ನೂ, ಗಂಗಾನದಿ, ನೈಮಿಶಾರಣ್ಯ, ಪ್ರಯಾಗ, ಬ್ರಹ್ಮತೀರ್ಥ, ದಂಡಕಾರಣ್ಯ, ಇವುಗಳನ್ನು ಯಾರು ಪ್ರಾತಃಕಾಲದಲ್ಲೆದ್ದು ಸ್ಮರಿಸುವರೋ, ಓದುವರೊ, ಕೇಳುವರೋ ಇವರಲ್ಲರೂ ನನ್ನ ಅನುಗ್ರಹದಿಂದ ದುಸ್ವಪ್ನದೋಷವನ್ನು ಕಳೆದುಕೊಂಡು ತಾವು ಮಾಡಿದ ಸಕಲ ಪಾಪಗಳನ್ನೂ ಪರಿಹಾರಮಾಡಿಕೊಂಡು ಶುಭಫಲಗಳನ್ನು ಹೊಂದುತ್ತಾರೆ. ಮತ್ತು ಈ ಲೋಕವನ್ನು ಬಿಟ್ಟು ಹೋದಾಗ ಪುಣ್ಯಲೋಕಗಳಲ್ಲಿ ವಾಸಮಾಡುತ್ತಾರೆ ಅವರಿಗಾಗುವ ದುಸ್ವಪ್ನಗಳೆಲ್ಲಾ ಸುಸ್ವಪ್ನಗಳಾಗಿಯೇ ಪರಿಣಮಿಸಿ ಶುಭ ಫಲವನ್ನೇ ಕೊಡುತ್ತವೆ.

**ದುಃಸ್ವಪ್ನಂ ಚ ನೃಣಾಂ ತೇಷಾಂ ಸುಸ್ವಪ್ನತ್ವಂ ಪ್ರಯಾಸ್ಯತಿ ।**
**ಕೌರ್ಮ್ಯಂ ಮಾತ್ಸ್ಯಂ ಚ ವಾರಾಹಂ ವಾಮನಂ ತಾರ್ಕ್ಷ್ಯಮೇವ ಚ॥ ೬೧ ॥**

**ನಾರಸಿಂಹಂ ತಥಾ ರೂಪಂ ಸೃಷ್ಟಿಪ್ರಲಯಕಾರಕಂ ।**
**ಏತಾನಿ ಪ್ರಾತರುತ್ಥಾಯ ಸಂಸ್ಮರಿಷ್ಯಂತಿ ಯೇ ನರಾಃ ॥ ೬೨ ॥**

**ಸರ್ವಪಾಪೈರ್ವಿಶುದ್ಧಾಸ್ತೇ ಯಾಸ್ಯಂತಿ ಪರಮಾಂ ಗತಿಂ ।**
**। ಮಾರ್ಕಂಡೇಯ ಉವಾಚ ॥**
**ಏವಮುಕ್ತ್ವಾ ತು ರಾಜೇಂದ್ರ ದೇವದೇವೋ ಜನಾರ್ದನಃ ॥ ೬೩ ॥**

**ಅಸ್ಪೃಶದ್ಗಜಗಂಧರ್ವಂ ಗ್ರಾಹಗಂಧರ್ವಮೇವ ಚ ।**
**ತೇನ ಸ್ಪೃಷ್ಟೌ ತು ತೌ ಸದ್ಯೋ ದಿವ್ಯಮಾಲ್ಯಾಂಬರಾನ್ವಿತೌ ॥ ೬೪ ॥**

**ವಿಮಾನೇಽಭಿಮತೇ ಪ್ರಾಪ್ತೇ ಜಗ್ಮತುಸ್ತ್ರಿದಶಾಲಯಂ ।**
**ತತ್ರ ದೇವಪತಿಃ ಕೃಷ್ಣೋ ಮೋಕ್ಷಯಿತ್ವಾ ಗಜೋತ್ತಮಂ ॥ ೬೫ ॥**

---

೬೧-೬೨  ಕೂರ್ಮ, ಮತ್ಸ್ಯ, ವರಾಹ, ನಾರಸಿಂಹ, ಗರುಡನೇ ಮುಂತಾದ ಅವತಾರಗಳ ಕಥೆಯನ್ನು ಯಾರಾದರೆ ಬೆಳಿಗ್ಗೆ ಎದ್ದು ಸ್ಮರಣೆಮಾಡುತ್ತಾರೆಯೋ ಅವರುಗಳೆಲ್ಲರೂ ಸಕಲ ಪಾಪಶೇಷಗಳನ್ನೂ ಕಳದುಕೊಂಡು ಪರಿಶುದ್ಧರಾಗಿ ಪರಮ ಪವಿತ್ರವಾದ ಗತಿಯಂ ಪೊಂದುವರು

೬೩-೭೫  ಮಾರ್ಕಂಡೇಯರು ಹೇಳುತ್ತಾರೆ —ಈ ರೀತಿಯಾಗಿ ಭಗವಂತನು ಗಜಗಂಧರ್ವನನ್ನೂ, ಮಕರಗಂಧರ್ವನನ್ನೂ ಹಸ್ತದಿಂದ ಸ್ಪರ್ಶಮಾಡಿದನು. ಮಹಾ ವಿಷ್ಣುವಿನ ಹಸ್ತಸಂಸ್ಪರ್ಶವಾದೊಡನೆಯೇ ಅವರಿಬ್ಬರೂ ದಿವ್ಯವಿಮಾನಗಳಲ್ಲಿ ಕುಳಿತು ಸ್ವರ್ಗಲೋಕಕ್ಕೆ ಹೊರಟುಹೋದರು  ಇಂತು ಗಜೇಂದ್ರನಿಗೆ ಮೋಕ್ಷವನ್ನು ಅನುಗ್ರಹಿಸಿ ಆ ಪರಮಾತ್ಮನು ಬಹು ರಹಸ್ಯವಾದ ವೇದಮಂತ್ರಗಳಿಂದ ಋಷಿಜನ ರಿಂದ ಸ್ತುತಿಸಲ್ಪಡುತ್ತಾ ವೈಕುಂಠಕ್ಕೆ ದುರ್ವಿಜ್ಞೇಯ ಗತಿಯಿಂದ ಪ್ರಯಾಣಮಾಡಿ ದನು  ಹೀಗೆ ನಡೆದ ಗಜೇಂದ್ರ ಮೋಕ್ಷವನ್ನು ಇಂದ್ರಾದಿ ಸಕಲ ದೇವತೆಗಳು ಬ್ರಹ್ಮನನ್ನು ಮುಂದ ಬಿಟ್ಟುಕೊಂಡು ಕೈಜೋಡಿಸಿಕೊಂಡು ನಿಂತು ನೋಡುತ್ತ ಲಿದ್ದರು

ಮೇಲೆ ಹೇಳಿದ ಗಜೇಂದ್ರಮೋಕ್ಷ ವೃತ್ತಾಂತವೆಂಬ ಪುಣ್ಯ ಚರಿತ್ರೆಯನ್ನು

ಋಷಿಭಿಃ ಸ್ತೂಯಮಾನಸ್ತು ಗುಹ್ಯೈರ್ವೇದಪದಾಕ್ಷರೈಃ ।
ಗತಃ ಸ ಭಗವಾನ್ವಿಷ್ಣುರ್ದುರ್ವಿಜ್ಞೇಯಗತಿರ್ವಿಭುಃ ॥ ೬೬ ॥

ಗಜೇಂದ್ರಮೋಕ್ಷಣಂ ದೃಷ್ಟ್ವಾ ಸರ್ವೇ ಸೇಂದ್ರಪುರೋಗಮಾಃ ।
ಬ್ರಾಹ್ಮಣಾನಗ್ರತಃ ಕೃತ್ವಾ ಸರ್ವೇ ಪ್ರಾಂಜಲಯೋಽಭವನ್ ॥ ೬೭ ॥

ಗಜೇಂದ್ರಮೋಕ್ಷಣಂ ಪುಣ್ಯಂ ಸರ್ವಪಾಪವಿಮೋಚನಂ ।
ಶ್ರಾವಯನ್ ಪ್ರಾತರುತ್ಥಾಯ ಸರ್ವಪಾಪೈಃ ಪ್ರಮುಚ್ಯತೇ ॥ ೬೮ ॥

ಶ್ರದ್ಧಯಾ ಹಿ ಯದುಶ್ರೇಷ್ಠ ಸ್ಮೃತೇನ ಕಥಿತೇನ ಚ ।
ಗಜೇಂದ್ರಮೋಕ್ಷಣೇನೈವ ದೀರ್ಘಮಾಯುರವಾಪ್ನುಯಾತ್ ॥ ೬೯ ॥

ಮಯಾ ತೇ ಕಥಿತಂ ದಿವ್ಯಂ ಪವಿತ್ರಂ ಪಾಪನಾಶನಂ ।
ಕೀರ್ತಯಸ್ವ ಮಹಾಬಾಹೋ ಮಹಾದುಃಸ್ವಪ್ನನಾಶನಂ ॥ ೭೦ ॥

ಕೀರ್ತ್ಯಮಾನಂ ಚ ವಿಪ್ರೇಭ್ಯಃ ಶೃಣು ಭಕ್ತ್ಯಾ ಯಥೋದಿತಂ ॥ ೭೧ ॥

---

ಬೆಳಿಗ್ಗೆ ಎದ್ದೊಡನೆ ಯಾರು ಕೇಳುತ್ತಾರೋ, ಅವರು ಸಕಲ ಪಾಪಗಳನ್ನೂ ಕಳೆದು ಕೊಂಡು ಪರಿಶುದ್ಧರಾಗುತ್ತಾರೆ ಯಾರು ಶ್ರದ್ಧೆಯಿಂದ ಈ ಕಥೆಯನ್ನು ಬರೆಯು ವರೋ ಅಥವಾ ಓದುವರೋ, ಅಥವಾ ಸ್ಮರಿಸುವರೋ ಅವರೆಲ್ಲರೂ ದೀರ್ಘಾಯು ಷ್ಮಂತರಾಗಿ ಬದುಕುತ್ತಾರೆ. ಎಲೈ ವಜ್ರರಾಜನೇ! ಈ ಪವಿತ್ರವಾದ ಚರಿತ್ರೆ ಯನ್ನು ನಿನಗೆ ತಿಳಿಸಿದ್ದೇನೆ ಈ ಕಥೆಯು ಎಂತಹ ಭಯಂಕರವಾದ ಕೆಟ್ಟ ಕನಸಿನ ದೋಷವನ್ನಾದರೂ ಪರಿಹರಿಸುವ ಶಕ್ತಿಯುಳ್ಳದ್ದು. ಇದನ್ನು ನೀನು ಬ್ರಾಹ್ಮಣ ರಿಂದ ಪಾರಾಯಣಮಾಡಿಸಿ ಅವರ ಮುಖದಿಂದ ಶ್ರವಣಮಾಡು (ಕೇಳು) ಆ ಗಜೇಂದ್ರಮೋಕ್ಷಕಾಲದಲ್ಲಿ ದಿವ್ಯದರ್ಶನವಿತ್ತ ವರದರಾಜನೂ, ಪದ್ಮನಾಭನೂ, ನಾರಾಯಣನೂ, ಪದ್ಮನಿಧಿಯೂ, ಸುರೇಶ್ವರನೂ, ಪುರಾಣಪುರುಷನೂ ಆದ ಮಹಾ ವಿಷ್ಣುವನ್ನು ಅಲ್ಲಿದ್ದ ಸಕಲರೂ ಭಕ್ತಿಯಿಂದ ನಮಸ್ಕರಿಸಿದನು

ಎಲೈ ವಜ್ರರಾಜನೇ ! ಕಥೆಯು ಬಹು ಪುಣ್ಯಕರವಾದುದು ಮನುಷ್ಯರು ಮಾಡಿದ ಸಕಲ ಪಾಪಕರ್ಮಗಳನ್ನೂ ನಾಶಪಡಿಸಿ ಸದ್ಗತಿಯನ್ನು ಕೊಡತಕ್ಕುದ್ದು ಭಯಂಕರ ದುಸ್ವಪ್ನವಾದಾಗ ಇದನ್ನು ಅಗತ್ಯವಾಗಿ ಕೇಳಬೇಕು ಪುಂಡರೀಕಾಕ್ಷ ನನ್ನು ಭಕ್ತಿಯಿಂದ ಸ್ತುತಿಸಿದ ಗಜೇಂದ್ರನು ದುಃಖದಿಂದ ದೂರನಾದನು ಅದರಂತೆ

ವರಂ ವರೇಣ್ಯಂ ವರಪದ್ಮನಾಭಂ
ನಾರಾಯಣಂ ಪದ್ಮನಿಭಂ ಸುರೇಶಂ ।
ತಂ ದೇವಗುಹ್ಯಂ ಪುರುಷಂ ಪುರಾಣಂ
ವವಂದಿರೇ ಬ್ರಹ್ಮವಿದಾಂ ವರಿಷ್ಠಾಃ ॥ ೭೨ ॥

ಏತತ್ಪುಣ್ಯಂ ಯದುಶ್ರೇಷ್ಠ ನರಾಣಾಂ ಪಾಪಕರ್ಮಿಣಾಂ ।
ದುಃಸ್ವಪ್ನದರ್ಶನೇ ಘೋರೇ ಶ್ರುತ್ವಾ ಪಾಪಾತ್ಪ್ರಮುಚ್ಯತೇ ॥ ೭೩ ॥

ಭಕ್ತಿಮಾನ್ಪುಂಡರೀಕಾಕ್ಷೇ ಗಜೋ ದುಃಖಾದ್ವಿಮೋಚಿತಃ ।
ತಥಾ ತ್ವಮಪಿ ರಾಜೇಂದ್ರ ಪ್ರಪದ್ಯ ಶರಣಂ ಹರಿಂ ॥ ೭೪ ॥
ವಿಮುಕ್ತಃ ಸರ್ವಪಾಪೇಭ್ಯಃ ಪ್ರಾಪ್ಸ್ಯಸೇ ಪರಮಾಂ ಗತಿಂ ॥ ೭೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಜೇಂದ್ರಮೋಕ್ಷಣಂನಾಮ
ಚತುರ್ನವತ್ಯಧಿಕ ಶತತಮೋಽಧ್ಯಾಯಃ.

ನೀನೂ ಸಹ ಆ ಮಹಾಪ್ರಭುವನ್ನು ಶರಣುಹೊಂದಿ ಸಕಲ ಪಾಪಗಳನ್ನೂ ಪರಿಹಾರ ಮಾಡಿಕೊಂಡು ಕೃತಾರ್ಥನಾಗು ಹೀಗೆಂದು ಗಜೇಂದ್ರಮೋಕ್ಷದ ಕಥೆಯನ್ನು ಮಾರ್ಕಂಡೇಯ ಮಹರ್ಷಿಗಳು ವಜ್ರರಾಜನಿಗೆ ನಿರೂಪಿಸಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪದಲ್ಲಿ ಗಜೇಂದ್ರಮೋಕ್ಷವೆಂಬ ಹೆಸರಿನ
ನೂರತೊಂಭತ್ತ ನಾಲ್ಕನೆಯ ಅಧ್ಯಾಯವು
ಮುಗಿದುದು.

श्रीः

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚನವತ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಭಗವನ್ಕೀದೃಶೀಂ ರಕ್ಷಾಂ ಸ ಚಕಾರ ದ್ವಿಜೋತ್ತಮಃ ।
ಯಥಾ ನಿರ್ಧೂತವೀರ್ಯೋಽಸೌ ನಿಸ್ತೇಜೋ ರಜನೀಚರಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಏಕಾಗ್ರಚಿತ್ತೋ ಗೋವಿಂದೇ ತಜ್ಜಪಂಸ್ತತ್ಪರಾಯಣಃ ।
ಸರ್ವದುಷ್ಟೋಪಶಮನಂ ಪ್ರವಿಷ್ಟೋ ವಿಷ್ಣುಪಂಜರಂ ॥ ೨ ॥

### ನೂರತೊಂಭತ್ತೈದನೆಯ ಅಧ್ಯಾಯವು.

೧ ವಜ್ರರಾಜನು ಪುನಃ ಪ್ರಶ್ನೆ ಮಾಡುತ್ತಾನೆ.—ಮಾರ್ಕಂಡೇಯ ಋಷಿಗಳೇ! ಶತ್ರುರೂಪರಾದ ರಾಕ್ಷಸರು ಬಲಹೀನರಾಗಿ ಹೊರಟುಹೋಗುವಂತೆ ಬ್ರಾಹ್ಮಣರು ಯಾವ ವಿಧವಾದ ರಕ್ಷಣೆಯನ್ನು ಮಾಡಬೇಕೆಂಬ ವಿಚಾರವನ್ನು ದಯಮಾಡಿ ತಿಳಿಸಿರಿ (ಮುಂದಿನ ಕಥೆಗೆ ಈ ಶ್ಲೋಕವು ಉಪೋದ್ಘಾತವೆಂದು ತಿಳಿದಿರಬೇಕು)

೨ ಮಾರ್ಕಂಡೇಯನು ಹೇಳುತ್ತಾನೆ – ಸಕಲ ದುಷ್ಟಾರಿಷ್ಟ ವಿಪತ್ಪರಿಹಾರವಾಗಬೇಕಾದರೆ ಏಕಾಗ್ರ ಮನಸ್ಸಿನಿಂದ ಗೋವಿಂದನಾಮವನ್ನು ಜಪಿಸುತ್ತಾ ಆ ಸ್ವಾಮಿಯ ಧ್ಯಾನದಲ್ಲಿಯೇ ಆಸಕ್ತನಾಗಿ ವಿಷ್ಣುಪಂಜರ (ರಕ್ಷಾಕವಚ) ವನ್ನಾಶ್ರಯಿಸಬೇಕು (ವಿಷ್ಣುಪಂಜರ ಸ್ತೋತ್ರವನ್ನು ಮಾಡಬೇಕು ಅಥವಾ ವಿಷ್ಣುವೆಂಬ ಪಂಜರದೊಳಗೆ ಹೋಗಿ ಸೇರಬೇಕೆಂದು ತಾತ್ಪರ್ಯ)

॥ ವಜ್ರ ಉವಾಚ ॥

ವಿಷ್ಣುಪಂಜರಮಿಚ್ಛಾಮಿ ಶ್ರೋತುಂ ಧರ್ಮಭೃತಾಂ ವರ ।
ಸದಾ ಸರ್ವಭಯೇಭ್ಯಸ್ತು ರಕ್ಷಾಯಾಂ ಪರಮಾ ಭವೇತ್ ॥ ೩ ॥

॥ ಮಾರ್ಕಂಡೇಯ ಉವಾಚ ॥

ತ್ರಿಪುರಂ ಜಘ್ನುಷಃ ಪೂರ್ವಂ ಬ್ರಹ್ಮಣಾ ವಿಷ್ಣುಪಂಜರಂ ।
ಶಂಕರಸ್ಯ ಯದುಶ್ರೇಷ್ಠ ರಕ್ಷಣಾಯ ನಿರೂಪಿತಂ ॥ ೪ ॥

ವಾಗೀಶೇನ ತು ಶಕ್ರಸ್ಯ ಬಲಂ ಹಂತುಂ ಪ್ರಯಾಸ್ಯತಃ ।
ತಸ್ಯ ಸ್ವರೂಪಂ ವಕ್ಷ್ಯಾಮಿ ತನ್ನಿಬೋಧ ಮಹೀಪತೇ ॥ ೫ ॥

ವಿಷ್ಣುಃ ಪ್ರಾಚ್ಯಾಂ ಸ್ಥಿತಶ್ಚಕ್ರೀ ವಿಷ್ಣುರ್ದಕ್ಷಿಣತೋ ಗದೀ ।
ಪ್ರತೀಚ್ಯಾಂ ಶಾರ್ಙ್ಗಭೃದ್ವಿಷ್ಣುರ್ವಿಷ್ಣುಃ ಖಡ್ಗೀ ಮಮೋತ್ತರೇ ॥ ೬ ॥

೩ ವಜ್ರರಾಜನು ಕೇಳುತ್ತಾನೆ —ಸಕಲ ಭಯಗಳನ್ನೂ ಕಷ್ಟಗಳನ್ನೂ, ಪರಿಹಾರಮಾಡುವ, ಸಕಲ ರಕ್ಷೆ (ರಕ್ಷಣೆ) ಗಳಲ್ಲೂ ಅತ್ಯಂತ ಶ್ರೇಷ್ಠವೆನಿಸಿದ ವಿಷ್ಣು ಪಂಜರ (ರಕ್ಷಾಕವಚ) ಸ್ತೋತ್ರವನ್ನು ಧರ್ಮಸ್ವರೂಪಿಯಾದ ನಿನ್ನ ಮುಖದಿಂದ ಕೇಳಬೇಕೆನ್ನುತ್ತೇನೆ

೪-೫ ಮಾರ್ಕಂಡೇಯನು ಹೇಳುತ್ತಾನೆ —ಈ ವಿಷ್ಣುಪಂಜರ (ರಕ್ಷಾ ಕವಚ) ವು ತ್ರಿಪುರಸಂಹಾರಕ್ಕಿಂತ ಪೂರ್ವದಲ್ಲಿ ತ್ರಿಪುರಾಸುರನನ್ನು ಸಂಹರಿಸಲು ಹೊರಟ ಶಂಕರನಿಗೆ ಬ್ರಹ್ಮನಿಂದ ರಕ್ಷಣಾರ್ಥವಾಗಿ ತಿಳಿಸಲ್ಪಟ್ಟಿತು ಮತ್ತು ಬಲಾ ಸುರನನ್ನು ಸಂಹರಿಸಲು ಹೊರಟ ಇಂದ್ರನಿಗೂ ಸಹ ಬ್ರಹ್ಮನಿಂದಲೇ ಇದು ನಿರೂಪಿಸ ಲ್ಪಟ್ಟಿತು ಅದರ ಸ್ವರೂಪವನ್ನು ಈಗ ನಿನಗೆ ಹೇಳುತ್ತೇನೆ, ಕೇಳು ರಾಜ ! ದೇವೇಂದ್ರ

೬-೧೭ ನನ್ನ ದೇಹದ ಪೂರ್ವದಿಕ್ಕಿನಲ್ಲಿ ಚಕ್ರಧಾರಿಯಾಗಿ ವಿಷ್ಣುವೂ, ದಕ್ಷಿಣದಲ್ಲಿ ಗದಾಧರನಾದ ವಿಷ್ಣುವೂ, ಪಶ್ಚಿಮದಲ್ಲಿ ಶಾರ್ಙ್ಗಧನುರ್ಧಾರಿಯಾದ ವಿಷ್ಣುವೂ, ಉತ್ತರದಲ್ಲಿ ಪಾಂಚಜನ್ಯ ಶಂಖವನ್ನು ಊದುತ್ತಿರುವ ವಿಷ್ಣುವೂ, ವಿದಿಕ್ಕುಗಳಲ್ಲಿ ಹೃಷೀಕೇಶನೂ, ಅವರ ನಡುವಂತರಗಳಲ್ಲಿ ಜನಾರ್ದನನೂ ನಿಂತು ನನ್ನನ್ನು ರಕ್ಷಿಸಲಿ

ಹೃಷೀಕೇಶೋ ವಿಕೋಣೇಷು ತಚ್ಛಿದ್ರೇಷು ಜನಾರ್ದನಃ ।
ಕ್ರೋಡರೂಪೀ ಹರಿರ್ಭೂಮೌ ಹಂತುಂ ಪ್ರೇತನಿಶಾಚರಾನ್ ॥ ೭ ॥

ಗದಾ ಚೇಯಂ ಸಹಸ್ರಾಂಶುರುದ್ವಮತ್ಪಾವಕೋಲ್ಬಣಾ ।
ರಕ್ಷೋಭೂತಪಿಶಾಚಾನಾಂ ಡಾಕಿನೀನಾಂ ಚ ಶಾತನೀ ॥ ೮ ॥

ಶಾರ್ಙ್ಗವಿಸ್ಫೂರ್ಜಿತಂ ಚೈವ ವಾಸುದೇವಸ್ಯ ಮದ್ರಿಪೂನ್ ।
ತಿರ್ಯಙ್ಮನುಷ್ಯಕೂಷ್ಮಾಂಡಪ್ರೇತಾದೀನ್ಹಂತ್ವಶೇಷತಃ ॥ ೯ ॥

ಖಡ್ಗಧಾರಾಮಲಜ್ಯೋತ್ಸ್ನಾ ನಿರ್ಧೂತಾ ಯೇ ಸಮಾಹಿತಾಃ ।
ತೇ ಯಾಂತು ಸೌಮ್ಯತಾಂ ಸದ್ಯೋ ಗರುಡೇನೇವ ಪನ್ನಗಾಃ ॥ ೧೦ ॥

ಯೇ ಕೂಷ್ಮಾಂಡಾಸ್ತಥಾ ಯಕ್ಷಾ ಯೇ ದೈತ್ಯಾ ಯೇ ನಿಶಾಚರಾಃ ।
ಪ್ರೇತಾ ವಿನಾಯಕಾಃ ಕ್ರೂರಾ ಮನುಷ್ಯಾ ಜಂಬುಕಾಃ ಖಗಾಃ ॥ ೧೧ ॥

ಭೂಮಿಯ ಮೇಲಿರುವ ನನ್ನನ್ನು ವರಾಹರೂಪೀ ಭಗವಂತನು, ನನಗೆ ವಿಶೇಷವಾಗಿ ಹೆದರಿಸುವ ಪ್ರೇತರನ್ನೂ, ರಾಕ್ಷಸರನ್ನೂ ತನ್ನ ಮೂರ್ತಿಯಿಂದ ಓ ಮೋಡಿಸಲಿ. ಸೂರ್ಯಾಗ್ನಿ ತೇಜಸ್ಸುಗಳಂತೆ ಸಿಗಸಿಗನೆ ಹೊಳೆಯುವ ಮಹಾವಿಷ್ಣುವಿನ ಗದೆಯು, ರಾಕ್ಷಸ ಪಿಶಾಚ, ಡಾಕಿನಿ, ಶಾಕಿನಿಗಳನ್ನೆಲ್ಲಾ ಸದೆಬಡಿದು ಅಟ್ಟಲಿ. ಶಾರ್ಙ್ಗಧನುಸ್ಸಿನ ಠೇಂಕಾರವು ನನ್ನ ಶತ್ರುಗಳಾದ ದುಷ್ಟ ಪ್ರಾಣಿಗಳನ್ನೂ ಭೂತ ಪ್ರೇತ ಪಿಶಾಚಾದಿಗಳನ್ನೂ ಹೆದರಿಸಿ ಓಡಿಸಲಿ. ಮಹಾವಿಷ್ಣುವಿನ ನಂದಕವೆಂಬ ಕತ್ತಿಯು ತನ್ನ ತೀಕ್ಷ್ಣವಾದ ಕಾಂತಿಯಿಂದ ಶತ್ರುಗಳನ್ನಂಜಿಸಿ, ಕ್ರೂರಿಗಳಾದ ಅವರನ್ನು ಶಾಂತರನ್ನಾಗಿಮಾಡಲಿ. ಭೂತರೂ, ದೈತ್ಯರೂ, ಪಿಶಾಚಿಗಳೂ, ಯಕ್ಷಕಾಂಗಳೂ, ಕಠಿನಚಿತ್ತರಾದ ಜನರೂ, ನರಿಗಳೂ, ಹದ್ದುಗಳೂ, ಸಿಂಹಾದಿ ಕ್ರೂರಮೃಗಗಳೂ, ಕ್ರೂರ ಸರ್ಪಗಳೂ ಕೃಷ್ಣನ ಧನುಷ್ಟಂಕಾರಕ್ಕೆ ಅಂಜಿ ನನ್ನ ಸಮೀಪವನ್ನು ಬಿಟ್ಟು ದಿಕ್ಕಾಪಾಲಾಗಿ ಓಡಿಹೋಗಲಿ ಮತ್ತು ನನ್ನ ಮುಂದೆ ಸಾಧು ಪ್ರಾಣಿಗಳಂತೆ ನಿಂತುಕೊಳ್ಳಲಿ. ನನ್ನ ಮನೋಬುದ್ಧ್ಯಾದಿಗಳ ಸದ್ವೃತ್ತಿಗಳನ್ನು ಹಾಳುಮಾಡ

ಸಿಂಹಾದಯೋ ಯೇ ಪಶವೋ ದಂದಶೂಕಾಶ್ಚ ಪನ್ನಗಾಃ ।
ಸರ್ವೇ ಭವಂತು ತೇ ಸೌಮ್ಯಾಃ ಕೃಷ್ಣಶಾರ್ಙರವಾಹತಾಃ ॥ ೧೨ ॥

ಚಿತ್ತವೃತ್ತಿಹರಾ ಯೇ ಮೇ ಯೇ ಜನಾಃ ಸ್ಮೃತಿಹಾರಕಾಃ ।
ಬಲೌಜಸಾಂ ಚ ಹಂತಾರಶ್ಛಾಯಾವಿಭ್ರಂಶಕಾಶ್ಚ ಯೇ ॥ ೧೩ ॥

ಯೇ ಚೋಪಭೋಗಹರ್ತಾರೋ ಯೇ ಚ ಲಕ್ಷಣನಾಶಕಾಃ ।
ಕೂಷ್ಮಾಂಡಾಸ್ತೇ ಪ್ರಣಶ್ಯಂತು ವಿಷ್ಣುಚಕ್ರರಯಾಹತಾಃ ॥ ೧೪ ॥

ಬುದ್ಧಿಸ್ವಾಸ್ಥ್ಯಂ ಮನಃಸ್ವಾಸ್ಥ್ಯಂ ಸ್ವಾಸ್ಥ್ಯಮೈಂದ್ರಿಯಕಂ ತಥಾ ।
ಮಮಾಸ್ತು ದೇವದೇವಸ್ಯ ವಾಸುದೇವಸ್ಯ ಕೀರ್ತನಾತ್ ॥ ೧೫ ॥

ಪೃಷ್ಠೇ ಪುರಸ್ತಾನ್ಮಮ ದಕ್ಷಿಣೋತ್ತರೇ
ವಿಕೋಣತಶ್ಚಾಸ್ತು ಜನಾರ್ದನೋ ಹರಿಃ ।

---

ಲೆಳಸುವ, ನನ್ನ ಸ್ಮರಣಶಕ್ತಿಯನ್ನು ನಾಶಪಡಿಸಲೆಳಸುವ, ನನ್ನ ಭೋಗಭಾಗ್ಯಗಳನ್ನೂ ಲಕ್ಷಣಗಳನ್ನೂ ನೀಗಲೆಳಸುವ ಭೂತಾದಿಗಳು ವಿಷ್ಣುಚಕ್ರದ ಏಟಿಗೆ ತುತ್ತಾಗಲಿ ನಾನು ಯಾವಾಗಲೂ ವಾಸುದೇವನ ನಾಮಸ್ಮರಣೆ ಮಾಡಿಕೊಂಡಿರುವಂತೆಯೂ ಆ ಸ್ಮರಣ ಮಹಿಮೆಯಿಂದ ಬುದ್ಧಿಸ್ವಾಸ್ಥ್ಯ, ಮನಃಸ್ವಾಸ್ಥ್ಯ, ಇಂದ್ರಿಯ ಸ್ವಾಸ್ಥ್ಯಗಳುಂಟಾಗಿ ಶಾಂತಿ ಸುಖವು ದೊರಕುವಂತೆ ಭಗವಂತನು ಅನುಗ್ರಹಿಸಲಿ ನನ್ನ ಹಿಂಭಾಗ ಮುಂಭಾಗಗಳಲ್ಲೂ, ದಕ್ಷಿಣೋತ್ತರ ದಿಕ್ಕುಗಳಲ್ಲೂ, ಸರ್ವ ದಿಗ್ವಿದಿಕ್ಕುಗಳಲ್ಲೂ ಮಹಾವಿಷ್ಣುವು ಅವಸ್ಥಾತ್ರಯದಲ್ಲೂ ಇದ್ದುಕೊಂಡು ಕಾಪಾಡಲಿ ಯಾರು ಪರಮಾತ್ಮನನ್ನು ಅನನ್ಯಭಕ್ತಿಯಿಂದ ಸ್ತೋತ್ರಮಾಡುತ್ತಾರೋ ಮತ್ತು ನಮಸ್ಕರಿಸುತ್ತಾರೋ ಅಂಥವರಿಗೆ ಎಂದೆಂದಿಗೂ ಚ್ಯುತಿಯೇ ಇಲ್ಲ ಪರಮಾತ್ಮನು ಜಗದ್ರೂಪನಾಗಿ ಎಲ್ಲೆಲ್ಲಿಯೂ ಕಾಣುತ್ತಲಿದ್ದಾನೆ ಅಂತಹ ಮಹಾನುಭಾವನಾದ

ತಮಿಾಡ್ಯಮಿಾಶಾನಮನಂತವಿಕ್ರಮಂ
ಜನಾರ್ದನಂ ಪ್ರಣಿಪತಿತೋ ನ ಸೀದತಿ ॥ ೧೬ ॥

ಯಥಾ ಪರಬ್ರಹ್ಮ ಹರಿಸ್ತಥಾ ಪರಂ
ಜಗತ್ಸ್ವರೂಪಂ ಚ ಸ ಏವ ಕೇಶವಃ ।
ಸತ್ಯೇನ ತೇನಾಚ್ಯುತನಾಮಕೀರ್ತನಾ-
ತ್ಪ್ರಣಾಶಮೇತು ತ್ರಿವಿಧಂ ಮಮಾಶುಭಂ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿಷ್ಣುಪಂಜರಸ್ತೋತ್ರವರ್ಣನಂನಾಮ
ಪಂಚನವತ್ಯಧಿಕ ಶತತಮೋಽಧ್ಯಾಯಃ.

ಮಹಾವಿಷ್ಣುವು ಅಚ್ಯುತ, ಕೇಶವಾದಿ ನಾಮಸ್ಮರಣೆಯಿಂದ ನಿಜವಾಗಿಯೂ ಪ್ರಸನ್ನ ನಾಗಿ ಮೂರು ವಿಧವಾದ ಅಮಂಗಳಗಳನ್ನೂ ಹರಣಮಾಡಿ ನನ್ನನ್ನು ಉದ್ಧಾರ ಮಾಡಲಿ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ವಿಷ್ಣುಪಂಜರ ಸ್ತೋತ್ರ ವರ್ಣನೆಯೆಂಬ
ಹೆಸರಿನ ನೂರತೊಂಭತ್ತೈದನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಣ್ಣವತ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಆತ್ಮರಕ್ಷಾ ತ್ವಯೋಕ್ತಾ ಮೇ ಸರ್ವಬಾಧಾವಿನಾಶಿನೀ ।
ಕೃಪಾನ್ವಿತೈಃ ಕಥಂ ಕಾರ್ಯಾ ಪರರಕ್ಷಾ ಭೃಗೂತ್ತಮ ॥ ೧ ॥

ಏತನ್ಮೇ ಸಂಶಯಂ ಛಿಂದಿ ತ್ವಂ ಹಿ ಜ್ಞಾನಮಯೋ ನಿಧಿಃ ।
ವೈಷ್ಣವಾನಿ ರಹಸ್ಯಾನಿ ಸರ್ವಾಣಿ ವಿದಿತಾನಿ ತೇ ॥ ೨ ॥

### ನೂರತೊಂಭತ್ತಾರನೆಯ ಅಧ್ಯಾಯವು.

೧-೨ ಅಯ್ಯ! ಮಾರ್ಕಂಡೇಯನೆ! ನೀನು ಇದುವರೆಗೆ ಮನುಷ್ಯರು ಆತ್ಮರಕ್ಷಣೆ ಮಾಡಿಕೊಳ್ಳುವ ಉಪಾಯವನ್ನು ಮಾತ್ರ ಹೇಳಿದ್ದೀಯೆ. ಇದು ತನಗೆ ಒದಗುವ ಕಷ್ಟಗಳನ್ನು ತಾನೊಬ್ಬನೇ ಪರಿಹಾರಮಾಡಿಕೊಂಡು ಸುಖವಾಗಿರುವ ಉಪಾಯವಾಯಿತೇ ಹೊರತು ಇತರರ ಉಪಕಾರಕ್ಕೆಂದಿಗೂ ಸಾಧಕವಾಗುವುದಿಲ್ಲ ಕರುಣಾಶಾಲಿಗಳಾದ ಜನರಿಂದ ಇತರರನ್ನು ರಕ್ಷಣೆಮಾಡುವುದು ಪುಣ್ಯಪ್ರದವೂ ಪರಹಿತ ಸಾಧನವೂ ಆಗಿರುವುದರಿಂದ ವಿಜ್ಞಾನನಿಧಿಯಾದ ನೀನು ಇತರರನ್ನು ಸಂರಕ್ಷಿಸುವ ಕ್ರಮವನ್ನು ನನಗೆ ತಿಳಿಸು. ನೀನು ಸಕಲ ವೈಷ್ಣವ ಧರ್ಮಗಳನ್ನೂ, ಆ ಧರ್ಮರಹಸ್ಯಗಳನ್ನೂ ತಿಳಿದುಕೊಂಡಿರುವುದರಿಂದ ನಿನ್ನನ್ನು ಕುರಿತು ಈ ಪ್ರಶ್ನೆಯನ್ನು ಮಾಡಿದ್ದೇನೆ

॥ ಮಾರ್ಕಂಡೇಯ ಉವಾಚ ॥

**ಸ್ತೋತ್ರೇಣಾನೇನ ಧರ್ಮಜ್ಞ ಕುಶಾಗ್ರೈರ್ಮಾರ್ಜಯನ್ನರಂ ।**
**ಉಪಸ್ಪೃಶ್ಯ ಶುಚಿಃ ಕುರ್ಯಾದ್ರಕ್ಷಾಂ ಪಾರ್ಥಿವಸತ್ತಮ ॥ ೩ ॥**

**ಸೋಪವಾಸೇನ ಸಂಪೂಜ್ಯ ದೇವದೇವಂ ಜನಾರ್ದನಂ ।**
**ಅಮೋಘೈಷಾ ಭವೇದ್ರಕ್ಷಾ ಕೃತಾ ನಾಸ್ತ್ಯತ್ರ ಸಂಶಯಃ ॥ ೪ ॥**

**ಯಥಾ ಕಥಂಚಿತ್ಕೃತ್ಯೈನಾಂ ನರೋ ಮೋಚಯತೇ ರುಜಃ ।**
**ಆಧಿವ್ಯಾಧಿಗೃಹೀತಾನಾಂ ರಕ್ಷೈಷಾ ಭೇಷಜಂ ಪರಂ ॥ ೫ ॥**

**ಓಂ ನಮಃ ಪರಮಾರ್ಥಾಯ ಪುರುಷಾಯ ಮಹಾತ್ಮನೇ ॥ ೬ ॥**

೩. ಮಾರ್ಕಂಡೇಯನು ಹೇಳುವನು -ಈಗ ನಾನು ಮುಂದೆ ಹೇಳುವ ವಿಷ್ಣುಸ್ತೋತ್ರವನ್ನು ಹೇಳಿಕೊಂಡು ದರ್ಭಾಗ್ರಗಳಿಂದ ಶುದ್ಧೋದಕವನ್ನೂ ಯಾರ ಮೇಲೆ ಮಂತ್ರಪೂತವಾದ ಆ ನೀರನ್ನು ವಿದ್ವಾಂಸರು(ಬ್ರಾಹ್ಮಣರು ಪ್ರೋಕ್ಷಿಸುವರೋ,) ಆ ರೀತಿ ಪ್ರೋಕ್ಷಣೆಮಾಡಿಸಿಕೊಂಡ ಮನುಷ್ಯನು ಭಗವಂತನಿಂದ ಸಂರಕ್ಷಿತ ನಾಗುತ್ತಾನೆ

೪-೫ ಉಪವಾಸದಿಂದಿದ್ದು ಬೆಳಗ್ಗೆ ಮಹಾವಿಷ್ಣುವನ್ನು ಪೂರ್ಣ ಕಲಶದಲ್ಲಿ ವಾಹಿಸಿ ಪೂಜೆಮಾಡಿ ಆ ಪವಿತ್ರೋದಕಗಳಿಂದ ಪ್ರೋಕ್ಷಣೆಮಾಡಿದರೆ, ಈ ಪ್ರೋಕ್ಷಣೆ ಮಾಡಿದರೆ ಈ ಪ್ರೋಕ್ಷಣಾಬಲದಿಂದ, ಈ ರಕ್ಷಾಸ್ತೋತ್ರ (ಕವಚ) ವು ಅಮೋಘ (ಸತ್ಯ) ವಾಗಲು ಏನೇನೂ ಸಂದೇಹವಿಲ್ಲ ಮನುಷ್ಯನಿಗೆ ಎಂತಹ ಅಸಾಧ್ಯ ಖಾಯಿಲೆ ಬಂದಿದ್ದಾಗ್ಯೂ, ಈ ರಕ್ಷಾಸ್ತೋತ್ರವು ಅವನನ್ನು ರಕ್ಷಣೆಮಾಡಿ ರೋಗ ರಹಿತನನ್ನಾಗಿಸುವುದು. ಆಧಿವ್ಯಾಧಿ (ಮನೋರೋಗ, ದೇಹರೋಗ) ಪೀಡಿತರಾದ ಜನರಿಗೆ ಈ ರಕ್ಷೆಯು ಔಷಧಪ್ರಾಯವೆಂದು ಖಂಡಿತವಾಗಿ ನಂಬು

## ಸರ್ವೋಪದ್ರವ ಪರಿಹಾರಕವಾದ ವಿಷ್ಣುರಕ್ಷಾ ಸ್ತೋತ್ರ ಪ್ರಾರಂಭಃ

೬-೫೮ ಟಿಪ್ಪಣಿ —ಪ್ರತಿದಿನವೂ ನಾವು ದಾರಿಯಲ್ಲಿ ಹೋಗುವಾಗ ನಮ್ಮ ಕಣ್ಣಿನಿಂದ ನಾನಾವಿಧವಾದ ದುಃಖಿಕ್ಕೊಳಗಾದ ಜನರನ್ನು ನೋಡುತ್ತೇವೆ ವೈದ್ಯಶಾಲೆ ಗಳಲ್ಲಿ ಬಹಳ ಭಯಂಕರ ರೋಗಗ್ರಸ್ತರಾಗಿ ವಿವಿಧಯಾತನೆಗಳಿಂದ ನರಳು ತ್ತಿರುವ ಜನರನ್ನು ನೋಡುತ್ತಲಿದ್ದೇವೆ ಈ ಎಲ್ಲಾ ರೋಗ

ಗಳಿಗೂ ಜನ್ಮಾಂತರಗಳಲ್ಲಿ ನಾವು ನಾವು ಮಾಡಿದ ಪಾಪಶೇಷಗಳೇ ಕಾರಣ ಈರೀತಿ ಜನ್ಮಾಂತರ ಪಾಪಶೇಷಗಳು ನಮ್ಮನ್ನು ನಾನಾರೋಗ ರೂಪಗಳಿಂದ ಪೀಡಿಸುತ್ತಲಿವೆ ಇದನ್ನು ಪರಿಹರಿಸಿಕೊಂಡು ಸೌಖ್ಯಪಡುವ ಆಶೆಯುಳ್ಳವರೂ, ಆರೋಗ್ಯಭಾಗ್ಯವನ್ನಾಶಿಸುವ ಜನರೂ ಔಷಧಸೇವನ, ದಾನ, ಜಪ, ಹೋಮಾರ್ಚನಾದಿಗಳನ್ನು ಮಾಡಬೇಕೆಂದು ಸಕಲ ಶಾಸ್ತ್ರಗಳೂ ಸಾರುತ್ತಲಿವೆ ಈರೀತಿ ರೋಗ ಚಿಕಿತ್ಸೆಗೆ ಅತ್ಯುತ್ತಮವಾದ ಔಷಧವೂ, ಸುರಿತ ವೈದ್ಯನೂ ಹೇಗೆ ಅತ್ಯವಶ್ಯಕವೋ ಅದೇ ನೇರೆ ಈ ಸಕಲ ರೋಗಗಳಿಗೂ, ಹೆಚ್ಚು ಹೇಳಿಯೇನು? ಮುಖ್ಯವಾಗಿ ಸಂಸಾರ (ಭವ) ರೋಗಕ್ಕೂ, ಭವರೋಗ ವೈದ್ಯನಾದ ಭಗವಂತನೇ ಗತಿಯೆಂದು ನಂಬಿ ಮಂತ್ರಶಾಸ್ತ್ರವೇತ್ತರಾದ ಬ್ರಾಹ್ಮಣರಿಂದ ಈ ವಿಧವಾದ ಮಂತ್ರರಕ್ಷೆ ಮಂತ್ರವೈದ್ಯ, ಮಂತ್ರಕವಚಗಳನ್ನು ಉಪಯೋಗಿಸಿಕೊಂಡು ಸಕಲ ಸಂಕಟಗಳಿಂದಲೂ ಪಾರಾಗಿ ದೀರ್ಘಾಯುಷ್ಮಂತರಾಗಿ, ಆಯುರಾರೋಗ್ಯ ಐಶ್ವರ್ಯಶಾಲಿಗಳಾಗಿ ಬದುಕಲೆಂದೇ ಪೂರ್ವದ ಮಹರ್ಷಿಗಳು ಇಂತಹ ಅಮೌಲ್ಯವಾದ ವೇದಶಾಸ್ತ್ರ ಪುರಾಣೇತಿಹಾಸಗಳೆಂಬ, ಎಂದೆಂದಿಗೂ ನಾಶವಾಗದ ಆಸ್ತಿಯನ್ನು ನಮಗೆ ಬಿಟ್ಟು ಹೋಗಿರುತ್ತಾರೆ ಇಂತಹ ಆಸ್ತಿಯೆನಿಸಿದ ಮಹಾನಿಧಿಸ್ವರೂಪಗಳಾದ ಮಹಾಪುರಾಣಗಳನ್ನು ಮಹಾರಾಜರು ಮಹಾಜನರ ಮಹೋಪಕಾರಕ್ಕಾಗಿ ಮನುಷ್ಯಲೋಕದಲ್ಲಿ ಮರ್ಮವಿಲ್ಲದೆ ಹಂಚಿಕೊಟ್ಟಿರುತ್ತಾರೆ. ಇಂತಹ ರಕ್ಷೆಗಳನ್ನು ಸಕಾಲದಲ್ಲಿ ಉಪಯೋಗಿಸಿಕೊಂಡು ಸಕಲರೂ ಸೌಖ್ಯವಾಗಿ ಬಾಳಲೆಂದು ಈ ಟಿಪ್ಪಣಿಯನ್ನು ಇಲ್ಲಿ ಬರೆಯಲಾಗಿದೆ

ಜನರೇ! ಸತ್ಯಸಮ್ಮತಗಳೂ, ಭಗವನ್ಮುಖೋದ್ಗತವಾದ ಅಮೃತವಾಣಿಗಳೂ ಎಂದೆಂದಿಗೂ ನಿಮ್ಮನ್ನು ಉದ್ಧಾರಮಾಡುವುದೆಂದು ನಂಬಿರಿ ಸಂಶಯಾತ್ಮಾ ವಿನಶ್ಯತಿ, ಎಂಬ ಮಾತನ್ನು ಮಂದಟ್ಟುಮಾಡಿಕೊಳ್ಳಿರಿ ಸಮಸ್ತ ಲೋಕವೂ ಸುಖಶಾಂತಿಗಳಿಂದ ಬಾಳಿ ಬದುಕಲಿ ಈಗ ಬರೆಯುತ್ತಿರುವ ವಿಷ್ಣುರಕ್ಷಾಸ್ತೋತ್ರವು ನಿಮಗೆ ದೊರೆತ ನಿಧಿಯೆಂದು ನಂಬಿ ಪಾರಾಯಣಮಾಡುತ್ತ ಬನ್ನಿರಿ ಅದರ ಅರ್ಥವು ಮುಂದೆ ವಿವರಿಸಲ್ಪಡುವುದು. ಅದನ್ನು ಓದಿರಿ ಅದರ ಯೋಗ್ಯತೆಯು ಎಂತಹುದೆಂಬುದು ನಿಮಗೇ ಮನವರಿಕೆಯಾಗುವುದು ಈ ಪುರಾಣದ ಲೇಖನವು ಬಹುವಾಗಿರುವುದರಿಂದ ಅಲ್ಲಲ್ಲಿ ಬರುವ, ಜನರ ಹಿತಾರ್ಥವಾಗಿ ರಾಜಾಜ್ಞೆಯಿಂದ ಬರೆಯಲ್ಪಡುತ್ತಿರುವ ಈ ಟಿಪ್ಪಣಿಯು, ಅಮೃತದ ಗುಳಿಗೆಗಳೆಂದು ನಂಬಿ ಲೋಕವು ಶಾಂತಿಯಿಂದ ಬಾಳಿ ಬದುಕಲಿ ಸರ್ವೇಶ್ವರನು ಸರ್ವ ಮಂಗಳವನ್ನು ದಯಪಾಲಿಸಲಿ

ಅರೂಪಬಹುರೂಪಾಯ ವ್ಯಾಪಿನೇ ಪರಮಾತ್ಮನೇ ।
ನಿಷ್ಕಲ್ಮಷಾಯ ಶುದ್ಧಾಯ ಧ್ಯಾತೃಪಾಪಹರಾಯ ಚ ॥ ೭ ॥

ನಮಸ್ಕೃತ್ಯ ಪ್ರವಕ್ಷ್ಯಾಮಿ ಯತ್ತತ್ಸಿಧ್ಯತು ಮೇ ವಚಃ ।
ವರಾಹನಾರಸಿಂಹಾಯ ವಾಮನಾಯ ಮಹಾತ್ಮನೇ ॥ ೮ ॥

ವಕ್ಷ್ಯಾಮಿ ತ್ವಾಂ ನಮಸ್ಕೃತ್ಯ ಯತ್ತತ್ಸಿಧ್ಯತು ಮೇ ವಚಃ ।
ತ್ರಿವಿಕ್ರಮಾಯ ರಾಮಾಯ ವೈಕುಂಠಾಯ ನರಾಯ ಚ ॥ ೯ ॥

ವಕ್ಷ್ಯಾಮಿ ತ್ವಾಂ ನಮಸ್ಕೃತ್ಯ ಯತ್ತತ್ಸಿಧ್ಯತು ಮೇ ವಚಃ ॥ ೧೦ ॥

## ಸರ್ವೋಪಯುಕ್ತವಾದ ವಿಷ್ಣುರಕ್ಷಾ ಸ್ತೋತ್ರದ ಕನ್ನಡ ಅರ್ಥಾನುವಾದವು.

೬-೭ ಓ ಪ್ರಣವಸ್ವರೂಪಿಯಾದ, ಪರಮಾತ್ಮನಾದ, ಪುರುಷೋತ್ತಮನಾದ ಪರಮಪುರುಷನೇ! ನಿನಗೆ ನಮಸ್ಕಾರ. ನಿನಗೆ ರೂಪವೇ ಇಲ್ಲ ಆದರೂ ನೀನು ಬಹು ರೂಪವನ್ನು ಧರಿಸಿದ್ದೀಯೆ! ಸಕಲ ಲೋಕಗಳನ್ನೂ ವ್ಯಾಪಿಸಿಕೊಂಡಿರುತ್ತೀಯೆ ನಿನ್ನಲ್ಲಿ ಯಾವ ದೋಷವೂ ಇಲ್ಲ ನಿನ್ನಂತಹ ಪರಿಶುದ್ಧನು ಮತ್ತೊಬ್ಬನಿಲ್ಲವೇ ಇಲ್ಲ ನಿನ್ನನ್ನು ಧ್ಯಾನಿಸಿದವರ ಪಾಪಗಳು ಆ ಕ್ಷಣವೇ ಓಡಿಹೋಗುತ್ತವೆ

೮-೧೦ ಸ್ವಾಮಿ! ಪರಮಾತ್ಮಾ! ನಿನಗೆ ಮೊದಲು ನಮಸ್ಕಾರಮಾಡಿ ಈ ರಕ್ಷಾಸ್ತೋತ್ರವನ್ನು ಹೇಳಲಾರಂಭಿಸುತ್ತೇನೆ ನನ್ನ ಬಾಯಿಯಿಂದ ಈಚೆಗೆ ಹೊರಬರುವ ಮಾತುಗಳೆಲ್ಲವೂ ಸತ್ಯವಾಗಿ ಪರಿಣಮಿಸಲಿ ವರಾಹ-ನಾರಸಿಂಹ-ವಾಮನಾದಿ ನಾನಾ ಅವತಾರಗಳನ್ನು ಮಾಡಿ ಲೋಕವನ್ನು ಕಾಪಾಡಿದ ಓ! ನನ್ನ ಮುಖ್ಯ ಪ್ರಾಣದೇವರೆ! ನಿನಗೆ ಇನ್ನೊಂದು ಬಾರಿ. ನಮಸ್ಕಾರಮಾಡುತ್ತೇನೆ ನನ್ನ ಬಾಯಿಂದ ಹೊರಟ ಮಾತೆಲ್ಲವೂ ನಿಜವಾಗಲಿ ಮಹಾನುಭಾವ, ತ್ರಿವಿಕ್ರಮ ಅವತಾರ, ರಾಮಾವತಾರ, ಕೃಷ್ಣಾವತಾರ, ಮನುಷ್ಯಾವತಾರವೇ ಮುಂತಾದ ಸಾವಿರಾರು ಅವತಾರಮಾಡಿ ಜಗತ್ತನ್ನು ಪೊರೆಯುತ್ತಿರುವ ಪರಮಾತ್ಮನೇ! ನನ್ನ ಬಾಯಿಂದ ಹೊರಡುವ ವಾಕ್ಯಗಳೆಲ್ಲವೂ ಸಿದ್ಧಿಹೊಂದಲಿ

ವರಾಹ ನಾರಸಿಂಹೇಶ ವಾಮನೇಶ ತ್ರಿವಿಕ್ರಮ ॥ ೧೧ ॥
ಹಯಗ್ರೀವೇಶ ಸರ್ವೇಶ ಹೃಷೀಕೇಶ ಹರಾಶುಭಂ ।

ಅಪರಾಜಿತ ಚಕ್ರಾದ್ಯೈಶ್ಚತುರ್ಭಿಃ ಪರಮಾಯುಧೈಃ ॥ ೧೨ ॥

ಅಖಂಡಿತಾನುಭಾವೈಸ್ತ್ವಂ ಸರ್ವದುಃಖಹರೋ ಭವ ।
ಹರಾಮುಕಸ್ಯ ದುರಿತಂ ದುಷ್ಕೃತಂ ದುರುಪೋಷಿತಂ ॥ ೧೩ ॥

ಮೃತ್ಯುಬಂಧಾತಿಭಯದಂ ದುರಿಷ್ಟಸ್ಯ ಚ ಯತ್ಫಲಂ ।
ಪರಾಪಧ್ಯಾನಸಹಿತಂ ಪ್ರಯುಕ್ತಂ ಚಾಭಿಚಾರಕಂ ॥ ೧೪ ॥

ಗರಸ್ಪರ್ಶಮಹಾರೋಗಪ್ರಯೋಗಂ ಜರಯಾಜರ ।
ಓಂ ನಮೋ ವಾಸುದೇವಾಯ ನಮಃ ಕೃಷ್ಣಾಯ ಶಾಂಙ್ಗಿಣೇ ॥ ೧೫ ॥

---

೧೧-೧೪ ಓ ವರಾಹಮೂರ್ತೇ, ನರಸಿಂಹಸ್ವಾಮಿಯೇ, ವಾಮನ, ತ್ರಿವಿಕ್ರಮ, ಹಯಗ್ರೀವ, ಸರ್ವೇಶ್ವರ, ಹೃಷೀಕೇಶ, ನನ್ನ ಪಾಪಗಳನ್ನು ಪರಿಹರಿಸು ದೇವ, ಓ ಅಪರಾಜಿತ, ಚಕ್ರವೇ ಮುಂತಾದ ನಾಲ್ಕು ಆಯುಧಗಳನ್ನೂ ನೀನು ನಿನ್ನ ನಾಲ್ಕು ಹಸ್ತಗಳಲ್ಲಿಯೂ ಧರಿಸಿ, ನೀನು ಪರಮಾನುಗ್ರಹದಿಂದ ಸಕಲ ದುಃಖಗಳನ್ನೂ ಪರಿಹಾರಮಾಡು ಇಲ್ಲಿ ಕಷ್ಟಕ್ಕೆ ಸಿಕ್ಕಿ ಸಂಕಟಪಡುತ್ತಿರುವ ಈಗ ನಮ್ಮಿಂದ ಮಾರ್ಜಿಸಲ್ಪಡುತ್ತಿರುವ ಯಜಮಾನನ, ಜನ್ಮಾಂತರ ಪಾಪಶೇಷರೂಪವಾದ, ಸಕಲ ರೋಗಗಳನ್ನೂ ಪರಿಹರಿಸಿ ಕಾಪಾಡು. ಇವನಿಗೆ ಮೃತ್ಯುಭಯವನ್ನು ತಪ್ಪಿಸು. ಇವನಿಗೆ ಬಂದಿರುವ ಅಂಜಿಕೆಗಳನ್ನೆಲ್ಲಾ ಓಡಿಸು ಹಿಂದೆ ಮಾಡಿದ ದುಷ್ಕರ್ಮ ಫಲವನ್ನು ಇವನು ಅನುಭವಿಸುತ್ತಿದ್ದಾನೆ ಈ ದುಷ್ಫಲರೂಪವಾದ ರೋಗ (ಪಾಪ) ಶೇಷವನ್ನು ನಿವಾರಣೆಮಾಡು ಇವನಿಗೆ ಯಾರಾದರೂ ಆಗದವರು ಮಾಟಕಾಟಗಳನ್ನು ಮಾಡಿಸಿದ್ದರೆ ಅಥವಾ ಮದ್ದು ಹಾಕಿದ್ದರೆ ಅಥವಾ ವಿಷವನ್ನು ಕುಡಿಸಿದ್ದರೆ, ಮಹಾ ರೋಗ ಬರಲೆಂದು ಮಾಟ (ಅಭಿಚಾರ) ಗಳನ್ನು ಮಾಡಿಸಿದ್ದರೆ, ಅಂಥವುಗಳನ್ನೆಲ್ಲಾ ಈಕ್ಷಣ ಹೊಡೆದೋಡಿಸು

೧೫-೨೦ ಓ ಪ್ರಣವರೂಪಿಯಾದ ವಾಸುದೇವ, ನಿನಗೆ ನಮಸ್ಕಾರವನ್ನು ಮಾಡುತ್ತೇನೆ. ಕೃಷ್ಣ, ಕಮಲನೇತ್ರ, ಕೇಶವ, ಚಕ್ರಧರ, ಪೀತಾಂಬರವರ ಧಾರೀ, ಸಮರಾಂಗಣದೊಳ್ ಶತ್ರುಗಳ ಮೇಲೆ ಚಕ್ರಪ್ರಯೋಗಮಾಡಿ ಗೆಲ್ಲುವ

ನಮಃ ಪುಷ್ಕರನೇತ್ರಾಯ ಕೇಶವಾಯಾದಿಚಕ್ರಿಣೇ ।
ನಮಃ ಕಮಲಕಿಂಜಲ್ಕಪೀತನಿರ್ಮಲವಾಸಸೇ ॥ ೧೬ ॥

ಮಹಾಹವರಿಪುಸ್ಕಂಧಪೃಷ್ಠಚಕ್ರಾಯ ಚಕ್ರಿಣೇ ।
ದಂಷ್ಟ್ರೋದ್ಧೃತಕ್ಷಿತಿಭೃತೇ ತ್ರಯೀಮೂರ್ತಿಮತೇ ನಮಃ ॥ ೧೭ ॥

ಮಹಾಯಜ್ಞವರಾಹಾಯ ಶೇಷಭೋಗೋರುಶಾಯಿನೇ ।
ತಪ್ತಹಾಟಕಕೇಶಾಯ ಜ್ವಲತ್ಪಾವಕಲೋಚನ ॥ ೧೮ ॥

ವಜ್ರಾಧಿಕನಖಸ್ಪರ್ಶದಿವ್ಯಸಿಂಹ ನಮೋಽಸ್ತು ತೇ ।
ಕಾಶ್ಯಪಾಯಾತಿಹ್ರಸ್ವಾಯ ಋಗ್ಯಜುಃಸಾಮರೂಪಿಣೇ ॥ ೧೯ ॥

ತುಭ್ಯಂ ವಾಮನರೂಪಾಯ ಕ್ರಮತೇ ಗಾಂ ನಮೋನಮಃ ।
ಪ್ರದಹಾಶೇಷದುಷ್ಟಾನಿ ಸರ್ವಪಾಪಫಲಾನಿ ವೈ ॥ ೨೦ ॥

ಮರ್ದಮರ್ದ ಮಹಾದಂಷ್ಟ್ರ ಮರ್ದಮರ್ದ ಚ ಯತ್ಫಲಂ ।
ನರಸಿಂಹಂ ಕರಾಲಸ್ಯ ದಂತಪ್ರಾಂತಾನಲೋಜ್ಜ್ವಲ ॥ ೨೧ ॥

---

ಚಕ್ರಧಾರಿಯೇ, ಕೋರೆಹಲ್ಲಿನಿಂದ ಭೂದೇವಿಯನ್ನು ಸಮುದ್ರದೊಳಗಿನಿಂದ ಮೇಲಕ್ಕೆತ್ತಿ ತಂದ ವರಾಹರೂಪನೇ, ಬ್ರಹ್ಮ-ವಿಷ್ಣು-ರುದ್ರರೂಪಮೂರ್ತ್ಯಾತ್ಮಕ ಪರಮಾತ್ಮನೇ, ಯಜ್ಞವರಾಹಸ್ವಾಮಿಯೇ, ಆದಿಶೇಷನ ಮೇಲೆ ಮಲಗಿ ನಿದ್ರಾವ್ಯಾಜವನ್ನು ನಟಿಸುವ ಲೀಲಾನಾಟಕರೂಪಿಯೇ, ಪುಟಕ್ಕೆ ಹಾಕಿದ ಚಿನ್ನದ ಎಳೆಗಳಂತಿರುವ ಕೂದಲುಗಳುಳ್ಳವನೇ, ವಜ್ರಾಯುಧದಂತಿರುವ ಉಗುರುಳ್ಳ ನನ್ನ ಮನೆದೇವರಾದ ಯೋಗಾನರಸಿಂಹಸ್ವಾಮಿಯೇ, ಋಗ್ಯಜುಸ್ಸಾಮ ವೇದಾತ್ಮಕನೇ, ಈ ಮೂರು ವೇದಗಳನ್ನೂ ಪಾರಾಯಣಮಾಡುತ್ತಾ ಚಿಕ್ಕ ಬ್ರಹ್ಮಚಾರಿಯಂತೆ ಕಾಣಿಸಿದ ವಾಮನಮೂರ್ತಿಯೇ, ಅದೇ ವಾಮನರೂಪದಿಂದ ಸ್ವರ್ಗಮರ್ತ್ಯ ಪಾತಾಳಗಳನ್ನು ಮೂರೇ ಹೆಜ್ಜೆಯಿಂದ ಅಳೆದ ತ್ರಿವಿಕ್ರಮಸ್ವಾಮಿಯೇ! ನಿನಗೆ ಸಾಷ್ಟಾಂಗ ನಮಸ್ಕಾರಮಾಡುತ್ತೇನೆ. ನಾನು ಮಾಡಿದ, ಈ ಯಜಮಾನನು ಮಾಡಿದ ಸಕಲ ಕೆಟ್ಟ ಕರ್ಮಗಳ ಫಲವನ್ನೂ ಈಗಲೇ ಸುಟ್ಟುಬಿಡೈ ಸ್ವಾಮಿಯೇ!

೨೧-೩೦ ಸ್ವಾಮಿ! ನಮ್ಮ ದುಷ್ಕರ್ಮಗಳೂ, ಜನ್ಮಾಂತರದ ಪಾಪಶೇಷಗಳೂ ರಾಶಿರಾಶಿಯಾಗಿ ಬಿದ್ದಿವೆ ಆ ಪಾಪವೆಂಬ ಗೊಬ್ಬರದ ರಾಶಿಗಳನ್ನೆಲ್ಲವನ್ನೂ

ಭಂಜಭಂಜ ನಿನಾದೇನ ದುಷ್ಟಾನ್ಭಕ್ತಾರ್ತಿನಾಶನ ।
ಋಗ್ಯಜುಃಸಾಮಗರ್ಭಾಭಿರ್ವಾಗ್ಭಿರ್ವಾಮನರೂಪಧೃಕ್ ॥ ೨೨ ॥

ಪ್ರಶಮಂ ಸರ್ವದುಃಖಾನಿ ನಯತ್ವೈತಸ್ಯ ಜನಾರ್ದನ ।
ಏಕಾಹಿಕಂ ದ್ವ್ಯಹ್ನಿಕಂ ಚ ತಥಾ ತ್ರಿದಿವಸಜ್ವರಂ ॥ ೨೩ ॥

ಚಾತುರ್ಥಿಕಂ ತಥಾತ್ಯುಗ್ರಂ ತಥೈವ ಸತತಜ್ವರಂ ।
ದೋಷೋತ್ಥಂ ಸನ್ನಿಪಾತೋತ್ಥಂ ತಥೈವಾಗಂತುಕಂ ಜ್ವರಂ ॥ ೨೪ ॥

ಶಮಂ ನಯತು ಗೋವಿಂದ ಛಿತ್ವಾಛಿತ್ವಾಸ್ಯ ವೇದನಾಂ ।
ನೇತ್ರದುಃಖಂ ಶಿರೋದುಃಖಂ ದುಃಖಂ ಚೋದರಸಂಭವಂ ॥ ೨೫ ॥

ಅನುಚ್ಛ್ವಾಸಮತಿಶ್ವಾಸಂ ಪರಿತಾಪಂ ಚ ವೇಪಥುಂ ।
ಗುದಘ್ರಾಣಾದಿರೋಗಾಂಶ್ಚ ಕುಷ್ಠರೋಗಂ ತಥಾ ಕ್ಷಯಂ ॥ ೨೬ ॥

ಕಾಮಲಾದೀಂಸ್ತಥಾ ರೋಗಾನ್ಪ್ರಮೇಹಾಂಶ್ಚಾತಿದಾರುಣಾನ್ ।
ಭಗಂದರಾತಿಸಾರಾಂಶ್ಚ ಮುಖರೋಗಂ ಸವಲ್ಗುಲಿಂ ॥ ೨೭ ॥

ಅಶ್ಮರೀಮೂತ್ರಕೃಚ್ಛ್ರಾಂಶ್ಚ ರೋಗಾನನ್ಯಾಂಶ್ಚ ದಾರುಣಾನ್ ।
ಯೇ ವಾತಪ್ರಭವಾರೋಗಾ ಯೇ ಚ ಪಿತ್ತಸಮುದ್ಭವಾಃ ॥ ೨೮ ॥

---

ಪುಡಿಪುಡಿಮಾಡು. ಓ ಮಹಾದಂಷ್ಟ್ರ, ಭಯಂಕರವದನ, ಅಗ್ನಿನೇತ್ರ, ಈ ನಮ್ಮ ಪಾಪರಾಶಿಗಳನ್ನು ಸುಡಲು ನೀನ್ನೊಂದಾವರ್ತಿ ಸಿಂಹನಾದಮಾಡಿ ದುಷ್ಟರನ್ನು ಹೆದರಿಸಿ ಬಲುದೂರ ಓಡಿಸಿಬಿಡು. ಈ ಯಜಮಾನನಿಗೆ ಬಂದಿರುವ ಸಕಲ ದುಃಖಗಳನ್ನೂ ಪರಿಹರಿಸು. ದಿನದಿನವೂ ಬರುವ ಜ್ವರ, ಎರಡು ದಿನದ ಜ್ವರ, ಮೂರರ ಜ್ವರ, ನಾಲ್ಕರ ಜ್ವರ, ಸಂತತ ಜ್ವರಗಳನ್ನೂ ಶಾಂತಮಾಡಿ ಆರೋಗ್ಯವನ್ನು ದಯಪಾಲಿಸು. ಸನ್ನಿಪಾತಜ್ವರ, ಆಗಂತುಕ ಜ್ವರಗಳನ್ನು ಕಣ್ಣಿಗೆ ಕಾಣಿಸದ ಹಾಗೆ ಅ ಆ ಬಾಧೆಗಳನ್ನು ಛೇದಿಸಿ ಕಾಪಾಡು. ಕಣ್ಣುನೋವು, ತಲೆನೋವು, ಹೊಟ್ಟೆನೋವು, ಉಬ್ಬಸ, ಅನುಚ್ಛ್ವಾಸ, ಅತಿಶ್ವಾಸ, ತಾಪ, ನಡುಕ, ಮೂಲವ್ಯಾಧಿ, ಕುಷ್ಠರೋಗ, ಕ್ಷಯರೋಗ, ಕಾಮಾಲೆ, ಮೇಹ, ಭಗಂದರ, ಅತಿಸಾರ, ಅದುರುರೋಗ, ಬಹು-ಮೂತ್ರ, ಮಧುಮೂತ್ರ, ಅರ್ಧಾಂಗವಾಯುವೇ ಮುಂತಾದ ಭಯಂಕರ ವಾತರೋಗಗಳು, ಪಿತ್ತರೋಗಗಳು, ಶ್ಲೇಷ್ಮ (ಕಫ) ರೋಗಗಳು, ಸನ್ನಿಪಾತ ರೋಗಗಳು,

ಕಫೋದ್ಭವಾಶ್ಚ ಯೇ ಕೇಚಿದ್ಯೇ ಕೇಚಿತ್ಸಾನ್ನಿಪಾತಿಕಾಃ ।
ಆಗಂತವಶ್ಚ ಯೇ ರೋಗಾ ಲೂತಾವಿಸ್ಫೋಟಕಾದಯಃ ॥ ೨೯ ॥

ತೇ ಸರ್ವೇ ಪ್ರಶಮಂ ಯಾಂತು ವಾಸುದೇವಾಪಮಾರ್ಜಿತಾಃ ।
ವಿಲಯಂ ಯಾಂತು ತೇ ಸರ್ವೇ ವಿಷ್ಣೋರುಚ್ಚಾರಣೇನ ಚ ॥ ೩೦ ॥

ಕ್ಷಯಂ ಗಚ್ಛಂತು ಚಾಶೇಷಾಸ್ತೇ ಚಕ್ರಾಭಿಹತಾ ಹರೇಃ ।
ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್ ॥ ೩೧ ॥

ನಶ್ಯಂತಿ ಸಕಲಾ ರೋಗಾಃ ಸತ್ಯಂಸತ್ಯಂ ವದಾಮ್ಯಹಂ ।
ಸ್ಥಾವರಂ ಜಂಗಮಂ ಚೈವ ಕೃತ್ರಿಮಂ ಚಾಪಿ ಯದ್ವಿಷಂ ॥ ೩೨ ॥

ದಂತೋದ್ಭವಂ ನಖಭವಮಾಕಾಶಪ್ರಭವಂ ವಿಷಂ ।
ಲೂತಾದಿಪ್ರಭವಂ ಯಚ್ಚ ವಿಷಮತ್ಯಂತದುಃಖದಂ ॥ ೩೩ ॥

ಶಮಂ ನಯತು ತತ್ಸರ್ವಂ ಕೀರ್ತಿತೋ ಹಿ ಜನಾರ್ದನಃ ।
ಗ್ರಹಾನ್ಪ್ರೇತಗ್ರಹಾಂಶ್ಚೈವ ತಥಾ ಚೈವಾರ್ಯಕಗ್ರಹಾನ್ ॥ ೩೪ ॥

ಮುಖಮಂಡಲಕಾನ್ಕ್ರೂರಾನ್ರೇವತೀಂ ವೃದ್ಧರೇವತೀಂ ।
ವೃದ್ಧಿಕಾಖ್ಯಾನ್ಗ್ರಹಾಂಶ್ಚೋಗ್ರಾಂಸ್ತಥಾ ಮಾತೃಗ್ರಹಾನಪಿ ॥ ೩೫ ॥

---

ಹೆಸರೇ ತಿಳಿಯದ ಹಾಳು ರೋಗಗಳು, ಸಿಡುಬು, (ಮಾರಿಕಾ, (ಪ್ಲೇಗ್, ಕಾಲರಾ) ರೋಗಗಳು, ಇಂತಹ ಸಕಲ ಭಯಂಕರ ವ್ಯಾಧಿಗಳೆಲ್ಲವೂ ಈ ಭಗವನ್ಮಂತ್ರ ಪೂತ ಜಲಪ್ರೋಕ್ಷಣದಿಂದ ಹೆದರಿ, ದಿಕ್ಕಾಪಾಲಾಗಿ ಓಡಿಹೋಗಿ ನಾಶಹೊಂದಲಿ ಭಗವನ್ನಾಮೋಚ್ಚಾರಣಾಮಾತ್ರದಿಂದಲೇ ಇವುಗಳ ಆಯುಸ್ಸು ಕೊನೆಗಾಣಲಿ,

೩೧-೪೦ ಅಚ್ಯುತ, ಅನಂತ, ಗೋವಿಂದ, ಎಂಬ ನಾಮಗಳು ಕಿವಿಗೆ ಬಿದ್ದೊಡನೆಯೇ ಆ ಮಹಾವಿಷ್ಣುವಿನ ಚಕ್ರದ ಏಟಿಗೆ ಸಿಕ್ಕಿ ಎಲ್ಲ ರೋಗಗಳೂ ತುಂಡು ತುಂಡಾಗಿ ಕತ್ತರಿಸಿಹೋಗಲಿ ಭಗವನ್ನಾಮೋಚ್ಚಾರಣೆಯಿಂದ ಸಕಲ ರೋಗಗಳೂ ನಾಶವಾಗುವುದೆಂದು ನಾನು ಪ್ರಮಾಣಮಾಡಿ ಸತ್ಯವಾಗಿ ಹೇಳುತ್ತೇನೆ ಓ ಜನಾರ್ದನ! ನಿನ್ನ ನಾಮೋಚ್ಚಾರಣ ಮಾತ್ರದಿಂದಲೇ ನಿನ್ನ ಭಕ್ತನಿಗೆ ಎಷ್ಟು ವಿಧ ವಿಷ ಪ್ರಯೋಗವಾಗಿದ್ದರೂ ಆ ವಿಷದೋಷವೆಲ್ಲವೂ ಪರಿಹಾರವಾಗುವುದು ಓ ನರಸಿಂಹ

ಬಾಲಸ್ಯ ವಿಷ್ಣೋಶ್ಚರಿತಂ ಹಂತು ಬಾಲಗ್ರಹಾನಿಮಾನ್ ।
ವೃದ್ಧಾನಾಂ ಯೇ ಗ್ರಹಾಃ ಕೇಚಿದ್ಯೇ ಚ ಬಾಲಗ್ರಹಾಃ ಕ್ವಚಿತ್ ॥ ೩೬ ॥

ನರಸಿಂಹಸ್ಯ ದೃಷ್ಟ್ವಾ ತೇ ದಗ್ಧಾ ಯೇ ಚಾಪಿ ಯೌವನೇ ।
ಸಟಾಕರಾಲವದನೋ ನರಸಿಂಹೋ ಮಹಾರವಃ ॥ ೩೭ ॥

ಗ್ರಹಾನಶೇಷಾನ್ನಿಶ್ಶೇಷಾನ್ಕರೋತು ಜಗತೋ ಹಿತಃ ।
ನರಸಿಂಹ ಮಹಾಸಿಂಹ ಜಿಹ್ವಾಜ್ವಾಲೋಜ್ಜ್ವಲಾನನ ॥ ೩೮ ॥

ಗ್ರಹಾನಶೇಷಾನ್ಸರ್ವೇಶ ಖಾದಖಾದಾಗ್ನಿಲೋಚನ ।
ಯೇ ರೋಗಾ ಯೇ ಮಹೋತ್ಪಾತಾ ಯದ್ವಿಷಂ ಯೇ ಮಹಾಗ್ರಹಾಃ ॥

ಯಾನಿ ಚ ಕ್ರೂರಭೂತಾನಿ ಗ್ರಹಪೀಡಾಶ್ಚ ದಾರುಣಾಃ ।
ಶಸ್ತ್ರಕ್ಷತೇಷು ಯೇ ದೋಷಾ ಜ್ವಾಲಾಗರ್ದಭಿಕಾದಯಃ ॥ ೪೦ ॥

ತಾನಿ ಸರ್ವಾಣಿ ಸರ್ವಾತ್ಮನ್ಪರಮಾತ್ಮನ್ ಜನಾರ್ದನ ।
ಕಂಚಿದ್ರೂಪಂ ಸಮಾಸ್ಥಾಯ ವಾಸುದೇವಾಶು ನಾಶಯ ॥ ೪೧ ॥

ಸ್ವಾಮಿಯೇ! ನಿನ್ನ ನಾಮವನ್ನು ಸ್ಮರಿಸಿದ ಮಾತ್ರದಿಂದಲೇ ಪಿಶಾಚಗ್ರಹ, ಬಾಲಗ್ರಹ, ವೃದ್ಧಗ್ರಹವೇ ಮುಂತಾದ ಎಷ್ಟು ಸಾವಿರ ಗ್ರಹಗಳಿದ್ದರೂ ಆ ಗ್ರಹಗಳೆಲ್ಲಾ ಕಣ್ಣಿಗೆ ಕಾಣಿಸದೆ ಮರೆಯಾಗಿ ಹೋಗಿ ಎಲ್ಲೆಲ್ಲೋ ಅಡಗಿಕೊಂಡು ಬಿಡುತ್ತವೆ. ನರಸಿಂಹ! ನಿನ್ನ ಗರ್ಜನೆಯನ್ನು ಕೇಳಿ ನಿನ್ನ ಭಯಂಕರ ಸಟಾಕಲಾಪಗಳನ್ನು ನೋಡಿದೊಡನೆಯೇ ಸಕಲ ದುಷ್ಟಾರಿಷ್ಟ ಗ್ರಹಗಳೂ ಬಲು ಬೆಚ್ಚಿಬಿದ್ದು, ಅಲ್ಲಲ್ಲೇ ಅಡಗಿಹೋಗುತ್ತವೆ. ಓ ಅಗ್ನಿನಯನ! ನರಸಿಂಹ! ಮಹಾಸಿಂಹ! ಜಿಹ್ವೆಯೆಂಬ ಜ್ವಾಲೆಯಿಂದ ಉಜ್ವಲವಾದ ಮುಖವುಳ್ಳ ನರಹರಿಯೇ! ಈ ಸಮಸ್ತ ದುಷ್ಟ ಗ್ರಹಗಳನ್ನೂ ತಿಂದು ತೇಗು. ಓ ಭಯನಿವಾರಕನಾದ ನಾರಸಿಂಹಾ! ಯಾವ ರೋಗಗಳಿವೆಯೋ, ಎಂತಹ ಮಹೋತ್ಪಾತಗಳಿವೆಯೋ, ಯಾವ ವಿಷಪ್ರಯೋಗವಿದೆಯೋ, ಯಾವ ಮಹಾಗ್ರಹ ಪೀಡೆಯಿದೆಯೋ, ಕತ್ತಿಯ ಗಾಯಗಳು ಯಾವುವು ಇವೆಯೋ, ಅವುಗಳೆಲ್ಲವೂ ಪರಿಹಾರವಾಗಲಿ.

೪೧-೪೨. ಪರಮಪುರುಷ! ಪುರುಷೋತ್ತಮ! ದಯಾಮೂರ್ತೇ! ನೀನು

ಕ್ಷಿಪ್ತ್ವಾ ಸುದರ್ಶನಂ ಚಕ್ರಂ ಜ್ವಾಲಾಮಾಲಾವಿಭೀಷಣಂ ।
ಸರ್ವದುಷ್ಟೋಪಶಮನಂ ಕುರು ದೇವವರಾಚ್ಯುತ ॥ ೪೨ ॥

ಸುದರ್ಶನಮಹಾಜ್ವಾಲ ಛಿಂಧಿಛಿಂಧಿ ಚ ಮಾರಯ ।
ಸರ್ವಾಣಿ ದುಷ್ಟರಕ್ಷಾಂಸಿ ಕ್ಷಪಯಾಶುವಿಭೀಷಣ ॥ ೪೩ ॥

ಪ್ರಾಚ್ಯಾಂ ಪ್ರತೀಚ್ಯಾಂ ದಿಶಿ ಚ ದಕ್ಷಿಣೋತ್ತರತಸ್ತಥಾ ।
ರಕ್ಷಾಂ ಕರೋತು ಸರ್ವಸ್ಮಾನ್ನರಸಿಂಹಃ ಸ್ವಗರ್ಜಿತೈಃ ॥ ೪೪ ॥

ಭುವ್ಯಂತರಿಕ್ಷೇ ಚ ದಿವಿ ಪಾರ್ಶ್ವತಃ ಪೃಷ್ಠತೋಽಗ್ರತಃ ।
ರಕ್ಷಾಂ ಕರೋತು ಭಗವಾನ್ಬಹುರೂಪೀ ಜನಾರ್ದನಃ ॥ ೪೫ ॥

ಯಸ್ಮಾದ್ವಿಷ್ಣುರ್ಜಗತ್ಸರ್ವಂ ಸದೇವಾಸುರಮಾನುಷಂ ।
ತೇನ ಸತ್ಯೇನ ದುಷ್ಟಾನಿ ಶಮಮುಸ್ಯ ವ್ರಜಂತು ವೈ ॥ ೪೬ ॥

---

ಯಾವ ಅವತಾರಮಾಡಿಕೊಂಡಾದರೂ ಬಂದು ಮೇಲೆ ಹೇಳಿದ ಸಕಲ ದುಷ್ಟದೋಷ ಗಳನ್ನೂ ಸಹ ನಿನ್ನ ಚಕ್ರಪ್ರಯೋಗದಿಂದಲೇ ಕತ್ತರಿಸಿ ಪುಡಿ ಪುಡಿಮಾಡಿಬಿಡು ಓ ಸುದರ್ಶನ ಚಕ್ರವೇ! ನಿನ್ನನ್ನೊಂದು ಬಾರಿ ಬೇಡಿಕೊಳ್ಳುತ್ತೇನೆ ನೀನು ಭಗ ವಂತನ ಕರಾರವಿಂದವನ್ನಲಂಕರಿಸಿರುತ್ತೀಯೆ! ನೀನು ನನ್ನ ಮೊರೆಯನ್ನು ಕೇಳಿ ಸ್ವಾಮಿಯ ಹಸ್ತದಿಂದ ಈಚೆಗೆ ಬಂದು ಸಕಲ ದುಷ್ಟ ರಾಕ್ಷಸರನ್ನೂ, ಪಿಶಾಚಾದಿ ಗ್ರಹಗಳನ್ನೂ, ಸಕಲ ರೋಗಗಳನ್ನೂ, ಸಕಲ ಕಷ್ಟಗಳನ್ನೂ ನಿರ್ದಾಕ್ಷಿಣ್ಯವಾಗಿ ಚೂರು ಚೂರಾಗಿ ಕತ್ತರಿಸಿ ಹಾಕು

೪೪-೪೫ ಓ! ಓ! ನರಸಿಂಹಮೂರ್ತಿ! ನೀನೊಂದು ಬಾರಿ ಭಯಂಕರ ವಾಗಿ ಗರ್ಜಿಸು ಪೂರ್ವ ಪಶ್ಚಿಮ ದಕ್ಷಿಣೋತ್ತರ ದಿಕ್ಕುಗಳಲ್ಲಿರುವ ಸಮಸ್ತ ಪೀಡೆ ಗಳೂ ನಾಶವಾಗಿ ನನಗೆ ರಕ್ಷಣೆಯುಂಟಾಗುವುದು. ಓ, ಬಹುವಿಧ ರೂಪವುಳ್ಳ ಜನಾರ್ದನನೇ! ಭೂಮಿಯ ಮೇಲೆ, ಆಕಾಶದ ಮೇಲೆ, ಸ್ವರ್ಗದ ಮೇಲೆ, ಹಿಂದೆ ಮುಂದೆ, ಅಕ್ಕಪಕ್ಕಗಳಲ್ಲೆಲ್ಲಾ ನೀನು ನಿಂತು ನನ್ನನ್ನು ರಕ್ಷಿಸು

೪೬-೪೭ ಈ ಜಗತ್ತೆಲ್ಲವೂ ವಿಷ್ಣುಮಯವಾದುದು (ಸರ್ವಂ ವಿಷ್ಣು ಮಯಂ ಜಗತ್) ಈ ಸೌಮ್ಯಮೂರ್ತಿಯು ಕ್ರೂರವಾದ ಗ್ರಹಾದಿ ಭೂತಗಳನ್ನು

ಯಥಾ ವಿಷ್ಣುಸ್ಮೃತೌ ಸದ್ಯಃ ಸಂಕ್ಷಯಂ ಯಾತಿ ಪಾತಕಂ।
ಸತ್ಯೇನ ತೇನ ಸಕಲಂ ದುಷ್ಟಮಸ್ಯ ಪ್ರಶಾಮ್ಯತು ॥ ೪೭

ಪರಮಾತ್ಮಾ ಯಥಾ ವಿಷ್ಣುರ್ವೇದಾಂತೇಷ್ವಭಿಗೀಯತೇ ।
ತೇನ ಸತ್ಯೇನ ಸಕಲಂ ಯನ್ಮಯೋಕ್ತಂ ತಥಾಸ್ತು ತತ್ ॥ ೪೮

ಶಾಂತಿರಸ್ತು ಶಿವಂ ಚಾಸ್ತು ಪ್ರಣಶ್ಯತ್ವಸುಖಂ ಚ ಯತ್ ।
ವಾಸುದೇವಶರೀರೋತ್ಥೈಃ ಕುಶೈಃ ಸಂಮಾರ್ಜಿತೋ ಮಯಾ ॥ ೪೯ ॥

ಅಪಾಮಾರ್ಜತಿ ಗೋವಿಂದೋ ನರೋ ನಾರಾಯಣಸ್ತಥಾ ।
ತಥಾಸ್ತು ಸರ್ವದುಃಖಾನಾಂ ಪ್ರಶಮೋ ವಚನಾದ್ಧರೇಃ ॥ ೫೦ ॥

ಶಾಂತಾಃ ಸಮಗ್ರರೋಗಾಸ್ತೇ ಗ್ರಹಾಃ ಸರ್ವೇ ವಿಷಾಣಿ ಚ ।
ಭೂತಾನಿ ಚ ಪ್ರಶಾಂತಾನಿ ಸಂಸ್ಮೃತೇ ಮಧುಸೂದನೇ ॥ ೫೧ ॥

(ತನ್ನನ್ನು ತಾನೇ) ಸಕಲ ವಿಘ್ನದಿಂದಲೂ ಕಣ್ಣುಮರೆಮಾಡಿಸಿ ಕಾಪಾಡಲಿ ವಿಷ್ಣುವಿನ ನಾಮೋಚ್ಚಾರಣೆಯನ್ನು ಮಾಡಿದ ಮಾತ್ರದಿಂದಲೇ ಸಕಲ ಪಾಪಗಳೂ ಪರಿಹಾರವಾಗುವುವು (ಬೆಂಕಿಯನ್ನು ಮುಟ್ಟಿದೊಡನೆಯೇ ತಿಳಿದು ಮುಟ್ಟಿದರೂ ತಿಳಿಯದೆ ಮುಟ್ಟಿದರೂ ಕೈಸುಡುವಂತೆ)

೪೮-೫೧ ವೇದಾಂತಶಾಸ್ತ್ರಗಳಲ್ಲಿ ಮಹಾವಿಷ್ಣುವೇ ಪರಮಾತ್ಮನೆಂದೂ ಅವನು ಎಲ್ಲೆಲ್ಲೂ ತುಂಬಿಕೊಂಡಿರುವನೆಂದೂ ಹೇಳಲ್ಪಟ್ಟಿದೆಯಷ್ಟೆ? ಆ ಮಾತು ಎಷ್ಟರ ಮಟ್ಟಿಗೆ ನಿಜವೋ ಅದೇ ರೀತಿ ಈಗ ನನ್ನ ಬಾಯಿಂದ ಹೊರಟ ಮಾತುಗಳೆಲ್ಲವೂ ನಿಜವಾಗಲಿ ನಿಜ! ನಿಜ! ಈ ಮಾತು ನಿಜ! ದೇವರು ನಿಜ! ಪುರಾಣನಿಜ! ಈ ಮಾತು ಸಕಲರಿಗೂ ಶಾಂತಿಯನ್ನುಂಟುಮಾಡಲಿ. ಈ ಮಾತಿಗೆ ಮಂಗ ವಾಗಲಿ ಸಕಲ ದುಃಖಗಳೂ, ಪಾಪಗಳೂ ಪರಿಹಾರವಾಗಲಿ ಈಗ ನಾನು ವಾಸುದೇವನ ಶರೀರದ ರೋಮರೂಪಗಳಾದ ದರ್ಭೆಗಳ ತುದಿಗಳಿಂದ ಮಂತ್ರ ಪೂತೋದಕಗಳನ್ನು ಪ್ರೋಕ್ಷಣೆಮಾಡಿರುತ್ತೇನೆ ಇದರಿಂದ ಸಕಲ ಬಾಧೆಗಳೂ ನಾಶವಾಗುವುವು. ಇದು ನಾವಾಡುವ ಮಾತಲ್ಲ ಭಗವಂತನ ಮುಖದಿಂದಲೇ

ಏತತ್ಸಮಸ್ತರೋಗೇಷು ಸರ್ವಭೂತಭಯೇಷು ಚ ।
ಅಪಾಂಮಾರ್ಜನಕಂ ಶಸ್ತ್ರಂ ವಿಷ್ಣುನಾಮಾಭಿಮಂತ್ರಿತಂ ॥ ೫೨ ॥

ಶಾಂತಿರಸ್ತು ಶಿವಂ ಚಾಸ್ತು ದುಷ್ಟಮಸ್ಯ ಪ್ರಶಾಮ್ಯತು ।
ಯದಸ್ಯ ದುರಿತಂ ಕಿಂಚಿತ್ತತ್ಕ್ಷಿಪ್ತಂ ಲವಣಾಂಭಸಿ ॥ ೫೩ ॥

ಸ್ವಾಸ್ಥ್ಯಮಸ್ಯ ಸದೈವಾಸ್ತು ಹೃಷೀಕೇಶಸ್ಯ ಕೀರ್ತನಾತ್ ।
ಯತ ಏವಾಗತಂ ಪಾಪಂ ತತ್ರೈವ ಪ್ರತಿಗಚ್ಛತು ॥ ೫೪ ॥

ಏತದ್ರೋಗಾದಿಪೀಡಾಸು ಜಂತೂನಾಂ ಹಿತಮಿಚ್ಛತಾ ।
ವಿಷ್ಣುಭಕ್ತೇನ ಕರ್ತವ್ಯಮಪಾಮಾರ್ಜನಕಂ ಪರಂ ॥ ೫೫ ॥

ಅನೇನ ಸರ್ವದುಃಖೇನ ಪ್ರಶಮಂ ಯಾಂತ್ಯಸಂಶಯಂ ।
ಸರ್ವಭೂತಹಿತಾರ್ಥಾಯ ಕುರ್ಯಾತ್ತಸ್ಮಾತ್ಸದೈವ ಹಿ ॥ ೫೬ ॥

---

ಹೊರಟಿದೆ, ಈಮಾತು ಭಗವಂತನ ಮಾತು. ಇದು ದಿಟವಾಗಲಿ ! ಸಕಲರೋಗಗಳೂ ಶಾಂತವಾಗಲಿ. ಸಕಲ ಗ್ರಹಬಾಧೆಗಳೂ, ವಿಷಬಾಧೆಗಳೂ, ಭೂತಬಾಧೆಗಳೂ, ಮಧುಸೂದನನ ನಾಮಸ್ಮರಣೆಯಿಂದ ನಾಶಹೊಂದಲಿ. ಈ ರಕ್ಷೆಯು ಸಮಸ್ತ ರೋಗಗಳನ್ನೂ ಭೂತಭಯವನ್ನೂ ತಪ್ಪಿಸಿ ನಮ್ಮನ್ನೂ ರಕ್ಷಿಸಲಿ. ಇದು ಸಕಲ ವಿಪತ್ತುಗಳಿಗೂ ಶಸ್ತ್ರವಾಗಿ ಪರಿಣಮಿಸಲಿ. ವಿಷ್ಣುನಾಮಗಳಿಂದ ಅಭಿಮಂತ್ರಿತವಾಗಿರುವುದೇ ಸಂಪ್ರೋಕ್ಷಣೆಯು. ಲೋಕಕ್ಕೆ ಶಾಂತಿಯುಂಟಾಗಲಿ. ಮಂಗಳವಾಗಲಿ. ಕೆಟ್ಟದ್ದೆಲ್ಲಾ ಹಾಳಾಗಲಿ. ಈ ಯಜಮಾನನ ದುರಿತಗಳೆಲ್ಲವೂ ಲವಣಸಮುದ್ರದಲ್ಲಿ ಬಿದ್ದು ಹೋಗಲಿ. ಈ ಯಜಮಾನನು ಸ್ವಸ್ಥವಾಗಿರಲಿ. ಹೃಷೀಕೇಶನ ನಾಮೋಚ್ಚಾರಣೆಯಿಂದ ಯಾವುದಾದರೊಂದು ಪಾಪವು ಬಂದರೆ ಅದು ಹಾಗಿಂದ ಹಾಗೆಯೇ ಹಾಳಾಗಿ ಹೋಗಲಿ. ಯಾರಿಗಾದರೂ ಏನಾದರೂ ರೋಗಬಂದರೆ ಆ ಪ್ರಾಣಿಗಳಿಗೆ ಹಿತಮಾಡಬೇಕೆಂಬ ದೈವಭಕ್ತನಾದ ಮನುಷ್ಯನು ಇಂತಹ ಸಂಪ್ರೋಕ್ಷಣಾ ಕರ್ಮವನ್ನು ಪ್ರಯೋಗಮಾಡಬೇಕು. ಇದನ್ನು ಮಾಡಿದರೆ ಸಕಲ ದುಃಖಗಳೂ ನಿಜವಾಗಿ ನಾಶವಾಗುವುವು. ಸಕಲ ಪ್ರಾಣಿಗಳ ಹಿತಾರ್ಥವಾಗಿ ಈ ರಕ್ಷಾಕರ್ಮವನ್ನು ಮಾಡಬೇಕು. ಕವಿಗಳ ಮಾತಿಗೆ ತುದಿ ಮೊದಲಿಲ್ಲ. ಭಗವಂತನ ಅವತಾರಗಳಿಗೂ ತುದಿ ಮೊದಲಿಲ್ಲ. ಪುರಾಣಗಳಲ್ಲಿ ಹೇಳುವ ಧರ್ಮಸೂಕ್ಷ್ಮಗಳಿಗೆ ತುದಿ ಮೊದಲಿಲ್ಲ. ಧರ್ಮೋಪದೇಶಕರಿಗೆ ತುದಿ ಮೊದಲಿಲ್ಲ. ಅನಿರುದ್ಧ, ಸಂಕರ್ಷಣ ವಾಸುದೇವ,

ನಾದ್ಯಂತವತಃ ಕವಯಃ ಪುರಾಣಾ-
ಸ್ಸೂಕ್ಷ್ಮಾ ಬೃಹಂತೋ ಹ್ಯನುಶಾಸಿತಾರಃ ।
ಸರ್ವಜ್ವರಾ ಘ್ನಂತು ತವಾನಿರುದ್ಧ-
ಪ್ರದ್ಯುಮ್ನಸಂಕರ್ಷಣವಾಸುದೇವಾಃ　　　　॥ ೫೭ ॥

ಏತೇ ಕುಶಾ ವಿಷ್ಣುಶರೀರಸಂಭವಾ
ಜನಾರ್ದನೋಽಹಂ ಸ್ವಯಮೇವ ಚಾಗತಃ ।
ಹತಂ ಮಯಾ ದುಷ್ಟಮಶೇಷಮಸ್ಯ
ಸ್ವಸ್ಥೋ ಭವತ್ವೇಷ ಯಥಾ ವಚೋ ಹರೇಃ　　　　॥ ೫೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸತ್ತ್ವಬಾಧಾಪ್ರಶಮನಂನಾಮ
ಷಣ್ಣವತ್ಯಧಿಕ ಶತತಮೋಽಧ್ಯಾಯಃ.

---

ಪ್ರದ್ಯುಮ್ನಾದಿ ವಿಷ್ಣು ನಾಮೋಚ್ಚಾರಣೆಯಿಂದ ಸಕಲ ಜ್ವರ (ರೋಗ) ಗಳೂ ನಾಶ ವಾಗಲಿ, ಈ ದರ್ಭೆಗಳು ವಿಷ್ಣುವಿನ ರೋಮಗಳು, ನಾನೇ ಪ್ರತ್ಯಕ್ಷ ಜನಾರ್ದನನು, ನಾನೇ ಇಲ್ಲಿ ಬಂದು ಕುಳಿತಿದ್ದೇನೆ ನಾನೇ ಇವನ ಸಕಲ ಪಾಪಗಳನ್ನೂ ಪರಿಹರಿ ಸುತ್ತಿದ್ದೇನೆ (ಹೀಗೆ ಭಗವಂತನು ಈ ರಕ್ಷಾಸ್ತೋತ್ರದಲ್ಲಿ ಹೇಳಿರುವನು ಇದರ ಉಪಯೋಗವನ್ನು ಸಕಲರೂ ಹೊಂದಿ ಕೃತಾರ್ಥರಾಗಲಿ.)

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಸತ್ವಬಾಧಾಪ್ರಶಮನವೆಂಬ ಹೆಸರಿನ
ನೂರತೊಂಭತ್ತಾರನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ನವಸಪ್ತತ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಜಗತ್ಸೃಷ್ಟಿಪ್ರಸಂಗೇನ ಚೋರ್ವಶೀಸಂಭವಸ್ತ್ವಯಾ ।
ಕಥಿತಸ್ತು ಮಹಾಭಾಗ ತತ್ಪ್ರಸಂಗೇನ ಚಾಪರಾಃ ॥ ೧ ॥

ಕಥಿತಾಶ್ಚ ಕಥಾ ಬ್ರಹ್ಮನ್ ಧರ್ಮಯುಕ್ತಾ ಮನೋಹರಾಃ ।
ವಿಷ್ಣೋರ್ಮಾಹಾತ್ಮ್ಯಸಂಯುಕ್ತಾಃ ಸರ್ವಪಾಪಭಯಾಪಹಾಃ ॥ ೨ ॥

ಕಶ್ಯಪಸ್ಯ ತು ಯಾ ಪತ್ನೀ ಖಶಾನಾಮ್ನಾ ತ್ವಯೇರಿತಾ ।
ಯಸ್ಯಾಃ ಪುತ್ರೌ ಮಹಾತ್ಮಾನೌ ಕಥಿತೌ ಯಕ್ಷರಾಕ್ಷಸೌ ॥ ೩ ॥

### ನೂರತೊಂಭತ್ತೇಳನೆಯ ಅಧ್ಯಾಯವು.

೧-೪ ವಜ್ರರಾಜನು ಹೇಳುತ್ತಾನೆ — ಸ್ವಾಮಿ ! ಮಾರ್ಕಂಡೇಯ ಋಷಿಗಳೇ ! ಇದುವರೆಗೆ ನೀವು ಜಗತ್ತಿನ ಸೃಷ್ಟಿಪ್ರಸಂಗವನ್ನೂ, ಊರ್ವಶಿಯ ಚರಿತ್ರೆಯನ್ನೂ, ಇನ್ನೂ ಎಷ್ಟೋ ಮನೋಹರವಾದ ಕಥೆಗಳನ್ನೂ ನನ್ನೊಡನೆ ಹೇಳಿದಿರಿ ಇವೆಲ್ಲವೂ ಬಹಳ ಧರ್ಮಾರ್ಥ ಸಹಿತಗಳಾಗಿವೆ. ಮತ್ತು ಈ ಕಥೆಗಳಲ್ಲೆಲ್ಲಾ ಭಗವನ್ಮಹಾತ್ಮೆಯು ತುಂಬಿ ತುಳುಕಾಡುತ್ತಿವೆ ಈ ಕಥೆಗಳೆಲ್ಲಾ ಶ್ರೋತೃಗಳ ಪಾಪಗಳನ್ನು ಪರಿಹರಿಸತಕ್ಕುವುಗಳಾಗಿವೆ ಸ್ವಾಮಿ ! ಈ ಸಂದರ್ಭದಲ್ಲಿ ಹಿಂದೆ ನೀವು ಕಶ್ಯಪರಿಗೆ ಖಸಯೆಂಬ ಹೆಸರಿನ ಹೆಂಡತಿಯು ಇದ್ದಳೆಂದೂ ಅವಳ ಹೊಟ್ಟೆಯಲ್ಲಿ ಯಕ್ಷರಾಕ್ಷಸರ ಉತ್ಪತ್ತಿಯಾಯಿತೆಂದೂ ಹೇಳಿದ ಜ್ಞಾಪಕವಿದೆ ಆ ಯಕ್ಷರಾಕ್ಷಸರ

**ತಯೋರುತ್ಪತ್ತಿಮಿಚ್ಛಾಮಿ ಶ್ರೋತುಂ ವಂಶಂ ತಥೈವ ಚ ।**
**ಪ್ರಸ್ತುತಾ ಜಗದುತ್ಪತ್ತಿಂ ನಿಖಿಲೇನ ಪ್ರಕೀರ್ತಯ ॥ ೪ ॥**

**॥ ಮಾರ್ಕಂಡೇಯ ಉವಾಚ ॥**

**ರಾಕ್ಷಸಂ ಪೂರ್ವಸಂಧ್ಯಾಯಾಂ ಜನಯಾಮಾಸ ಸಾ ಖಶಾ ।**
**ದಂಷ್ಟ್ರಾಕರಾಲವದನಂ ಪಿಂಗಲೋದ್ಬದ್ಧಲೋಚನಂ ॥ ೫ ॥**

**ಆಕರ್ಣದಾರಿತಾಸ್ಯಂ ಚ ಸ್ಥೂಲನಾಸಾಗ್ರಮುಲ್ಬಣಂ ।**
**ವಿಕಚಂ ವಿಕಟಾಟೋಪಂ ಶಂಕುಕರ್ಣಂ ವಿಭೀಷಣಂ ॥ ೬ ॥**

**ತಥೈವಾಪರಸಂಧ್ಯಾಯಾಂ ಸೈವ ಯಕ್ಷಂ ವ್ಯಜಾಯತ ।**
**ತಾದೃಶೇನೈವ ರೂಪೇಣ ಯಾದೃಶೇನೈವ ರಾಕ್ಷಸಂ ॥ ೭ ॥**

**ಕ್ಷೀಣೋಮಿ ಮಾತರಂ ಯಕ್ಷಃ ಕ್ಷುಭಿತಸ್ತಾಮಭಾಷತ ।**
**ರಕ್ಷೇತಿ ಮಾತರಂ ತಾಂ ತು ಯಕ್ಷಂ ವೈ ರಾಕ್ಷಸೋಽಬ್ರವೀತ್ ॥ ೮ ॥**

ಉತ್ಪತ್ತಿಯನ್ನೂ ಅವರ ವಂಶದ ಚರಿತ್ರೆಯನ್ನೂ, ಇನ್ನೂ ಪ್ರಪಂಚೋತ್ಪತ್ತಿಯ ಕಥಾವಶೇಷವೇನಾದರೂ ಇದ್ದರ ಅದನ್ನೂ ಸಹ ಸಂಪೂರ್ಣವಾಗಿ ಕೇಳಬೇಕೆಂದು ಅಪೇಕ್ಷೆಯುಂಟಾಗಿದೆ ಅವುಗಳನ್ನೆಲ್ಲಾ ತಿಳಿಸಬೇಕು.

೫-೮. ಮಾರ್ಕಂಡೇಯರು ಹೇಳುತ್ತಾರೆ —ಆ ಖಶೆಯು ಪೂರ್ವಸಂಧ್ಯಾ (ಬೆಳಗಿನ) ಕಾಲದಲ್ಲಿ ಕೋರೆಪಲ್ಲುಗಳಿಂದ ಕೂಡಿ ಕಪ್ಪಾದ, ಹಳದೀ ಕಣ್ಣುಗಳುಳ್ಳ ರಾಕ್ಷಸನನ್ನು ಹೆತ್ತಳು. ಆ ರಕ್ಕಸನಿಗೆ ಕಿವಿತನಕ ಬಾಯಿ, ದಪ್ಪಮೂಗು, ಭಯಂಕರ ಮುಖ, ಗೂಟದಂತಹ ಕಿವಿ, ಅದೇ ಖಶಾರಾಕ್ಷಸಿಯು ಸಾಯಂಸಂಧ್ಯಾಸಮಯದಲ್ಲಿ ಒಬ್ಬ ಯಕ್ಷನನ್ನು ಹೆತ್ತಳು. ಆ ಯಕ್ಷನ ರೂಪವೂ ರಾಕ್ಷಸನ ಹಾಗೆಯೇ ಇತ್ತು.

ಆ ರಾಕ್ಷಸನು ತಾಯಿಯನ್ನು ಕುರಿತು, ಅಮ್ಮಾ, ನಾನು ಹೊಟ್ಟೆಗಿಲ್ಲದೆ ಸಾಯುತ್ತಿದ್ದೇನೆ ನನ್ನ ಹೊಟ್ಟೆಗೆ ಏನಾದರೂ ಕೊಟ್ಟು ಕಾಪಾಡೆಂದನು ಮತ್ತು ಆ ಯಕ್ಷನೆಂಬ ಅನುಜನನ್ನು ಕುರಿತು ಅದೇ ಮಾತನ್ನು ಹೇಳಿದನು

ರಕ್ಷಣಾದ್ರಾಕ್ಷಸಃ ಪ್ರೋಕ್ತಃ ಕ್ಷಣಾದ್ಯಕ್ಷಃ ಸ ಉಚ್ಯತೇ ।
ಭಾರ್ಯಾ ಬಭೂವ ಯಕ್ಷಸ್ಯ ದೇವರಾಮಾ ಕೃತಸ್ಥಲಾ ॥ ೯ ॥

ಯಕ್ಷೋ ರಾಜತನಾಭಾಖ್ಯಸ್ತಸ್ಯಾಸ್ತಸ್ಯ ಸುತಃ ಸ್ಮೃತಃ ।
ಅನುಹ್ರಾದಸುತಾ ಭಾರ್ಯಾ ತಸ್ಯಾಸೀನ್ನೃಪ ಗುಹ್ಯಕಾ ॥ ೧೦ ॥

ವೀರೋಮಣಿಚರಶ್ಚೈವ ವೀರಭದ್ರಸ್ತಥೈವ ಚ ।
ತಸ್ಯಾಃ ಪುತ್ರಾವುಭೌ ಖ್ಯಾತೌ ದೇವತುಲ್ಯೌ ಮನೀಷಿಣೌ ॥ ೧೧ ॥

ಕಕುತ್ಸ್ಥತನಯೇ ಭಾರ್ಯೇ ತಯೋರಾಸ್ತಾಂ ನರಾಧಿಪ ।
ರಾಜನ್ಪುಣ್ಯಜನೀನಾಮ ಪ್ರಥಮಸ್ಯ ಬಭೂವ ಸಾ ॥ ೧೨ ॥

ತಥಾ ದೇವಜನೀನಾಮ ದ್ವಿತೀಯಸ್ಯಾಪಿ ಯಾದವ ।
ತಸ್ಯಾಃ ಪುಣ್ಯಜನಾ ಯಕ್ಷಾ ದೇವ ದೇವಜನಾಸ್ತಥಾ ।
ಕಥಿತಾ ಬಹುಸಾಹಸ್ರಾ ಮಹಾಬಲಪರಾಕ್ರಮಾಃ ॥ ೧೩ ॥

---

೯-೧೩ ರಕ್ಷಣೆಯಿಂದ ರಾಕ್ಷಸನೆಂಬ ಹೆಸರಾಯಿತು ಕ್ಷಣದಾ (ರಾತ್ರಿ) ಕಾಲದಲ್ಲಿ ಹುಟ್ಟಿದುದರಿಂದ ಯಕ್ಷನೆಂಬ ಹೆಸರಾಯಿತು ಆ ಯಕ್ಷನಿಗೆ ದೇವತಾ ಸ್ತ್ರೀಯಾದ ಕೃತಸ್ಥಲೆಯೆಂಬುವಳು ಹೆಂಡತಿಯಾದಳು ಆ ಹೆಂಡತಿಯಲ್ಲಿ ಆ ಯಕ್ಷನಿಗೆ ರಾಜತನಾಭನೆಂಬ ಮಗನು ಹುಟ್ಟಿದನು ಆ ರಾಜತನಾಭನ ಹೆಂಡತಿ, ಅನುಹ್ರಾದನ ಮಗಳಾದ ಗುಹ್ಯಕಳೆಂಬ ದೇವತಾಸ್ತ್ರೀ ಅವಳ ಹೊಟ್ಟೆಯಲ್ಲಿ ಮಣಿ ಚರ, ವೀರಭದ್ರರೆಂಬ ಇಬ್ಬರು ಯಕ್ಷಪುರುಷರು ಹುಟ್ಟಿದರು ಇವರು ದೇವತೋ ಪಮರಾಗಿಯೂ ವಿದ್ವಾಂಸರಾಗಿಯೂ ಇದ್ದರು ಅವರಿಬ್ಬರನ್ನೂ ಕಕುತ್ಸ್ಥರಾಜನ ಇಬ್ಬರು ಹೆಣ್ಣುಮಕ್ಕಳು ಮದುವೆಯಾದರು ಮೊದಲನೆಯವಳ ಹೆಸರು ಪುಣ್ಯ ಜನೀ ಎರಡನೆಯವಳ ಹೆಸರು ದೇವಜನೀ ಈ ಪುಣ್ಯಜನೀ-ದೇವಜನಿಯರ ಹೊಟ್ಟೆಯಲ್ಲಿ ಹುಟ್ಟಿದವನೇ ಪುಣ್ಯಜನರೆಂದೂ, ದೇವಜನರೆಂದೂ ಸುಪ್ರಸಿದ್ಧರಾದ ಯಕ್ಷಗಣಗಳು ಇಂತಹ ಯಕ್ಷಗಣಗಳು ಬಹು ಬಲಪರಾಕ್ರಮದಿಂದೊಡಗೂಡಿದವ ರಾಗಿ ಸಾವಿರಾರು ಮಂದಿ ಹುಟ್ಟಿ ಬೆಳೆಯುತ್ತ ಬಂದರು. ಇವರ ವಂಶವೇ, ಪುಂಖಾನು ಪುಂಖವಾಗಿ ಬೆಳೆದು ಯಕ್ಷರೂ ಯಕ್ಷಸ್ತ್ರೀಯರೂ ಅಪಾರವಾಗಿ ಹೆಚ್ಚಿ ಅವರೆಲ್ಲರಿಗೂ

ಶುಭೈರ್ವಿವಾಹೈರ್ನೃಪ ಯಕ್ಷವಂಶ್ಯೈ-
ರ್ಯಕ್ಷಾಸ್ತು ಜಾತಾ ಬಹುಶೀಲಯುಕ್ತಾಃ ।
ಧರ್ಮಸ್ಥಿತಾಃ ಸತ್ಯಪರಾ ವಿನೀತಾ
ಮಹಾನುಭಾವಾ ವರದಾ ವರೇಣ್ಯಾಃ　　　　॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಯಕ್ಷೋತ್ಪತ್ತಿರ್ನಾಮ ನವಸಪ್ತತ್ಯಧಿಕ
ಶತತಮೋಽಧ್ಯಾಯಃ

---

ತಕ್ಕ ತಕ್ಕ ಕನ್ಯೆಯರು ಮದುವೆಯಾಗಿ ಅವರುಗಳ ಹೊಟ್ಟೆಗಳಲ್ಲೆಲ್ಲಾ ಧರ್ಮಾತ್ಮರೂ ಸತ್ಯಸಂಧರೂ, ವಿನೀತರೂ, ಮಹಾನುಭಾವರೂ, ವರದರೂ, ವರೇಣ್ಯರೂ ಆದ ಅಸಂಖ್ಯಾಕರಾದ ಯಕ್ಷಪುರುಷರು ಹುಟ್ಟಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಯಕ್ಷೋತ್ಪತ್ತಿಯೆಂಬ ಹೆಸರಿನ
ನೂರತೊಂಭತ್ತೇಳನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟನವತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅಜಃ ಷಂಡಃ ಪಿಶಾಚೌ ದ್ವೌ ಭೂಪಾಲ ಕಪಿಶಾಸುತೌ ।
ಪಿಶಾಚೀ ಬ್ರಹ್ಮಧಾನಾಖ್ಯಾ ತತ್ರಾಜಸ್ಯ ಸುತಾ ಮತಾ ॥ ೧ ॥

ಪಿಶಾಚೀ ಯಾತುಧಾನಾಖ್ಯಾ ಷಂಡಸ್ಯ ತನಯಾ ಮತಾ ।
ಅಜಶ್ಚ ರಾಜಷಂಡಶ್ಚ ನಿಶೀಥೇ ಕ್ಷುಧಿತಾವುಭೌ ॥ ೨ ॥

ಬಹಿರ್ಭೂತ್ವಾ ತು ಸಹಿತಾ ದೃಷ್ಟವಂತೌ ನರೇಶ್ವರ ।
ರಾಕ್ಷಸಂ ಕ್ಷುಧಿತಾಕಾರಂ ಪತಂತಂ ಕ್ಷುಧಿತಂ ನಿಶಿ ॥ ೩ ॥

### ನೂರತೊಂಭತ್ತೆಂಟನೆಯ ಅಧ್ಯಾಯವು.

೧-೩ ಕಪಿಶಾ ಎಂಬುವಳಿಗೆ ಅಜನೆಂದೂ ಷಂಡನೆಂದೂ ಹೆಸರುಳ್ಳ ಪಿಶಾಚ ಮಕ್ಕಳಿದ್ದರು. ಆ ಅಜನಿಗೆ ಬ್ರಹ್ಮಧಾನೆಯೆಂಬ ಹೆಣ್ಣು ಮಗಳಿದ್ದಳು. ಷಂಡನಿಗೆ ಯಾತುಧಾನಿಯೆಂಬ ಮಗಳಿದ್ದಳು. ಎಲೈ ವಜ್ರರಾಜನೇ ಚೆನ್ನಾಗಿ ಕೇಳುತ್ತಾ ಇರು. ಒಂದು ದಿನ ಅರ್ಧರಾತ್ರಿಯ ಸಮಯದಲ್ಲಿ ಈ ಅಜನಿಗೂ ಷಂಡನಿಗೂ ಬಹಳ ಹೊಟ್ಟೆ ಹಸಿವುಂಟಾಯಿತು. ಆಗ ಅವರಿಬ್ಬರೂ ಮನೆಯಿಂದ ಹೊರಕ್ಕೆ ಹೋಗಿ ನೋಡಿದಾಗ ಅಲ್ಲೊಬ್ಬ ರಾಕ್ಷಸನು ಇವರಂತೆಯೇ ಹೊಟ್ಟೆ ಹಸಿವಿನಿಂದ ಸಂಕಟಪಡುತ್ತಾ ನೆಲದ ಮೇಲೆ ಬಿದ್ದಿದ್ದನು. ಆಗ ಈ ರಾಕ್ಷಸನನ್ನು ಕ್ಷುಧಿತರಾಗಿದ್ದ ಅಜಷಂಡ ಪಿಶಾಚರು ಹಿಡಿದುಕೊಂಡರು. ಅವರವರಲ್ಲಿ ಬಹಳ ಹೊಡೆದಾಟವಾಗಿ

ಗೃಹೀತಃ ಸ ಪಿಶಾಚಾಭ್ಯಾಂ ಕ್ಷುಧಿತಾಭ್ಯಾಂ ಯದಾ ಬಲೀ ।
ಪೃಷ್ಟಃ ಸ ತಾಭ್ಯಾಂ ಯತ್ನೇನ ದೃಷ್ಟ್ವಾ ತಸ್ಯ ತದಾ ಬಲಂ ॥ ೪ ॥

ಜಗಾದ ಭೂಮಿಪಶ್ರೇಷ್ಠ ಚೋಭಯೋರ್ಜನ್ಮಕಾರಣಂ ।
ಜನ್ಮ ಕರ್ಮ ಚ ತೌ ತಸ್ಯ ಶ್ರುತ್ವಾ ಪಿಶಿತಭೋಜನೌ ॥ ೫ ॥

ದದತುಃ ಕನ್ಯಕೇ ತಸ್ಯ ರಾಕ್ಷಸಸ್ಯ ನರಾಶಿನಃ ।
ಭಾರ್ಯಾದ್ವಯಸ್ಯ ವಂಶೌ ದ್ವೌ ರಾಕ್ಷಸಸ್ಯ ಪ್ರಕೀರ್ತಿತೌ ॥ ೬ ॥

ಬ್ರಹ್ಮಧಾನಾನ್ವಯೇ ತಸ್ಯ ಬ್ರಹ್ಮಧಾನಾ ನಿಶಾಚರಾಃ ।
ಯಾತುಧಾನಾನ್ವಯೇ ತಸ್ಯ ಯಾತುಧಾನಾಃ ಪ್ರಕೀರ್ತಿತಾಃ ॥ ೭ ॥

ಬ್ರಹ್ಮಧಾನಾನ್ವಯೇ ಜಾತಾನಾದೌ ವಕ್ಷ್ಯಾಮಿ ರಾಕ್ಷಸಾನ್ ।
ಯಜ್ಞಹಾ ನಿರ್ಘನಿಕ್ಷೇಪಾ ಬ್ರಹ್ಮಪೂತೋಽಥ ನಿಘ್ನವಾನ್ ॥ ೮ ॥

---

ಯಾರೂ ಸೋಲದೆ ಇರಲು ಆ ಅಜಷುಂಡರು, ನೀನಾರು? ನಿನ್ನ ವಂಶವಾವುದು? ಎಂದು ಆ ಹಸಿವಿದ್ದ ರಾಕ್ಷಸನನ್ನು ಕೇಳಿದರು ಆ ಮಾತಿಗೆ ಆ ರಾಕ್ಷಸನು ತನ್ನ ವಂಶವೃತ್ತಾಂತವನ್ನೆಲ್ಲಾ ಅವರಿಗೆ ತಿಳಿಸಿದನು ಆಗ ಅವರಿಬ್ಬರೂ ಅವನೊಡನೆ ಯುದ್ಧಮಾಡುವುದನ್ನು ಬಿಟ್ಟು, ಆ ಬಲಿಷ್ಠನಾದ ರಾಕ್ಷಸನಿಗೆ ತಮ್ಮಿಬ್ಬರ ಹೆಣ್ಣು ಮಕ್ಕಳನ್ನೂ ಕೊಟ್ಟು ಮದುವೆಮಾಡಿದರು ಆರೀತಿ ಆ ರಾಕ್ಷಸನು ಬ್ರಹ್ಮಧಾನೀ-ಯಾತುಧಾನೀ ಎಂಬ ಆ ಪಿಶಾಚಿಗಳ ಹೆಣ್ಣುಮಕ್ಕಳನ್ನು ಮದುವೆಮಾಡಿಕೊಂಡ ಬಳಿಕ, ಅಲ್ಲಿಂದಾಚೆಗೆ ರಾಕ್ಷಸರ ವಂಶವು ಬಲವಾಗಿ ಬೆಳೆಯಿತು ಬ್ರಹ್ಮಧಾನಿಯ ವಂಶದವರೆಲ್ಲ ಬ್ರಹ್ಮಧಾನರೆಂಬ ಹೆಸರಿನ ರಾಕ್ಷಸರಾದರು ಯಾತುಧಾನಿಯ ವಂಶದ ರಾಕ್ಷಸರೆಲ್ಲರೂ ಯಾತುಧಾನರೆಂಬ ಹೆಸರಿನ ರಾಕ್ಷಸರಾದರು

೮. ಬ್ರಹ್ಮಧಾನಿಯ ವಂಶದಲ್ಲಿ ಹುಟ್ಟಿದ ರಾಕ್ಷಸರ ಹೆಸರುಗಳನ್ನು ಮೊದಲು ಹೇಳುತ್ತೇನೆ ಯಜ್ಞಘ್ನ, ನಿರ್ಘನಿಕ್ಷೇಪ, ಬ್ರಹ್ಮಪೂತ, ನಿಘ್ನವಂತ, ಶ್ವಾನಕೃತ್ತು, ಕುಂತಲ, ಸರ್ಪ, ಇವರೆಲ್ಲರೂ ಬ್ರಹ್ಮಧಾನಿಯ ಮಕ್ಕಳೆಂದು ಪ್ರಸಿದ್ಧರಾದರು

ಶ್ವಾನಕೃತ್ಕಂತಲಃ ಸರ್ಪೋ ಬ್ರಹ್ಮಧಾನಾತ್ಮಜಾಃ ಸ್ಮೃತಾಃ ।
ತೇಷಾಮನ್ವಯಸಂಭೂತಾಃ ಶತಶೋಽಥ ಸಹಸ್ರಶಃ ॥ ೯ ॥

ಶ್ಲೇಷ್ಮಾತಕವನಸ್ಥಾನಾಃ ಕಥಿತಾ ಬ್ರಹ್ಮರಾಕ್ಷಸಾಃ ।
ಹೇತಿಃ ಪ್ರಹೇತಿರುಗ್ರಶ್ಚ ಪೌರುಷಾದೋ ವಧಸ್ತಥಾ ॥ ೧೦ ॥

ವಿದ್ಯುತ್ಸ್ಫೂರ್ಜಶ್ಚ ವಾತಶ್ಚ ನಸೋ ವ್ಯಾಘ್ರಸ್ತಥೈವ ಚ ।
ಸುಸಕೃಚ್ಚ ಕರಾಲಶ್ಚ ಯಾತುಧಾನಾತ್ಮಜಾ ದಶ ॥ ೧೧ ॥

ಸೂರ್ಯಸ್ಯಾನುಚರಾ ಹ್ಯೇತೇ ಸಹ ತೇನ ಭ್ರಮಂತಿ ವೈ ।
ತೇಷಾಮನ್ವಯಸಂಭೂತಾ ಯಾತುಧಾನಾಃ ಪ್ರಕೀರ್ತಿತಾಃ ॥ ೧೨ ॥

ಹೇತಿಪ್ರಹೇತಿವಂಶೌ ದ್ವೌ ತವ ವಕ್ಷ್ಯಾಮಿ ಯಾದವ ।
ಹೇತಿಪುತ್ರಃ ಸ್ಮೃತೋ ಲಂಕುರ್ಯಸ್ಯ ಸಾಲಕಟಂಕಟಾಃ ॥ ೧೩ ॥

ಸಂಧ್ಯಾಸುತಾ ಸ್ಮೃತಾ ಭಾರ್ಯಾ ಸುಕೇಶಸ್ತತ್ಸುತಃ ಸ್ಮೃತಃ ।
ಮಾಲೀ ಸುಮಾಲೀ ಚ ತಥಾ ಮಾಲ್ಯವಾಂಶ್ಚ ಮಹಾಬಲಃ ॥ ೧೪ ॥

೯-೧೨ ಈ ಬ್ರಹ್ಮಧಾನಿಯ ವಂಶದಲ್ಲಿ ನೂರಾರು ಸಾವಿರಾರು ಸಂತಾನಗಳಾದುವು ಈ ವಂಶದಲ್ಲಿ ಶ್ಲೇಷ್ಮಾತಕ, ವನಸ್ಥಾನರೆಂಬ ಹೆಸರಿನ ಬ್ರಹ್ಮರಾಕ್ಷಸರು ಬಹಳ ಪ್ರಸಿದ್ಧರಾದವರು. ಇನ್ನು ಯಾತುಧಾನಿಯ ವಂಶವನ್ನು ಹೇಳುತ್ತೇನೆ ಈ ಯಾತುಧಾನಿಗೆ ಹತ್ತು ಮಂದಿ ಮಕ್ಕಳು ಅವರ ಹೆಸರನ್ನೀಗ ಹೇಳುತ್ತೇನೆ. ಹೇತಿ, ಪ್ರಹೇತಿ, ಉಗ್ರ, ಪೌರುಷಾದ, ವಧ, ವಿದ್ಯುತ್‌ಸ್ಫೂರ್ಜ, ವಾತ, ನಭ, ವ್ಯಾಘ್ರ, ಸುಸಕೃತ್ತು, ಕರಾಳ ಈ ಹತ್ತು ಮಂದಿಯೂ ಯಾತುಧಾನಿಯ ಮಕ್ಕಳು. ಈ ಹತ್ತು ಮಕ್ಕಳು ಸೂರ್ಯನನ್ನನುಸರಿಸಿಕೊಂಡು ಅವನ ಜತೆಯಲ್ಲಿ ತಿರುಗಾಡುತ್ತಿರುತ್ತಾರೆ ಈ ಹತ್ತು ಜನ ಯಾತುಧಾನಾತ್ಮಜರ ಸಂತಾನವೆಲ್ಲಾ ಯಾತುಧಾನರೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ

೧೩-೨೨ ವಜ್ರರಾಜನೆ! ಕೇಳು ಇನ್ನು ಮುಂದೆ ನಿನಗೆ ಹೇತಿ ಪ್ರಹೇತಿಗಳಿಬ್ಬರ ವಂಶಾನುಕ್ರಮಣಿಕೆಯನ್ನು ತಿಳಿಸುವೆನು ಹೇತಿಯ ಮಗನ ಹೆಸರು ಲಂಕು ಇವನ ಹೆಂಡತಿಯು ಸಂಧ್ಯಾದೇವಿಯ ಮಗಳಾದ ಸಾಲಕಟಂಕಟೆ ಇವಳ

**ಸುಕೇಶತನಯಾ ಹ್ಯೇತೇ ದೇವಾಸುರಭಯಂಕರಾಃ ।**
**ತಪಸಾ ತೇ ಸಮಾರಾಧ್ಯ ದೇವದೇವಂ ಜನಾರ್ದನಂ ॥ ೧೫ ॥**

**ವೀರ್ಯಮಪ್ರತಿಮಂ ಪ್ರಾಪ್ತಂ ಲಂಕಾ ಚೈವ ಮಹಾಪುರೀ ।**
**ಸುಮಾಲಿತನಯಾ ತತ್ರ ಕೈಕಸೀ ನಾಮ ರಾಕ್ಷಸೀ ॥ ೧೬ ॥**

**ಭಾರ್ಯಾ ವಿಶ್ರವಸಃ ಪುತ್ರೋ ಯಸ್ಯಾ ರಾವಣಸಂಜ್ಞಕಃ ।**
**ತ್ರಿಲೋಕವಿಜಯೀ ತಸ್ಯ ರಾವಣಸ್ಯ ದುರಾತ್ಮನಃ ॥ ೧೭ ॥**

**ಸುಮಾಲೀ ವಸುನಾ ಯುದ್ಧೇ ಧರೇಣ ವಿನಿಪಾತಿತಃ ।**
**ಮಾಲೀ ಚ ದೇವದೇವೇನ ಕೇಶವೇನ ನಿಪಾತಿತಃ ॥ ೧೮ ॥**

**ಮಾಲ್ಯವಾಂಸ್ತತ್ರ ವರ್ಷಾಣಾಂ ಜೀವತ್ಯದ್ಯಾಪಿ ಯಾದವ ।**
**ಶ್ರಾವಿತೌ ಭ್ರಾತರೌ ಯೇನ ಪುರಾ ದೇವರಣೋತ್ಸುಕೌ ॥ ೧೯ ॥**

---

ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ಸುಕೇಶನೆಂದು ಹೆಸರು. ಈ ಸುಕೇಶನಿಗೆ ಮಾಲಿ ಸುಮಾಲಿ ಮಾಲ್ಯವಂತರೆಂಬ ಮೂರು ಮಕ್ಕಳಿದ್ದರು ಇವರು ಮೂವರೂ ದೇವಾಸುರ ಭಯಂಕರರಾಗಿದ್ದರು ಈ ಮೂರು ಮಂದಿ ರಾಕ್ಷಸರೂ ತಪಸ್ಸಿನಿಂದ ಬ್ರಹ್ಮನನ್ನಾರಾಧಿಸಿ ಮಹಾಬಲ ಪರಾಕ್ರಮಶಾಲಿಗಳಾಗಿದ್ದರು ಇವರು ಲಂಕಾಪಟ್ಟಣದಲ್ಲಿ ವಾಸಮಾಡುತ್ತಿದ್ದರು ಇವರುಗಳಲ್ಲಿ ಎರಡನೆಯ ಸುಮಾಲಿಗೆ ಕೈಕಸಿಯೆಂಬ ಮಗಳಿದ್ದಳು ಇವಳು ವಿಶ್ರವಸ್ಸನ್ನು ಮದುವೆಯಾಗಿ ರಾವಣನನ್ನು ಮಗನಾಗಿ ಪಡೆದಳು. ತ್ರಿಲೋಕವಿಜಯಿಯೆನಿಸಿದ್ದ ಈ ರಾವಣನ ಮಾತಾಮಹನಾದ ಸುಮಾಲಿಯು ಯುದ್ಧದಲ್ಲಿ ಧರಾಸುರನಿಂದ ಹತನಾದನು ಸುಮಾಲಿಯ ಅಣ್ಣ ಮಾಲಿಯು ಪರಮಾತ್ಮನಾದ ಕೇಶವನಿಂದ ಸಂಹೃತನಾದನು ಮೂರನೆಯ ಮಾಲ್ಯವಂತನು ಮಾತ್ರ ಯಾವ ಗೋಜಿಗೂ ಹೋಗದೆ ಇದ್ದುಕೊಂಡು ಇಂದಿಗೂ ಬದುಕಿಕೊಂಡೇ ಇದ್ದಾನೆ ಇವನು ಯಾವಾಗಲೂ ದೇವಾಸುರರ ಸಂಗಡ ಯುದ್ಧಕ್ಕೆ ಹೋದವನೇ ಅಲ್ಲ ಅಲ್ಲದೆ ತನ್ನ ಅಣ್ಣಂದಿರು ಬದುಕಿದ್ದಾಗ ಹಿತವಾಗಿಯೂ, ಧರ್ಮಸಮ್ಮತವಾಗಿಯೂ, ಶುಭಕರವಾಗಿಯೂ ಇರುವ ಮಾತನ್ನು ಹೇಳಿ, ನೀವು ದೇವತೆಗಳ ಸಂಗಡ ವಿರೋಧಮಾಡಿಕೊಳ್ಳಬೇಡಿರೆಂದು ಬಾರಿಬಾರಿಗೂ ಹೇಳುತ್ತಲೇ ಇದ್ದನು ತಮ್ಮನ ಮಾತನ್ನು ಅಲಕ್ಷ್ಯಮಾಡಿದುದರಿಂದ ಇವರಿಬ್ಬರೂ ದೇವಾಸುರ ಸಂಗ್ರಾಮ.

ಹಿತಂ ಧರ್ಮ್ಯಂ ಶುಭಂ ವಾಕ್ಯಂ ನ ಚ ತೌ ತಸ್ಯ ಚಕ್ರತುಃ ।
ತೇನ ತೌ ನಿಧನಂ ಪ್ರಾಪ್ತೌ ರಾಕ್ಷಸೌ ಸಮರದ್ವಯೇ ॥ ೨೦ ॥

ಸಂಶ್ರಾವಿತಸ್ತೇವ ತಥೈವ ವಾಕ್ಯಂ
ಸ ರಾವಣೋ ನಾಮವಿರೋಧಕಾಲೇ ।
ಉಲ್ಲಂಘ್ಯ ವಾಕ್ಯಂ ನಿಧನಂ ಜಗಾಮ
ಧರ್ಮೇ ಸ್ಥಿತಸ್ಯಾಪ್ರತಿಮಪ್ರಭಾವಃ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಹೇತಿವಂಶವರ್ಣನಂ
ನಾಮಾಷ್ಟ ನವತ್ಯಧಿಕ ಶತತಮೋಽಧ್ಯಾಯಃ

---

ದಲ್ಲಿ ಪ್ರಾಣವನ್ನೊಪ್ಪಿಸಿಬಿಟ್ಟರು. ಈ ಮಾಲ್ಯವಂತನು ರಾವಣಾಸುರನ ಬಳಿ ಮಂತ್ರಿಯಾಗಿದ್ದಾಗಲೂ, ತನ್ನ ಅಣ್ಣನ ದೌಹಿತ್ರನಾಗಿರುವನೆಂಬ ಪ್ರೇಮದಿಂದ ಎಷ್ಟೆಷ್ಟೋ ನೀತಿಬೋಧೆಯನ್ನು ಮಾಡಿದನು ಆದರೆ ರಾವಣನು ದರ್ಪಾತ್ಮನಾಗಿ ಅವನ ಮಾತನ್ನು ಲಕ್ಷ್ಯವೇಮಾಡದೆ ಇದ್ದುದರಿಂದ ಕಡೆಗೆ ಯುದ್ಧದಲ್ಲಿ ರಾಮನಿಂದ ಹತನಾದನೆಂಬ ಸಂಗತಿ ಲೋಕವಿದಿತವಾಗಿಯೇ ಇದೆ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಹೇತಿವಂಶವರ್ಣನೆಯೆಂಬ
ಹೆಸರಿನ ನೂರತೊಂಭತ್ತೆಂಟನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ನವನವತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಪ್ರಹೇತಿತನಯೋ ರಾಜನ್ಪುಲೋಮಾ ನಾಮ ವಿಶ್ರುತಃ ।
ಕ್ರೋಧದೃಷ್ಟ್ಯಾ ತು ಯಃ ಶೀಘ್ರಂ ಚ್ಯವನೇನ ವಿನಾಶಿತಃ ॥ ೧ ॥

॥ ವಜ್ರ ಉವಾಚ ॥

ಚ್ಯವನೇನ ಕಿಮರ್ಥಂ ವೈ ಪುಲೋಮಾ ರಾಕ್ಷಸೋ ಹತಃ ।
ಕಥಂ ಚ ಭೃಗುಶಾರ್ದೂಲ ತನ್ಮಮಾಚಕ್ಷ್ವ ಪೃಚ್ಛತಃ ॥ ೨ ॥

---

### ನೂರತೊಂಭತ್ತೊಂಭತ್ತನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರರಾಜನೇ ಕೇಳು ಪ್ರಹೇತಿಗೆ ಪುಲೋಮನೆಂಬ ಮಗನಿದ್ದನು ಅವನು ಚ್ಯವನ ಮಹರ್ಷಿಯ ಕ್ರೋಧ ದೃಷ್ಟಿಯಿಂದ ಸುಟ್ಟುಬೂದಿಯಾದನು

೨ ವಜ್ರಮಹಾರಾಜನು ಪ್ರಶ್ನೆಮಾಡುತ್ತಾನೆ —ನೇತ್ರಾಗ್ನಿಗೆ ಸಿಕ್ಕಿ ಸತ್ತನೆಂದು ಹೇಳಿದಿರಲ್ಲ? ಆ ಕಥೆಯೇನು? ಅದೇಕೆ ಅವನು ಆ ಋಷಿಯ ಕೋಪದಿಂದ ಸತ್ತನೆಂಬ ಸಂಗತಿಯನ್ನು ದಯವಿಟ್ಟು ತಿಳಿಸಿ, ಸ್ವಾಮಿ

॥ ಮಾರ್ಕಂಡೇಯ ಉವಾಚ ॥

**ಪುಲೋಮ್ನೋ ದಾನವೇಂದ್ರಸ್ಯ ದ್ವೇ ಕನ್ಯೇ ಭುವಿ ವಿಶ್ರುತೇ ।**
**ಪುಲೋಮಾ ಭೃಗವೇ ದತ್ತಾ ಶಚೀ ದತ್ತಾ ಚ ವಾಸವೇ ॥ ೩ ॥**

**ಕನ್ಯಾಭಾವೇ ರುದಂತೀ ತು ಕದಾಚಿದ್ಯದುನಂದನ ।**
**ಪುಲೋಮಾಮುಕ್ತವಾನ್ರಾಜನ್ಪುಲೋಮಾ ದಾನವೇಶ್ವರಃ ॥ ೪ ॥**

**ಹೇ ರಕ್ಷಃ ಕನ್ಯಕಾಮೇತಾಂ ಗೃಹ್ಣೀಷ್ವ ರುದತೀಂ ಬಲಾತ್ ।**
**ಏತಸ್ಮಿನ್ನೇವ ಕಾಲೇ ತು ಪುಲೋಮ್ನೋ ಭವನಾಜಿರೇ ॥ ೫ ॥**

**ಛಿದ್ರಾನ್ವೇಷೀ ದುರಾಚಾರಃ ಪುಲೋಮಾ ಸ ವ್ಯತಿಷ್ಠತ ।**
**ಅನುಸೃತ್ಯ ಚ ಜಗ್ರಾಹ ತಾಂ ಕನ್ಯಾಂ ಚಾರುಲೋಚನಾಂ ॥ ೬ ॥**

೩ ಮಾರ್ಕಂಡೇಯನು ಹೇಳುತ್ತಾನೆ —ಪುಲೋಮನೆಂಬ ರಾಕ್ಷಸನಿಗೆ ಪುಲೋಮಿ, ಶಚಿ, ಎಂಬ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದರು ಪುಲೋಮಿಯು ಭೃಗುಋಷಿಯನ್ನು ಲಗ್ನವಾದಳು ಶಚಿಯು ಇಂದ್ರನನ್ನು ಮದುವೆಯಾದಳು

೪-೧೫ ಈ ಪುಲೋಮಿಯು ಹುಡುಗಿಯಾಗಿದ್ದಾಗ ಯಾವಾಗಲೂ ಅಳುತ್ತಲೇ ಇದ್ದಳು ಒಂದು ದಿನ ಈ ಅಳುಪುರುಕಿಯಾದ ಮಗಳನ್ನು ಕುರಿತು ಅವಳ ತಂದೆಯು "ಗುಮ್ಮ ಬಂದಿದ್ದಾನೆ! ಅಳಬೇಡ! ಎಂದು ಮಕ್ಕಳನ್ನು ಲೋಕಾರೂಢಿಯಾಗಿ ಹೆದರಿಸುವಂತೆ, ಪುಲೋಮಿ! ಪುಲೋಮಿ! ಹೊರಗೆ ರಾಕ್ಷಸ ಬಂದಿದ್ದಾನೆ ಅಳುವ ಮಕ್ಕನ್ನು ಹಿಡಿದುಕೊಂಡು ಹೋಗುತ್ತಾನೆ ಅಳಬೇಡಮ್ಮಾ ಎಂದು ಹೇಳುತ್ತಿದ್ದನು ಏನಾದರೂ ಆ ಹೆಣ್ಣು, ಅಳುವನ್ನು ಬಿಡದೇ ಚಿಟ್ಟೆಬ್ಬಿಸುತ್ತಿದ್ದುದನ್ನು ನೋಡಿ ಬಹು ಬೇಸರಪಟ್ಟು, ಲೋ, ರಾಕ್ಷಸಾ! ಇಲ್ಲಿ ಬಾರೋ ಇಲ್ಲೊಂದು ಮಗು ಅಳುತ್ತಿದೆ. ಬಲಾತ್ಕಾರವಾಗಿ ಹಿಡಿದುಕೊಂಡು ಹೋಗೋ! ಎಂದು ಹೇಳಿದನು

ಇದನ್ನು ಕೇಳಿದರೆ ಒಂದು ಸಣ್ಣ ಕಥೆ ಜ್ಞಾಪಕಕ್ಕೆ ಬರುತ್ತದೆ ಹೀಗೇ ಈ ಪುಲೋಮಿಯಂತೆ ಒಂದು ದಿನ ಒಂದು ಮಗುವು ಬಹು ಹಠಮಾಡಿ ಅಳುತ್ತಿದ್ದಾಗ ಆದರ ಅಮ್ಮನು, ಅಳಬೇಡ ಹೊರಗೆ ತೋಳಬಂದಿದೆ ಅತ್ತರೆ ಆದಕ್ಕೆ ಹಿಡಿದು

**ನಿರ್ಭರ್ತ್ಸ್ಯ ತಂ ದುರಾಚಾರಂ ಪುಲೋಮಾ ದಾನವೋತ್ತಮಃ ।**
**ಕಾಲೇನ ಪ್ರದದೌ ಕನ್ಯಾಂ ಭೃಗವೇ ತಾಂ ಸುಮಧ್ಯಮಾಂ ॥ ೭ ॥**

**ಅಂತರ್ವತ್ನೀಂ ತು ರಹಿತಾಂ ಭೃಗುಣಾ ತಾಮನಿಂದಿತಾಂ ।**
**ಅಗ್ನಿಹೋತ್ರಗತಾಂ ದೃಷ್ಟ್ವಾ ಪುಲೋಮಾಗ್ನಿಮಥಾಬ್ರವೀತ್ ॥ ೮॥**

**ಪೌಲೋಮೀ ಯದಿ ಮತ್ಪೂರ್ವಾ ಸೇಯಂ ಪಾವಕ ಶಂಸ ಮೇ ।**
**ತಾಮಗ್ನಿರಬ್ರವೀತ್ತಸ್ಯ ಸೇಯಂ ಪತ್ನೀ ಭೃಗೋಃ ಶುಭಾ ॥ ೯ ॥**

**ಏವಮಗ್ನೇರ್ಭೃಗೋಃ ಶ್ರುತ್ವಾ ತಾಂ ಜಹಾರ ಸ ರಾಕ್ಷಸಃ ।**
**ತಸ್ಯಾಂ ತು ಹ್ರಿಯಮಾಣಾಯಾಂ ಗರ್ಭಃ ಕುಕ್ಷೇಸ್ತದಾ ಚ್ಯುತಃ ॥ ೧೦ ॥**

ಕೊಡುತ್ತೇನೆ, ಎಂದು ಹೇಳಿದನಂತೆ. ಆ ಸಮಯಕ್ಕೆ ಸರಿಯಾಗಿ ಕಾಡಿನಿಂದೊಂದು ಹಸಿದ ತೋಳವು ಇವರ ಮನೆ ಮುಂದ ಹೋಗುತ್ತಿತ್ತಂತೆ ಆದಕ್ಕೆ ಈ ಮಾತನ್ನು ಕೇಳಿ ಬಹು ಸಂತೋಷವಾಗಿ ಒಳಕ್ಕೆ ನುಗ್ಗಿ ಆ ಶಿಶುವ ಮಗುವನ್ನು ಹಿಡಿದುಕೊಂಡು ಹೊರಟೇಹೋಯಿತಂತೆ

ಈ ಕಥೆಯಂತೆ ಪುಲೋಮನು ತನ್ನ ಮಗಳನ್ನು ಹೆದರಿಸಿದಾಡವೆ ಮನೆಯ ಹೊರಗ ಸುತ್ತಾಡುತ್ತಿದ್ದ ಒಬ್ಬ ಛಿದ್ರಾನ್ವೇಷಿಯೂ, ದುರಾಚಾರಿಯೂ ಆದ ಪುಲೋಮನೆಂಬ ಹೆಸರನ್ನಿಟ್ಟುಕೊಂಡಿದ್ದ ಒಬ್ಬ ದಾನವನು, ಮನೆಯೊಳಗಿನಿಂದ ಈ ಮಾತು ಕೇಳಿ ಬಂದೊಡನೆ ಒಳಗ ನುಗ್ಗಿಯೇ ಬಿಟ್ಟನು ನುಗ್ಗಿದೊಡನೆ ಆ ಅಯೋಗ್ಯರಾಕ್ಷಸನು ಆ ಪುಲೋಮಿಯನ್ನು ಬಲಾತ್ಕಾರವಾಗಿ ಎತ್ತಿಕೊಂಡು ಹೊರಡುವುದಕ್ಕೇ ಅರಂಭಿಸಿದನು ಇದನ್ನು ನೋಡಿ ತಂದೆಯಾದ ಪುಲೋಮನಿಗೆ ಕೋಪ ಬಂದು, ಆ ದ್ರೋಹಿಯಾದ ರಾಕ್ಷಸನನ್ನು ಬೈದು ಹೊರಕ್ಕೋಡಿಸಿದನು

ಹೀಗೆ ಕೆಲವು ಕಾಲ ಕಳೆದ ಮೇಲೆ ಈ ಪುಲೋಮಿಗೆ ವಿವಾಹ ವಯಸ್ಸು ಪ್ರಾಪ್ತವಾಗಲು ಪುಲೋಮನು ಆ ತನ್ನ ಮಗಳನ್ನು ಭೃಗುಮಹರ್ಷಿಗೆ ಮದುವೆ ಮಾಡಿಕೊಟ್ಟನು ಮದುವೆಯಾಯಿತು, ಪ್ರಸ್ತವೂ ಆಯಿತು. ಪುಲೋಮಿಯು ಬಸುರಿಯೂ ಆದಳು ಒಂದು ದಿನ ಇವಳ ಗಂಡನಾದ ಭೃಗುವು ಗರ್ಭಿಣಿಯಾಗಿದ್ದ ಹೆಂಡತಿಯನ್ನೊಬ್ಬಳನ್ನೇ ಮನೆಯಲ್ಲಿ ಬಿಟ್ಟು ಅಗ್ನಿಹೋತ್ರದ ಕೆಲಸಕ್ಕಾಗಿ ಹೊರಕ್ಕೆ ಹೋಗಿದ್ದನು ಆ ಸಮಯದಲ್ಲಿ ದ್ರೋಹಿಯಾದ ಪುಲೋಮನು ಒಳಕ್ಕೆ ನುಗ್ಗಿ,

**ಚ್ಯವನಾತ್ ಚ್ಯವನೋನಾಮ ಬಭೂವ ಸ ಮಹಾತಪಾಃ ।**
**ದೃಷ್ಟಮಾತ್ರಸ್ತು ತೇನಾsಸೌ ಪುಲೋಮಾಭಸ್ಮಸಾದ್ಗತಃ ॥ ೧೧ ॥**

**ಪುಲೋಮ್ನಾsಶ್ರುನಿಪಾತೇನ ನದೀ ಜಾತಾ ವಧೂವರಾ ।**
**ವಹ್ನಿಶ್ಚ ಸರ್ವಭಕ್ಷ್ಯತ್ವಂ ಭೃಗುಶಾಪಾದುಪಾಗತಃ ॥ ೧೨ ॥**

**ಹುತಾಶನಸ್ತು ಸಂಕ್ರುದ್ಧಶ್ಶಾಪಂ ಪ್ರಾಪ್ಯ ದ್ವಿಜೋತ್ತಮಾತ್ ।**
**ಲೋಕಕಾರ್ಯರತಿರ್ಬ್ರಹ್ಮಾ ಸ್ವಯಂ ವಚನಮಬ್ರವೀತ್ ॥ ೧೩ ॥**

**ವಹ್ನೇ ತವಾರ್ಚಿಭಿಃ ಸ್ಪೃಷ್ಟಂ ಶುಚಿ ಸರ್ವಂ ಭವಿಷ್ಯತಿ ।**
**ಶುಚಿಭೂತಂ ತತಃ ಪಶ್ಚಾದ್ಭಕ್ಷಯಿಷ್ಯತ್ಯಸಂಶಯಂ ॥ ೧೪ ॥**

ಅಗ್ನಿಕುಂಡದಲ್ಲಿದ್ದ ಅಗ್ನಿಯನ್ನು ಕುರಿತು, ಎಲೈ ಅಗ್ನಿಯೆ! ಇವಳಾರನ್ನಾದರೂ ಮದುವೆಯಾಗಿದ್ದಾಳೆಯೇ? ಎಂದು ಕೇಳಿದನು ಅದಕ್ಕೆ ಅಗ್ನಿಯು, ಹೌದು ಇವಳನ್ನು ಭೃಗುಋಷಿಯು ಲಗ್ನವಾಗಿದ್ದಾನೆ ಇವಳು ಅವನ ಹೆಂಡತಿಯೆಂದು ಹೇಳಿದನು ಈ ರೀತಿ ಹೇಳಿದ ಯಜ್ಞೇಶ್ವರನ ಮಾತನ್ನು ಕೇಳಿ ಆ ದುರಾಚಾರಿಯಾದ ಪೋಲಿ ಪುಲೋಮನು, ಆ ಗರ್ಭಿಣೀ ಸ್ತ್ರೀಯಾದ ಪುಲೋಮೆಯನ್ನು ಕದ್ದು ಎತ್ತಿಕೊಂಡು ಹೊರಟುಹೋದನು. ಆಗ ಆಕೆಯು ದುಃಖದಿಂದ ಆ ರಾಕ್ಷಸನ ಚೇಷ್ಟೆಗೆ ವ್ಯಸನಪಡುತ್ತಿರಲು ಅವಳ ಹೊಟ್ಟೆಯಲ್ಲಿದ್ದ ಮಗುವು ಕೆಳಗೆ ಜಾರಿಬಿದ್ದಿತು ಹೀಗೆ ಗರ್ಭಚ್ಯುತವಾದುದರಿಂದ ಆ ಮಗುವಿಗೆ ಚ್ಯವನನೆಂದು ಹಸರಾಯಿತು ಆ ಮಹಾತಪಸ್ವಿಯು ತಾಯಿಯ ಹೊಟ್ಟೆಯಿಂದ ಹುಟ್ಟಿದೊಡನೆಯೇ, ಕೇಳಬೇಕೆ! ಭೃಗುಸಂತಾನವನ್ನು, ಹುಟ್ಟಿದ ಕ್ಷಣದಲ್ಲೇ ಆ ತಪೋಮಯ ಶಿಶುವು ಪುಲೋಮನನ್ನು ದುರದುರನೆ ನೋಡಿತು ನೋಡಿದ ಕ್ಷಣವೇ ಆ ಪುಲೋಮನು ಉರಿದು ಬೂದಿಯಾಗಿ ಹೋದನು ಅಳುತ್ತಿದ್ದ ಪುಲೋಮೆಯ ಕಣ್ಣುಗಳಿಂದ ಕೆಳಗೆ ಬಿದ್ದ ಕಣ್ಣೀರು ಹೊಳೆಯಾಗಿ ಹರಿದುಹೋಯಿತು ಅದಕ್ಕೆ ಪುಲೋಮಾನದಿಯೆಂದು ಹೆಸರಾಯಿತು ಆಗ ಭೃಗುವು ಬೇಗ ಬಂದು ಇಲ್ಲಿ ನಡೆದ ಅನರ್ಥಗಳನ್ನೆಲ್ಲಾ ನೋಡಿ ಆ ಪುಲೋಮನನ್ನು ಒಳಕ್ಕೆ ಬಿಟ್ಟ ಅಗ್ನಿಯಮೇಲೆ ಕೋಪಿಸಿಕೊಂಡು, ನೀನು ಸರ್ವಭಕ್ಷಕನಾಗು (ಸಿಕ್ಕಿದ್ದನ್ನು ದಹಿಸು), ಹೀಗೆಂದು ಶಾಪಕೊಟ್ಟನು ಈ ರೀತಿ ಭೃಗುಶಾಪದಿಂದ ದುಃಖಿತನಾದ ಅಗ್ನಿಯು ಎಲ್ಲರ ಮನೆಯ ಅಡಿಗೆಯ ಕೆಲಸಕ್ಕೂ ಸಹಾಯಮಾಡತೊಡಗಿದನು ಆಗ ಭೃಗುವು ದಯೆಯಿಂದ, ಎಲೈ

ಏತತ್ತವೋಕ್ತಂ ಚ್ಯವನಸ್ಯ ಜನ್ಮ
ನಾಶಸ್ತಥಾ ರಾಕ್ಷಸಪುಂಗವಸ್ಯ ।
ವಹ್ನೇಃ ಶುಚಿತ್ವಂ ಚ ತಥಾಽರ್ಚಿಷಾಂ ವೈ
ವಂಶಂ ಪುಲೋಮ್ನೋಥ ನಿಬೋಧ ರಾಜನ್ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚ್ಯವನೋತ್ಪತ್ತಿವರ್ಣನೋನಾಮ
ನವನವತ್ಯಧಿಕ ಶತತಮೋಽಧ್ಯಾಯಃ.

---

ಅಗ್ನಿಯೇ! ಎಂತಹ ಅಪವಿತ್ರ (ಅಶುಚಿ) ಪದಾರ್ಥವೂ ನಿನ್ನ ಕಿರಣ ಸ್ಪರ್ಶದಿಂದ ಪವಿತ್ರವಾಗಲಿ, ಆ ರೀತಿ ಶುಚಿಯಾದ ಪದಾರ್ಥವನ್ನಾವುದನ್ನಾಗಲಿ ನೀನು ಭಕ್ಷಿಸೆಂದು ವರವನ್ನು ಕೊಟ್ಟನು

ಎಲೈ ವಜ್ರನರೇಶ್ವರನೇ! ಇಂತಹ ಈ ಚ್ಯವನಋಷಿಯ ಜನನ ವೃತ್ತಾಂತವನ್ನೂ ಪುಲೋಮ ರಾಕ್ಷಸನು ಚ್ಯವನನ ನೇತ್ರಾಗ್ನಿಯಿಂದ ದಹಿಸಿಹೋದುದನ್ನೂ ಅಗ್ನಿಕಿರಣಗಳ ಪಾರಿಶುದ್ಧ್ಯವನ್ನೂ ನಿನಗೆ ಹೇಳಿರುವೆನು. ಇನ್ನು ಮುಂದೆ ಭೃಗುಗಳ ಮಾವನಾದ ಪುಲೋಮನ ವಂಶಾನುಕಥನಮಾಡುವೆನು, ಕೇಳೈ! ಎಂದು ಮಾರ್ಕಂಡೇಯರು ಹೇಳಿದರು

ಇಲ್ಲಿಗೆ ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಚ್ಯವನೋತ್ಪತ್ತಿ ವರ್ಣನೆಯೆಂಬ
ಹೆಸರಿನ ನೂರತೊಂಭತ್ತೊಂಭತ್ತನೆಯ ಅಧ್ಯಾಯವು
ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಪುಲೋಮ್ನಸ್ತನಯಃ ಶ್ರೀಮಾನ್ಮಧುರ್ನಾಮ ನಿಶಾಚರಃ ।
ವಿನಿಷ್ಕೃಷ್ಯ ಸ್ವಕಾಚ್ಛೂಲಾಚ್ಛೂಲಂ ಪ್ರಾದಾದ್ವೃಷಧ್ವಜಃ ॥ ೧ ॥

ತಪಸಾ ತೋಷಿತೋ ಯಸ್ಯ ಸುಪುತ್ರಸ್ಯ ಮಹಾತ್ಮನಃ ।
ತ್ರೈಲೋಕ್ಯವಿಜಯಾಸಕ್ತೇ ತೇನ ರಾಜೇಂದ್ರ ರಾವಣೇ ॥ ೨ ॥

ದೀಕ್ಷಿತೇ ಮೇಘನಾದೇ ಚ ತಥಾ ಯಾತೇ ನಿಕುಂಭಿಲಾಂ ।
ಅಂತರ್ಜಲಗತೇ ವೀರೇ ತಥೈವ ಚ ವಿಭೀಷಣೇ ॥ ೩ ॥

### ಇನ್ನೂರನೆಯ ಅಧ್ಯಾಯವು.

೧-೮. ಮಾರ್ಕಂಡೇಯನು ಹೇಳುತ್ತಾನೆ —ಇದುವರಿಗೆ ಪುಲೋಮನ ಹೆಣ್ಣು ಮಕ್ಕಳ ಸಂತತಿಯನ್ನು ಹೇಳಿಯಾಯಿತು ಇನ್ನು ಮುಂದೆ ಗಂಡು ಸಂತಾನ ವನ್ನು ತಿಳಿಸುತ್ತೇನೆ ಪುಲೋಮನಿಗೆ ಮಧುವೆಂಬ ಹೆಸರಿನ ಮಗನಿದ್ದನು ಈ ಮಧುವು ಪರಮೇಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ, ಅವನಿಂದ ಶೂಲಾಯುಧವನ್ನು ಸಂಪಾದಿಸಿದ್ದನು ಇದಕ್ಕೆ ಮಹೇಶ್ವರ ಶೂಲವೆಂದು ಹೆಸರು ಈ ಶೂಲಬಲ ದಿಂದ ಇವನು ಸಕಲ ಲೋಕವನ್ನೂ ಗೆದ್ದಿದ್ದನು. ಒಂದು ಬಾರಿ ಲಂಕಾಪಟ್ಟಣದಿಂದ ರಾವಣನು ದಿಗ್ವಿಜಯಕ್ಕಾಗಿ ಹೊರಗೆ ಹೋಗಿದ್ದನು ಅವನ ಮಗ ಮೇಘನಾದನು, (ಇಂದ್ರಜಿತು) ನಿಕುಂಭಿಲಾ ಯಾಗವನ್ನು ಮಾಡಲು ಪಾತಾಳಲೋಕಕ್ಕೆ ಹೋಗಿ

ನಿದ್ರಾವಶಗತೇ ರಾಜನ್ಕುಂಭಕರ್ಣೇ ಸುರದ್ವಿಷಿ ।
ಮಾಲಿನಸ್ತನಯಾ ತೇನ ರಾವಣಸ್ಯ ಸ್ವಸಾ ಹೃತಾ ॥ ೪ ॥

ಕುಂಭೀನಸೀ ಮಹಾಭಾಗಾ ರೂಪದ್ರವಿಣಸಂಯುತಾ ।
ಯಸ್ಯಾಮಸ್ಯ ಸುತೋ ಜಜ್ಞೇ ಲವಣೋ ನಾಮ ರಾಕ್ಷಸಃ ॥ ೫ ॥

ಯೇನ ಶೂಲಪ್ರಭಾವೇನ ಮಾಂಧಾತಾ ವಿನಿಪಾತಿತಃ ।
ನ ತಸ್ಯ ಪುತ್ರೋ ಭಾರ್ಯಾ ವಾ ಬಭೂವಾತಿದುರಾತ್ಮನಃ ॥ ೬ ॥

ಪ್ರಾಣಿನಾಂ ಪುರುಷಾದ್ಯಾನಾಂ ಸಹಸ್ರೈರ್ದಶಭಿರ್ನೃಪ ।
ಆಹಾರಮಾಹ್ನಿಕಂ ತಸ್ಯ ಭವತ್ಯೌದರಿಕಸ್ಯ ತು ॥ ೭ ॥

---

ಅಲ್ಲಿ ಯಾಗದೀಕ್ಷೆಯನ್ನು ವಹಿಸಿದ್ದನು ವಿಭೀಷಣನು ಅಂತರ್ಜಲದಲ್ಲಿ ಪರಮಾತ್ಮನನ್ನು ಕುರಿತು ತಪಸ್ಸುಮಾಡುತ್ತಿದ್ದನು. ಕುಂಭಕರ್ಣನು ಗಾಢನಿದ್ರೆಯಲ್ಲಿದ್ದನು ಆಗ ರಾವಣನ ತಂಗಿ ಕುಂಭೀನಸಯೆಂಬುವಳು ಅಂತಃಪುರದಲ್ಲಿ ಒಬ್ಬಳೇ ಇದ್ದಳು ಅವಳು ಬಹಳ ರೂಪ ಮದದಿಂದಲೂ, ಧನಮದದಿಂದಲೂ ಕೊಬ್ಬಿ ನಿರ್ಲಕ್ಷ್ಯದಿಂದಿದ್ದಳು ಅಂತಹ ಕುಂಭೀನಸಿಯನ್ನು ಈಮಧುದೈತ್ಯನು ಲಂಕೆಯಿಂದಅಪಹರಿಸಿಕೊಂಡು ಹೋಗಿ ಅವಳನ್ನು ಲಗ್ನಮಾಡಿಕೊಂಡನು. ಆಗ ಅವಳ ಹೊಟ್ಟೆಯಲ್ಲಿ ಲವಣಾಸುರನು ಹುಟ್ಟಿದನು ಇವನ ಕೈಗೆ ತನ್ನ ತಂದಯು ಮಹೇಶ್ವರಶೂಲವು ಸಿಕ್ಕಿತು

ನಾವು ಹಿಂದೆ ಮಾಂಧಾತನು ಮಹೇಶ್ವರ ಶೂಲಕ್ಕೆ ಆಹುತಿಯಾದನೆಂದ ಹೇಳಿರುವೆವಷ್ಟೆ ! (೧೭೧ನೇ ಅಧ್ಯಾಯವನ್ನು ನೋಡಿ ) ಆ ಮಹೇಶ್ವರ ಶೂಲದಿಂದ ಮಾಂಧಾತನನ್ನು ಕೊಂದವನು ಈ ಲವಣಾಸುರನೇ ಎಂಬುದನ್ನು ವಾಚಕರು ನೆನಪಿನಲ್ಲಿಟ್ಟಿರಬೇಕು

ಅತ್ಯಂತ ದುರಾತ್ಮನಾದ ಈ ಲವಣಾಸುರನಿಗೆ ಹೆಂಡತಿ ಮಕ್ಕಳಾರೂ ಇರಲಿಲ್ಲ ಇವನಿಗೆ ಪ್ರತಿದಿನವೂ ಹೊಟ್ಟೇಪೂಜೆಯೇ ನಿತ್ಯಾಹ್ನಿಕವಾಗಿದ್ದಿತು ಮನುಷ್ಯರೇ ಮೊದಲಾಗಿ ಎಂತಹ ಘೋರಮೃಗಗಳಾಗಲೀ, ಒಟ್ಟಿನಲ್ಲಿ ಹತ್ತು ಸಾವಿರ ಪ್ರಾಣಿಗಳು

ರಾಮಾಜ್ಞಯಾ ತಸ್ಯ ಬಭೂವ ರಾಜ-
ನ್ರಾಮಾನುಜೋ ಮೃತ್ಯುರದೀನಸತ್ತ್ವಃ ।
ಶತ್ರುಘ್ನನಾಮಾ ಭುವನಸ್ಯ ವೀರೋ
ಮಹಾಂತರಸ್ಥೋ ಹರಿರಪ್ರಮೇಯಃ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರಹೇತಿವಂಶಾನುಕೀರ್ತನಂನಾಮ
ದ್ವಿಶತತಮೋಽಧ್ಯಾಯಃ.

---

ಪ್ರತಿದಿನವೂ ಇವನ ಹೊಟ್ಟೆಗೆ ಆಹಾರವಾಗಬೇಕಾಗಿತ್ತು. ಇಂತಹ ಘೋರಕೃತ್ಯ ವನ್ನೆಸಗುತ್ತಿದ್ದ ಈ ಲವಣಾಸುರನನ್ನು ಶ್ರೀರಾಮಚಂದ್ರನ ತಮ್ಮನಾದ ಶತ್ರುಘ್ನನು ರಾಮಾಜ್ಞೆಯಿಂದಲೇ ಕೊಂದು ಲೋಕೋಪಕಾರಮಾಡಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪ್ರಹೇತಿವಂಶಾನು ಕೀರ್ತನೆ
ಯೆಂಬ ಹೆಸರಿನ ಇನ್ನೂರನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕಾಧಿಕದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಯಕ್ಷೇಣ ರಾಕ್ಷಸೇ ಜಾತೇ ತತಃ ಕಾಲೇನ ಕೇನಚಿತ್ ।
ಏಷಾ ಸುಷಾವ ಗಂಧರ್ವಂ ಶೈಲೂಷಮಿತಿ ವಿಶ್ರುತಂ ॥ ೧ ॥

ಕೋಟ್ಯಸ್ತಿಸ್ರಸ್ತು ಪುತ್ರಾಣಾಂ ತಸ್ಯಾಸನ್ಸುದುರಾತ್ಮನಃ ।
ಏತಸ್ಮಿನ್ನೇವ ಕಾಲೇ ತು ವಿಸೃಷ್ಟಾಸ್ತು ಪ್ರಜಾಸು ಚ ॥ ೨ ॥

ಬ್ರಹ್ಮಾದಿದೇಶ ರಾಜ್ಯಾನಿ ಜಾತ್ಯಾಂಜಾತ್ಯಾಂ ಯಥಾಕ್ರಮಂ ।
ಗಂಧರ್ವಾಣಾಮಧಿಪತಿಂ ಚಕ್ರೇ ಚಿತ್ರರಥಂ ತಥಾ ॥ ೩ ॥

## ಇನ್ನೂರೊಂದನೆಯ ಅಧ್ಯಾಯವು.

೧-೮ ಮಾರ್ಕಂಡೇಯನು ಹೇಳುತ್ತಾನೆ --ರಾಕ್ಷಸರ ಉತ್ಪತ್ತಿಯು ಈ ರೀತಿ ಇರುವಲ್ಲಿ ಕಶ್ಯಪರ ಹೆಂಡತಿ ಖಶೆಯು ಕೆಲವು ಕಾಲದ ಮೇಲೆ ಶೈಲೂಷನೆಂಬ ಗಂಧರ್ವನನ್ನು ಹೆತ್ತಳು ಆ ದುರಾತ್ಮನಾದ ಶೈಲೂಷ ಗಂಧರ್ವನಿಗೆ ಮೂರು ಕೋಟಿ ಮಕ್ಕಳಾದರು ಈ ಕಾಲದಲ್ಲಿ ಲೋಕದ ಜನರೆಲ್ಲರೂ ಯದ್ವಾತದ್ವಾ ಚದರಿ ಹೋಗುತ್ತ ಬಂದರು. ಆಗ ಪ್ರಜೆಗಳನ್ನೆಲ್ಲಾ ಬ್ರಹ್ಮನು ವಿಂಗಡಿಸಿ ಕೆಲವು ದೇಶಗಳನ್ನು ಅವರವರಿಗೆ ಹಂಚಿಕೊಟ್ಟನು ಆಗ ಗಂಧರ್ವರ ಅಧಿಪತಿಯಾದ ಚಿತ್ರರಥನನ್ನು ಈ ಶೈಲೂಷರ ಗುಂಪಿನ ಯಜಮಾನನನ್ನಾಗಿ ಮಾಡಿದನು ಆಗ ಶೈಲೂಷ

ರಾಮಾಜ್ಞಯಾ ತಸ್ಯ ಬಭೂವ ರಾಜ-
ನ್ರಾಮಾನುಜೋ ಮೃತ್ಯುರದೀನಸತ್ತ್ವಃ ।
ಶತ್ರುಘ್ನನಾಮಾ ಭುವನಸ್ಯ ವೀರೋ
ಮಹಾಂತರಸ್ಥೋ ಹರಿರಪ್ರಮೇಯಃ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರಹೇತಿವಂಶಾನುಕೀರ್ತನಂನಾಮ
ದ್ವಿಶತತಮೋಽಧ್ಯಾಯಃ

---

ಪ್ರತಿದಿನವೂ ಇವನ ಹೊಟ್ಟೆಗೆ ಆಹಾರವಾಗಬೇಕಾಗಿತ್ತು. ಇಂತಹ ಘೋರಕೃತ್ಯವನ್ನೆಸಗುತ್ತಿದ್ದ ಈ ಲವಣಾಸುರನನ್ನು ಶ್ರೀರಾಮಚಂದ್ರನ ತಮ್ಮನಾದ ಶತ್ರುಘ್ನನು ರಾಮಾಜ್ಞೆಯಿಂದಲೇ ಕೊಂದು ಲೋಕೋಪಕಾರಮಾಡಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪ್ರಹೇತಿವಂಶಾನು ಕೀರ್ತನೆ
ಯೆಂಬಹೆಸರಿನ ಇನ್ನೂರನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕಾಧಿಕದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಯಕ್ಷೇನ ರಾಕ್ಷಸೇ ಜಾತೇ ತತಃ ಕಾಲೇನ ಕೇನಚಿತ್ ।
ಏಷಾ ಸುಷಾವ ಗಂಧರ್ವಂ ಶೈಲೂಷಮಿತಿ ವಿಶ್ರುತಂ ॥ ೧ ॥

ಕೋಟ್ಯಸ್ತಿಸ್ರಸ್ತು ಪುತ್ರಾಣಾಂ ತಸ್ಯಾಸನ್ಸುದುರಾತ್ಮನಃ ।
ಏತಸ್ಮಿನ್ನೇವ ಕಾಲೇ ತು ವಿಸೃಷ್ಟಾಸ್ತು ಪ್ರಜಾಸು ಚ ॥ ೨ ॥

ಬ್ರಹ್ಮಾಽದಿದೇಶ ರಾಜ್ಯಾನಿ ಜಾತ್ಯಾಂಜಾತ್ಯಾಂ ಯಥಾಕ್ರಮಂ।
ಗಂಧರ್ವಾಣಾಮಧಿಪತಿಂ ಚಕ್ರೇ ಚಿತ್ರರಥಂ ತಥಾ ॥ ೩ ॥

### ಇನ್ನೂರೊಂದನೆಯ ಅಧ್ಯಾಯವು.

೧-೫ ಮಾರ್ಕಂಡೇಯನು ಹೇಳುತ್ತಾನೆ --ರಾಕ್ಷಸರ ಉತ್ಪತ್ತಿಯು ಈ ರೀತಿ ಇರುವಲ್ಲಿ ಕಶ್ಯಪರ ಹೆಂಡತಿ ಖಶೆಯು ಕೆಲವು ಕಾಲದ ಮೇಲೆ ಶೈಲೂಷನೆಂಬ ಗಂಧರ್ವನನ್ನು ಹೆತ್ತಳು ಆ ದುರಾತ್ಮನಾದ ಶೈಲೂಷ ಗಂಧರ್ವನಿಗೆ ಮೂರು ಕೋಟಿ ಮಕ್ಕಳಾದರು ಈ ಕಾಲದಲ್ಲಿ ಲೋಕದ ಜನರೆಲ್ಲರೂ ಯುದ್ಧಾತದ್ವಾ ಚದರಿ ಹೋಗುತ್ತ ಬಂದರು. ಆಗ ಪ್ರಜೆಗಳನ್ನೆಲ್ಲಾ ಬ್ರಹ್ಮನು ವಿಂಗಡಿಸಿ ಕೆಲವು ದೇಶಗಳನ್ನು ಆವರವರಿಗೆ ಹಂಚಿಕೊಟ್ಟನು ಆಗ ಗಂಧರ್ವರ ಅಧಿಪತಿಯಾದ ಚಿತ್ರರಥನನ್ನು ಈ ಶೈಲೂಷರ ಗುಂಪಿನ ಯಜಮಾನನನ್ನಾಗಿ ಮಾಡಿದನು ಆಗ ಶೈಲೂಷ

ಶೈಲೂಷಪುತ್ರಾ ಗಂಧರ್ವಾಃ ಸಂಘಶಃ ಕೃತನಿಶ್ಚಯಾಃ ।
ಶಾಸನೇನ್ನೈವ ತಿಷ್ಠಂತಿ ತಸ್ಯ ಚಿತ್ರರಥಸ್ಯ ತು ॥ ೪ ॥

ಸಿಂಧೋರುಭಯಕೂಲೇಷು ದೇಶಮುತ್ಸಾದ್ಯ ತೇ ತದಾ ।
ಹತ್ವಾ ಚ ಮನುಜಾಂಸ್ತತ್ರ ನಿವಸಂತಿ ಗತವ್ಯಥಾಃ ॥ ೫ ॥

ಉತ್ಸಾದಯಂತೋ ರಾಷ್ಟ್ರಾಣಿ ರಾಜ್ಞಾಂ ವಿಪ್ರಿಯಕಾರಕಾಃ ।
ತಾನ್ ಶಶಾಪ ಸ ಗಂಧರ್ವರಾಜಶ್ಚಿತ್ರರಥಃ ಪ್ರಭುಃ ॥ ೬ ॥

ಅಧರ್ಮನಿರತಾಃ ಸರ್ವೇ ಮಾನುಷಾದ್ವಧಮಾಪ್ಸ್ಯಥ ॥ ೭ ॥

ಶಾಪೇನ ತಸ್ಯಾಪ್ರತಿಮೇನ ರಾಜ-
ನ್ಗಂಧರ್ವರಾಜ್ಯಾತಿಬಲಸ್ಯ ಸಂಖ್ಯೇ ।

ಪುತ್ರರೆಲ್ಲರೂ ಈ ಚಿತ್ರರಥ ಗಂಧರ್ವನ ಕೈಕೆಳಗೆ ಇರಬೇಕಾಗಿ ಬಂತು. ಆಗ ಆ ಶೈಲೂಷರೆಲ್ಲರೂ ಗುಂಪು ಗುಂಪಾಗಿ ಕೂಡಿ ಸಭೆಗಳನ್ನು ಮಾಡಿ ಈ ಚಿತ್ರರಥನ ಎದುರುಬಿದ್ದು ಸಿಂಧೂನದಿಯ ಉಭಯಪಾರ್ಶ್ವಗಳಲ್ಲಿದ್ದ ದೇಶಗಳನ್ನೆಲ್ಲಾ ಗೆದ್ದು ಅಲ್ಲಿದ್ದ ಜನರನ್ನೆಲ್ಲಾ ಕೊಂದು ಅಲ್ಲಿ ರಾಜ್ಯವನ್ನು ಕಟ್ಟಿ ಆಳತೊಡಗಿದರು. ಆಗ ಆ ಶೈಲೂಷರು ದೇಶಗಳ ಮೇಲೆ ಬಿದ್ದು ರಾಜನಿಗೆ ವಿರೋಧವಾಗಿ ವರ್ತಿಸುತ್ತಾ ರಾಜ್ಯ ಕಂಟಕರಾಗಿ ಪರಿಣಮಿಸಿದರು. ಆಗ ಆ ಗಂಧರ್ವರಾಜನಾದ ಚಿತ್ರರಥನು ಇವರ ಮೇಲೆ ಬಹಳ ಕೋಪಮಾಡುತ್ತಾ, ಎಲೈ ಅಧರ್ಮನಿರತರಾದ ಯಕ್ಷರೇ, ನೀವು ಪರ ಹಿಂಸಕರಾಗಿ ಪರಿಣಮಿಸಿರುತ್ತೀರಿ. ನಿಮಗೆಲ್ಲಾ ಮನುಷ್ಯರೇ ಶತ್ರುಗಳಾಗಿ, ಆ ಮನುಷ್ಯರಿಂದಲೇ ಮರಣವುಂಟಾಗಲೆಂದು ಶಾಪವನ್ನು ಕೊಟ್ಟನು. ಈ ರೀತಿ ಶಾಪ

ಬಭೂವ ಮೃತ್ಯುರ್ಭರತಸ್ತು ತೇಷಾಂ
ದೇಹಾಂತರಸ್ಥೋ ಹರಿರಪ್ರಮೇಯಃ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷವಂಶವರ್ಣನಂನಾಮೈಕಾಧಿಕ
ದ್ವಿಶತತಮೋಽಧ್ಯಾಯಃ.



ಗ್ರಸ್ತರಾದ ಆ ಶೈಲೂಷರೆಲ್ಲರೂ ಪರಮಾತ್ಮರೂಪೀ ರಾಮಾಜ್ಞೆಯಿಂದ ಬದ್ಧನಾದ ಅವನ ಪ್ರೇಮದ ತಮ್ಮ ಭರತನಿಂದ ಯುದ್ಧದಲ್ಲಿ ಮೃತಿಹೊಂದಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಶೈಲೂಷವಂಶವರ್ಣನೆಯೆಂಬ
ಹೆಸರಿನ ಇನ್ನೂರೊಂದನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## || ದ್ವ್ಯಧಿಕಶತತಮೋಽಧ್ಯಾಯಃ ||

|| ವಜ್ರ ಉವಾಚ ||

ಶೈಲೂಷಪುತ್ರಾ ಗಂಧರ್ವಾ ಭರತೇನ ಕಥಂ ಹತಾಃ ।
ಕಿಮರ್ಥಂ ತು ಮಹಾಭಾಗ ತನ್ಮಮಾಚಕ್ಷ್ವ ಪೃಚ್ಛತಃ || ೧ ||

|| ಮಾರ್ಕಂಡೇಯ ಉವಾಚ ||

ಅಯೋಧ್ಯಾಯಾಮಯೋಧ್ಯಾಯಾಂ ರಾಮೇ ದಶರಥಾತ್ಮನೇ ।
ಕೈಕೇಯಾಧಿಪತಿಃ ಶ್ರೀಮಾನ್ಯುಧಾಜಿನ್ನಾಮ ಪಾರ್ಥಿವಃ || ೨ ||

ರಾಮಾಯ ಪ್ರೇಷಯಾಮಾಸ ದೂತಂ ಭರತಮಾತುಲಃ ।
ವೃದ್ಧಂ ಪುರೋಹಿತಂ ಗಾರ್ಗ್ಯಂ ಯೇನ ಕಾರ್ಯೇಣ ತಚ್ಛೃಣು || ೩ ||

### ಇನ್ನೂರೆರಡನೆಯ ಅಧ್ಯಾಯವು.

೧. ವಜ್ರಮಹಾರಾಜನು ಪ್ರಶ್ನೆ ಮಾಡುತ್ತಾನೆ —ಎಲೈ ಮಾರ್ಕಂಡೇಯರೇ! ಶೈಲೂಷನ ಪುತ್ರರಾದ ಗಂಧರ್ವರು ಭರತನಿಂದ ಹೇಗೆ ಏತಕ್ಕಾಗಿ ಹತರಾದರೆಂಬ ಸಂಗತಿಯನ್ನು ವಿಸ್ತಾರವಾಗಿ ನನಗೆ ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ

ಮಾರ್ಕಂಡೇಯನು ಹೇಳುತ್ತಾನೆ —ಅಯೋಧ್ಯಾ ಪಟ್ಟಣದಲ್ಲಿ ಶ್ರೀರಾಮನು ರಾಜ್ಯಭಾರಮಾಡುತ್ತಿದ್ದನು ಅದೇ ಸಮಯದಲ್ಲಿ ಕೇಕಯ ರಾಜ್ಯದಲ್ಲಿ ಭರತನ ಸೋದರಮಾವನಾದ ಯುಧಾಜಿನ್ಮಹಾರಾಜನು ರಾಜ್ಯಭಾರಮಾಡುತ್ತಿದ್ದನು. ಹೀಗೆಯೇ ಇರುತ್ತಿರಲು ಒಂದು ಸಮಯದಲ್ಲಿ ಈ ಯುಧಾಜಿನ್ಮಹಾರಾಜನು ಅಯೋಧ್ಯಾಪಟ್ಟಣದಲ್ಲಿದ್ದ ರಾಮನ ಬಳಿಗೆ ಒಬ್ಬ ದೂತನನ್ನೂ, ತನ್ನ ಪುರೋಹಿತರಾಗಿ ವೃದ್ಧರಾಗಿದ್ದ ಗಾರ್ಗ್ಯ ಮಹರ್ಷಿಗಳನ್ನೂ ಕಳುಹಿಸಿಕೊಟ್ಟನು ಅದರ ಕಾರಣವನ್ನು ಹೇಳುತ್ತೇನೆ, ಕೇಳು ವಜ್ರರಾಜ!

ಸಿಂಧೋರುಭಯಕೂಲೇಷು ರಾಮದೇಶೋ ಮನೋಹರಃ ।
ಹತ್ವಾ ರಣೇ ಮನುಷ್ಯೇಂದ್ರಾನ್ಗಂಧರ್ವೈರ್ವಿನಿವೇಶಿತಃ ॥ ೪ ॥

ಗಂಧರ್ವಾಸ್ತೇ ಚ ರಾಜೇಂದ್ರ ರಾಜ್ಞಾಂ ವಿಪ್ರಿಯಕಾರಕಾಃ ।
ಲಕ್ಷ್ಮಣಂ ಭರತಂ ವಾಪಿ ಶತ್ರುಘ್ನಮಥವಾ ನೃಪ ॥ ೫ ॥

ವಿಸರ್ಜಯಿತ್ವಾ ಗಂಧರ್ವಾಂಸ್ತಾನ್ವಿನಾಶಯ ರಾಘವ ।
ರಾಜಾನೋ ನಿರ್ಭಯಾಃ ಸಂತು ದೇಶಶ್ಚಾಸ್ತು ತಥಾ ತವ ॥ ೬ ॥

ದೂತಸ್ಯ ವಚನಂ ಶ್ರುತ್ವಾ ಚಿಂತಯಾಮಾಸ ರಾಘವಃ ।
ಮೇಘನಾದವಧೇ ಕರ್ಮ ಲಕ್ಷ್ಮಣೇನ ಮಹತ್ಕೃತಂ ॥ ೭ ॥

ಶತ್ರುಘ್ನೇನ ಕೃತಂ ಕರ್ಮ ಲವಣಂ ಚ ವಿನಿಘ್ನತಾ ।
ಪ್ರೇಷಯಿಷ್ಯಾಮಿ ಭರತಂ ಗಂಧರ್ವಸ್ಯ ಚ ನಿಗ್ರಹೇ ॥ ೮ ॥

---

೪-೨೬ ಯುಧಾಜಿನ್ಮಹಾರಾಜನು ಗಾರ್ಗ್ಯರೊಡನೆ ಹೇಳಿ ಕಳುಹಿಸಿದ ವೃತ್ತಾಂತವನ್ನೀಗ ತಿಳಿಸಲಾಗುವುದು

ಅಯ್ಯ, ರಾಮ ! ಸಿಂಧೂನದಿಯ ಎರಡು ದಡದಲ್ಲಿರುವ ದೇಶಗಳೂ ನಿನ್ನ (ರಾಮ) ರಾಜಕ್ಕೆ ಸೇರಿವೆ ಆ ದೇಶದಲ್ಲಿರುವ ಸಾಮಂತರಾಜರನ್ನೆಲ್ಲಾ ಶೈಲೂಷರೆಂಬ ಗಂಧರ್ವರು ಸಂಹರಿಸಿ ಆ ಪ್ರದೇಶವನ್ನೆಲ್ಲಾ ವ್ಯಾಪಿಸಿಕೊಂಡಿದಾರೆ ಇವರು ಒಹು ಕೊಬ್ಬಿ ಮನುಷ್ಯರನ್ನೆಲ್ಲಾ ಹಿಂಸಿಸುತ್ತಾ ಲೋಕಕಂಟಕರಾಗಿದ್ದಾರೆ ಇವರ ಮೇಲೆ ಯುದ್ಧಕ್ಕೆ ಹೋಗಿ ಗೆದ್ದು ಬರದಿದ್ದರೆ ಯತ್ನವೇ ಇಲ್ಲ ಇವರನ್ನು ಸಂಹರಿಸುವುದಕ್ಕಾಗಿ ಲಕ್ಷ್ಮಣನನ್ನಾಗಲಿ, ಭರತನನ್ನಾಗಲಿ, ಶತ್ರುಘ್ನನನ್ನಾಗಲಿ ಸೈನ್ಯಸಹಿತವಾಗಿ ಕಳುಹಿಸಿ ಅವರನ್ನು ನಾಶಪಡಿಸಬೇಕಾದುದು ಮುಖ್ಯವಾದ ಕೆಲಸವಾಗಿದೆ ಅವರನ್ನು ಸಂಹರಿಸಿದರೆ ಸಕಲ ದೇಶದ ರಾಜರೂ, ದೇಶದ ಜನರೂ ನಿರ್ಭಯವಾಗಿ ಇರಬಹುದು. ಆದ್ದರಿಂದ ಈ ಕೆಲಸವನ್ನು ಜಾಗ್ರತೆಮಾಡಬೇಕು

ಈರೀತಿ ದೂತನ ಮೂಲಕವೂ ಪುರೋಹಿತರ ಮೂಲಕವೂ ಹೇಳಿ ಕಳುಹಿಸಿದ ಮಾತನ್ನು ಕೇಳಿ ಶ್ರೀರಾಮಚಂದ್ರಪರಮಾತ್ಮನು ಇಂತು ಆಲೋಚಿಸಿದನು ಲಕ್ಷ್ಮಣನು ನನ್ನ ಜತೆಯಲ್ಲಿ ಲಂಕಾಪಟ್ಟಣಕ್ಕೆ ರಾವಣ ಸಂಹಾರ ಕಾಲದಲ್ಲಿ ಬಂದು ರಾವಣನ ಮಗ ಮೇಘನಾದ (ಇಂದ್ರಜಿತುವಿ) ನ ಮೇಲೆ ಭಯಂಕರವಾದ ಯುದ್ಧ

ಇತ್ಯೇವಂ ಮನಸಿ ಧ್ಯಾತ್ವಾ ರಾಮೋ ಭರತಮಬ್ರವೀತ್ ।
ಗಚ್ಛ ಗಾರ್ಗ್ಯಂ ಪುರುಷಸ್ಕೃತ್ಯ ವತ್ಸ ರಾಜಗೃಹಂ ಸ್ವಯಂ ॥ ೯ ॥

ಮಾತುಲೇನ ಸಮಾಯುಕ್ತಃ ಕೈಕಯೇಂದ್ರಗೃಹಾತ್ತತಃ ।
ಜಹಿ ಶೈಲೂಷತನಯಾನ್ಗಂಧರ್ವಾನ್ಪಾಪನಿಶ್ಚಯಾನ್ ॥ ೧೦ ॥

ಏವಮುಕ್ತಃ ಸ ಧರ್ಮಾತ್ಮಾ ಭರತೋ ಭ್ರಾತೃವತ್ಸಲಃ ।
ರಾಮಸ್ಯ ಪಾದೌ ಶಿರಸಾ ಚಾಭಿವಂದ್ಯ ಕೃತಾಂಜಲಿಃ ॥ ೧೧ ॥

ಗೃಹಂ ಗತ್ವಾ ಚಕಾರಾಥ ಸರ್ವಂ ಪ್ರಾಸ್ಥಾನಿಕಂ ವಿಧಿಂ ।
ಓಷಧೀನಾಂ ಕಷಾಯೇಣ ತದೋತ್ಸಾದಿತವಿಗ್ರಹಃ ॥ ೧೨ ॥

ಗೌರಸರ್ಷಪಕಲ್ಕೇನ ಪ್ರಸಾಧಿತಶಿರೋರುಹಃ ।
ತೀರ್ಥಸಾರಸನಾದೇಯೈಃ ಸಲಿಲೈಶ್ಚ ಸ ಸಾಗರೈಃ ॥ ೧೩ ॥

---

ಮಾಡಿ ಅವನನ್ನು ಕೊಂದು ಆಯಾಸದಿಂದ ಬಳಲಿರುವನು. ಶತ್ರುಘ್ನನನ್ನು ಕಳು ಹಿಸೋಣವೆಂದರೆ ಮೊನ್ನೆ ತಾನೇ ಅವನು ಭಯಂಕರಾಕಾರನಾದ ಲವಣಾಸುರನ ಸೈನ್ಯವನ್ನೂ, ಲವಣಾಸುರನನ್ನೂ ಸಂಹರಿಸಿ ಬಹಳ ದಣಿದಿರುವನು. ಆದರೆ ಇದು ವರೆಗೆ ಭರತನನ್ನು ಮಾತ್ರ ಯಾವ ಯುದ್ಧರಂಗಕ್ಕೂ ಕಳುಹಿಸಿಲ್ಲವಾದ್ದರಿಂದ ಅವ ನೊಡನೆ ಸೈನ್ಯವನ್ನು ಜತೆಮಾಡಿ ಕಳುಹಿಸುವುದು ಒಳ್ಳೆಯದಾಗಿ ಕಾಣುತ್ತದೆ. ಈ ರೀತಿ ರಾಮನು ಮನಸ್ಸಿನಲ್ಲಿಯೇ ಆಲೋಚಿಸಿಕೊಂಡು ಭರತನನ್ನು ಕುರಿ ತಿಂತೆಂದನು --

ವತ್ಸ ಭರತ! ನಿಮ್ಮ ಮಾವನು ಹೇಳಿ ಕಳುಹಿಸಿದ್ದಾನೆ. ಈಗ ನೀನು ಸಿಂಧೂತೀರದಲ್ಲಿರುವ ಶೈಲೂಷ ಗಂಧರ್ವರನ್ನು ನಿಗ್ರಹಿಸಿ ಬರಬೇಕಾಗಿದೆ. ಗಾರ್ಗ್ಯ ರನ್ನು ಮುಂದೆ ಬಿಟ್ಟುಕೊಂಡು ನೀನು ಕೈಕಯ ರಾಜ್ಯಕ್ಕೆ ಹೋಗು. ಅಲ್ಲಿಂದ ನಿಮ್ಮ ಸೋದರಮಾವನೂ ಜತೆಯಲ್ಲಿ ಬರುತ್ತಾನೆ. ನೀವಿಬ್ಬರೂ ಚತುರಂಗಬಲ ಸಮೇತ ರಾಗಿ ಸಿಂಧೂತೀರ ದೇಶಗಳಿಗೆ ಹೋಗಿ ಶತ್ರುಗಳನ್ನು ಜಯಿಸಿ ಸುಖವಾಗಿ ಹಿಂತಿರುಗಿ ಬನ್ನಿ. ಈರೀತಿ ಹೇಳಿದ ಅಣ್ಣನಾದ ಶ್ರೀರಾಮನ ಮಾತನ್ನು ಕೇಳಿದೊಡನೆಯೇ ಭರತನು ರಾಮನ ಚರಣಕಮಲಗಳಿಗೆ ನಮಸ್ಕರಿಸಿ ಎದ್ದು ಕೈಮುಗಿದುಕೊಂಡು, ನಿನ್ನ ಮಾತನ್ನು ಈಗಲೇ ನೆರವೇರಿಸುತ್ತೇನೆಂದು ಒಪ್ಪಿಕೊಂಡವನಾಗಿ, ಆ ಕೂಡಲೇ

ಚಂದನಸ್ರಾವಸಂಮಿಶ್ರೈಃ ಕುಂಕುಮಾಕ್ಷೋದಸಂಯುಕ್ತೈಃ ।
ಸರ್ವೌಷಧಿರಸಾಯುಕ್ತೈಃ ಸರ್ವಗಂಧಸಮನ್ವಿತೈಃ ॥ ೧೪ ॥

ಮಂತ್ರಪೂತೈರ್ಮಹಾತೇಜಾಃ ಸಸ್ನೌ ರಾಘವವರ್ಧನಃ ।
ಶಂಖಭೇರೀನಿನಾದೇನ ಪಣವಾನಾಂ ಸ್ವನೇನ ಚ ॥ ೧೫ ॥

ಆನಕಾನಾಂ ಚ ಶಬ್ದೇನ ನಿಸ್ವನೇನ ಚ ಬಂದಿನಾಂ ।
ಸೂತಮಾಗಧಶಬ್ದೇನ ಜಯಕಾರೈಸ್ತಥೈವ ಚ ॥ ೧೬ ॥

ತುಷ್ಟುವುಃ ಸ್ನಾನಕಾಲೇ ತಂ ಸ್ತವೈರ್ಮಂಗಲಪಾಠಕಾಃ ।
ತಥೋಪತಸ್ಥುರ್ಗೀತೇನ ಗಂಧರ್ವಾಪ್ಸರಸಾಂ ಗಣಾಃ ॥ ೧೭ ॥

ಸ್ನಾತಃ ಸ ಭರತೋ ಲಕ್ಷ್ಮ್ಯಾ ಯುವರಾಜಾಭಿರೂಪಯಾ ।
ವಿಲಿಪ್ಯ ಚಾರುಸರ್ವಾಂಗಂ ಚಂದನೇನ ಸುಗಂಧಿನಾ ॥ ೧೮ ॥

ತನ್ನ ಅರಮನೆಗೆ ಹೊರಟು ಪ್ರಾಸ್ಥಾನಿಕ (ವಿಜಯ ಪ್ರಯಾಣ) ವಿಧಿಯನ್ನಾಚರಿಸಿದನು. ಆ ಕ್ರಮವನ್ನಿಲ್ಲಿ ಹೇಳುವನು —

ಶತ್ರುಗಳ ಮೇಲೆ ದಂಡೆತ್ತಿ ಯುದ್ಧಕ್ಕೆ ಹೊರಡಬೇಕಾದ ಸಮಯದಲ್ಲಿ ವಿಜಯಶಾಲಿಗಳಾಗಲಪೇಕ್ಷಿಸುವ ರಾಜರು ನಡೆಸಬೇಕಾದ ಪ್ರಾಸ್ಥಾನಿಕವಿಧಿಯೇನೆಂದರೆ —

ಮೊದಲ ದಿನ ಕ್ರಮವಿದು — ಸಕಲೌಷಧಿ ರಸಗಳನ್ನೂ ಬಚ್ಚಿ ಇಳಿಸಿ ಕಷಾಯ ಮಾಡಿ ಆ ಕಷಾಯವನ್ನು ಸಕಲ ಅವಯವಗಳಿಗೂ ಲೇಪಿಸಿ (ಸವರಿ) ಕೊಳ್ಳಬೇಕು. ಬಿಳೀ ಸಾಸುವೆಯನ್ನರೆದು ಅದರ ಕಲ್ಕವನ್ನು ತಲೆಗೆ ಒತ್ತಿಕೊಳ್ಳಬೇಕು. ಸಕಲ ತೀರ್ಥ ಸರಸ್ಸುಗಳಿಂದಲೂ, ಸಾಗರಗಳಿಂದಲೂ ತರಿಸಿದ ತೀರ್ಥಜಲವನ್ನೊಟ್ಟುಗೂಡಿಸಿ ಆ ನೀರಿಗೆ ಸಕಲ ಸುಗಂಧ ವಸ್ತುಗಳನ್ನೂ, ಕುಂಕುಮಕೇಸರಿ, ಪಚ್ಚಕರ್ಪೂರ, ಕಸ್ತೂರಿ, ಸಕಲ ಓಷಧ ರಸಗಳನ್ನೂ ಬೆರಸಿ ಅದನ್ನು ಮಂತ್ರಗಳಿಂದ ಪವಿತ್ರವನ್ನಾಗಿಮಾಡಿ ಅದರಿಂದ ಅಭ್ಯಂಗನಸ್ನಾನಮಾಡಬೇಕು. ಈ ವಿಧಿಯಂತೆ ಭರತನು ಮೊದಲು ತೀರ್ಥಾಭ್ಯಂಗನ ಸ್ನಾನವನ್ನು ಮಾಡಿದನು. ಆ ವಿಜಯಪ್ರದವಾದ ಅಭ್ಯಂಗನಸ್ನಾನ ಕಾಲದಲ್ಲಿ ಶಂಖಭೇರೀ ನಿನಾದಗಳೂ, ನಗಾರಿ, ಮದ್ದಲೆ

**ಅಹತಾಂಬರಸಂವೀತಃ ಶ್ವೇತಮಾಲ್ಯವಿಭೂಷಿತಃ ।**
**ಕುಂಡಲೀ ಸಾಂಗದೀ ಮೌಲೀ ಸರ್ವರತ್ನವಿಭೂಷಿತಃ ॥ ೧೯ ॥**

**ಅಂತಸ್ಥಂ ಪೂಜಯಾಮಾಸ ದೇವದೇವಂ ತ್ರಿವಿಕ್ರಮಂ ।**
**ಗಂಧಮಾಲ್ಯನಮಸ್ಕಾರಧೂಪದೀಪಾದಿಕರ್ಮಣಾ ॥ ೨೦ ॥**

**ಪೂಜಯಿತ್ವಾ ಜಗನ್ನಾಥಮುಪತಸ್ಥೇ ಹುತಾಶನಂ ।**
**ಸುಹುತಂ ಬ್ರಾಹ್ಮಣೇಂದ್ರೇಣ ರಾಘವಾಣಾಂ ಪುರೋಧಸಾ ॥ ೨೧ ॥**

**ಗೋಭಿರ್ವಸ್ತ್ರೈರ್ಹಿರಣ್ಯೈಶ್ಚ ತುರಂಗಕರಿಪುಂಗವೈಃ ।**
**ಮೋದಕೈಃ ಸಫಲೈರ್ದಧ್ನಾ ಗಂಧೈರ್ಮಾಲ್ಯೈಸ್ತಥಾಕ್ಷತೈಃ ॥ ೨೨ ॥**

**ಸ್ವಸ್ತಿವಾಚ್ಯಾಂಸ್ತಥಾ ವಿಪ್ರಾನ್ಮಹಾತ್ಮಾ ಭೂರಿದಕ್ಷಿಣಃ ।**
**ವ್ಯಾಘ್ರಚರ್ಮೋತ್ತರೇ ರಮ್ಯೇ ಸೂಪವಿಷ್ಟೋ ವರಾಸನೇ ॥ ೨೩ ॥**

---

ಮೊದಲಾದ ವಾದ್ಯಶಬ್ದಗಳೂ, ಡಕ್ಕಡಮರುಗಾದಿ ಧ್ವನಿಗಳೂ, ಗಾಯಕರ, ಹೊಗಳು ಭಟರ ಸ್ತುತಿಪಾಠಗಳೂ, ಜಯಕಾರಶಬ್ದಗಳೂ ವಿಶೇಷವಾಗಿ ಆದುವು ಸುಮಂಗಲಿಯರು ಮಂಗಳಗಾನವನ್ನು ಪಾಡಿದರು ಗಂಧರ್ವರೂ, ಅಪ್ಸರಸ್ತ್ರೀಯರೂ ಮನೋಹರವಾದ ತೂರ್ಯತ್ರಯವನ್ನು ಬಾರಿಸಿದರು ಯುವರಾಜೋಚಿತ ಸಂಪತ್ತಿನಿಂದ ಆ ಭರತನು ವಿಜಯಪ್ರಯಾಣಾರ್ಥವಾದ ಸ್ನಾನಕ್ರಿಯೆಯಂ [illegible] ಬಳಿಕ ಸರ್ವಾಂಗಗಳಿಗೂ ಸುಗಂಧ ಸುರಭಿತವಾದ ಗಂಧವಸ್ತುಗಳಂ ಲೇಪಿಸಿಕೊಂಡವನಾಗಿ, ಹೊಸ ಪೀತಾಂಬರವಂ ಧರಿಸಿ, ಪುಷ್ಪಹಾರಗಳಿಂದಲಂಕೃತನಾಗಿ, ಕುಂಡಲಾಂಗದ ಕಿರೀಟಾದಿ ನಾನಾಭೂಷಣಗಳಿಂ ವಿಭೂಷಿತನಾಗಿ ತನ್ನ ಹೃದಯಾರವಿಂದದೊಳ್ ಅನಾಹತ ಚಕ್ರದಲ್ಲಿ ವಾಸವಾಗಿರುವ ಪರಮಾತ್ಮನನ್ನು ಭಕ್ತಿಯಿಂದ ಪೂಜಿಸಿ, ಗಂಧ ಮಾಲ್ಯ ನಮಸ್ಕಾರ ಧೂಪ ದೀಪ ನೈವೇದ್ಯಾದಿಗಳಂ ಮಾನಸಪೂಜೆಯಿಂದಲೇ ಸಮರ್ಪಿಸಿ ಬಳಿಕ ಅಗ್ನಿಹೋತ್ರದ ಮನೆಯಂ ಪ್ರವೇಶಗೈದು ಆ ಯಜ್ಞೇಶ್ವರನಂ ಪ್ರದಕ್ಷಿಣಾಕಾರವಾಗಿ ಒಳಸಿ, ಬ್ರಾಹ್ಮಣೋತ್ತಮರುಗಳಿಂದ ಹೋಮಾದಿಗಳಂ ನೆರವೇರಿಸಿ, ಪುರೋಹಿತರಾದ ವಸಿಷ್ಠರಂ ಬರಮಾಡಿಕೊಂಡು ಆವ

ಆಯುಧಾನಂತರಂ ಚಕ್ರೇ ಧ್ವಜಚ್ಛತ್ರಾಭಿಪೂಜನಂ ।
ಸ್ವಸ್ತಿಕಾನ್ವರ್ಧಮಾನಾಂಶ್ಚ ನಂದ್ಯಾವರ್ತಾಂಸ್ತಥೈವ ಚ ॥ ೨೪ ॥

ನದ್ಯಃ ಕಾಂಚನವಿನ್ಯಸ್ತಾಃ ಶಂಖಃ ಸತ್ಕಮಲಾಂಜನಂ ।
ಪೂರ್ಣಕುಂಭಂ ಗಜಮದಂ ದೂರ್ವಾಃ ಸಾದ್ರ್ರಂ ಚ ಗೋಮಯಂ ॥

ರತ್ನಾನ್ಯಾದಾಯ ಬಿಲ್ವಂ ಚ ಚಾಪಮಾದಾಯ ಸತ್ವರಃ ।
ಸಶರಂ ರಾಘವಶ್ರೇಷ್ಠಃ ಪದದ್ವಾತ್ರಿಂಶಕಂ ಯಯೌ ॥ ೨೬ ॥

ಶ್ರೇಷ್ಠಮಶ್ವಂ ಸುಚಂದ್ರಾಭಂ ಹೇಮಭಾಂಡಪರಿಚ್ಛದಂ ।
ಆರುಹ್ಯ ನಿರ್ಯಯೌ ಶ್ರೀಮಾನ್ ಜಯಕಾರಾಭಿಪೂಜಿತಃ ॥ ೨೭ ॥

ಪೌರಜಾನಪದಾಮಾತ್ಯೈರ್ವಾದ್ಯಘೋಷೇಣ ಭೂರಿಣಾ ।
ಹ್ರಾದೇನ ಗಜಘಂಟಾನಾಂ ಬೃಂಹಿತೇನ ಪುನಃಪುನಃ ॥ ೨೮ ॥

ಹ್ರೇಷಿತೇನ ತುರಂಗಾಣಾಂ ನರಾಣಾಂ ಕ್ಷ್ವೇಡಿತೇನ ಚ ।
ದ್ವಿಜಪುಣ್ಯಾಹಘೋಷೇಣ ಪ್ರಯಾತೋ ಭೂರಿದಕ್ಷಿಣಃ ॥ ೨೯ ॥

---

ಗೂ ಬ್ರಾಹ್ಮಣಶ್ರೇಷ್ಠರಿಗೂ, ಗೋದಾನ, ವಸ್ತ್ರದಾನ, ಹಿರಣ್ಯಾಶ್ವಗಜಭೂದಾನಾದಿಗಳಂ ಯಥೇಚ್ಛವಾಗಿ ಮಾಡಿ, ಅವರುಗಳಿಗೆ ಸಂತರ್ಪಣೆಯನ್ನು ಮಾಡಿ, ಅವರಿಂದ ಸ್ವಸ್ತ್ಯಯನ ರೂಪವಾದ ವೇದಮಂತ್ರಗಳಿಂದ ಆಶೀರ್ವಾದವಂ ಪಡೆದವನಾಗಿ ಅವರುಗಳಿಗೆಲ್ಲಾ ಬೊಗನ ಬೊಗನೆಯಾಗಿ ದಕ್ಷಿಣೆಗಳಂ ಕೊಟ್ಟು, ಶ್ರೇಷ್ಠಾಸನವೆನಿಸಿದ ವ್ಯಾಘ್ರಾಸನದೊಳ್ ಕುಳಿತು ಆಯುಧ ಧ್ವಜಚ್ಛತ್ರಾದಿ ಪೂಜೆಗಳಂ ನೆರವೇರಿಸಿಯಾದ ಬಳಿಕ, ಮಂಗಳ ದ್ರವ್ಯಗಳಂ ನಂದ್ಯಾವರ್ತಾದಿ ಪುಷ್ಪಗಳಂ ನದೀತೀರ್ಥ ಕಲಶಗಳಂ, ಶಂಖ, ಪೂರ್ಣಕುಂಭ, ಗಜಮದ, ದೂರ್ವಾ, ಸಾದ್ರ್ರ, ಗೋಮಯಾದಿಗಳಂ, ರತ್ನ, ಬಿಲ್ವ, ಚಾಪಬಾಣಗಳಂ ಸಂಗಡ ತೆಗೆದುಕೊಂಡವನಾಗಿ ಸೈನ್ಯ ಸಹಿತನಾಗಿ ಪೌರ ಮಟ್ಟು ಮೂವತ್ತೆರಡು ಹಜ್ಜೆಗಳಷ್ಟು ದಾರಿಯಂ ಕಾಲುನಡಿಗೆಯಿಂದಲೇ ನಡೆದುಕೊಂಡು ಪ್ರಯಾಣ ಬೆಳೆಸಿದನು

೨೭-೩೫ ವಿಜಯ ಪ್ರಯಾಣಕಾಲದಲ್ಲಿ ಭರತನು ಚಂದ್ರನಂತೆ ಬಹು ಶುಭ್ರ ಕಾಂತಿಯುಳ್ಳ ಚಿನ್ನದ ಕಲಶದಿಂದ ಹೊಳೆಯುತ್ತಿದ್ದ ಒಂದು ಶ್ರೇಷ್ಠವಾದ ಅಶ್ವವನ್ನೇರಿದನು. ಆ ಕುದುರೆಯನ್ನೇರಿದ ಭರತನನ್ನು ನೋಡಿ, ಜನರೆಲ್ಲರೂ

**ಭರತಸ್ಯ ಪ್ರಯಾಣೇ ತು ದೇವಾಃ ಶಕ್ರಪುರೋಗಮಾಃ ।**
**ಮುಮುಚುಃ ಪುಷ್ಪವರ್ಷಾಣಿ ವಾಚ ಊಚುಃ ಶುಭಾಸ್ತಥಾ ॥ ೩೦ ॥**

**ಏಷ ವಿಗ್ರಹವಾನ್ ಧರ್ಮ ಏಷ ಸತ್ಯವತಾಂ ವರಃ ।**
**ಏಷ ವೀರ್ಯವತಾಂ ಶ್ರೇಷ್ಠೋ ರೂಪೇಣಾಪ್ರತಿಮೋ ಭುವಿ ॥ ೩೧ ॥**

**ಅನೇನ ಯತ್ಕೃತಂ ಕರ್ಮ ರಾಮೇ ವನಮುಪಾಗತೇ ।**
**ನ ತಸ್ಯ ಕರ್ತಾ ಲೋಕೇಽಸ್ಮಿನ್ದಿವಿ ವಾ ವಿದ್ಯತೇ ಕ್ವಚಿತ್ ॥ ೩೨ ॥**

ಜಯ! ವಿಜಯೀಭವ! ವಿಜಯತಾಂ! ಭರತ ಮಹಾರಾಜಃ! ಎಂಬುದಾಗಿ ಜಯಶಬ್ದಗಳನ್ನು ಮಾಡಿದರು. ಮಂಗಳವಾದ್ಯಗಳ ಘೋಷವೆಯುತ್ತಿರುವ ಭರತನು ಪಟ್ಟಣದ ಜನರಿಂದಲೂ ಮಂತ್ರಿಗಳಿಂದಲೂ ಕೂಡಿದವನಾಗಿ, ಮುಂದುಗಡೆ ಗಜಾಶ್ವರಥ, ಪದಾತಾದಿಗಳು ಹೊರಟಿರಲು ಗಜಕಂಠಗಳಲ್ಲಿನ ಘಂಟೆಗಳು ನಾದ ಮಾಡುತ್ತಿರಲು, ಕುದುರೆಗಳು ಹೇಷಾರವಗಳಂ ಮಾಡುತ್ತಿರಲು, ಬ್ರಾಹ್ಮಣರು ಪುಣ್ಯಾಹ ಮಂತ್ರಗಳಂ ಪಠಿಸುತ್ತಿರಲು ಅಂತಹ ಆ ಶುಭ ಸಮಯದಲ್ಲಿ ಭರತನ ವಿಜಯಪ್ರಯಾಣವಂ ಬೆಳಸಿದನು

ಈ ರೀತಿ ಭರತನು ವಿಜಯಪ್ರಯಾಣವಂ ಬೆಳಸಿದೊಡನೆಯೇ ಅವನ ಮೇಲೆ ಇಂದ್ರನೇ ಮೊದಲಾದ ದೇವತೆಗಳು ಹೂಮಳೆಗಳಂ ಕರೆದರು ಮತ್ತು ಈ ರೀತಿ ಶುಭಾಶಂಸನವನ್ನು ಸಹಾ ಮಾಡಿದರು, ಭರತನಿಗೆ ಜಯವಾಗಲಿ ಈ ಭರತನು ಧರ್ಮ ಶರೀರವನ್ನು ಧರಿಸಿಕೊಂಡು ಬಂದಿರುವಂತೆ ಕಾಣುತ್ತಲಿದ್ದಾನೆ ಇವನು ಮಹಾ ಸತ್ಯಸಂಧನು. ಪರಾಕ್ರಮದಲ್ಲಿಯೂ ಅನುಪಮ ಸೌಂದರ್ಯದಲ್ಲಿಯೂ ಇವನನ್ನು ಹೋಲುವವರು ಮತ್ತೊಬ್ಬರಿಲ್ಲ ಶ್ರೀರಾಮಚಂದ್ರ ಪರಮಾತ್ಮನು ಹದಿ ನಾಲ್ಕು ವರ್ಷ ವನವಾಸದಲ್ಲಿದ್ದಾಗ, ಈ ಭರತನು ಊರಿನೊಳಗಿದ್ದು ರಾಮಧ್ಯಾನ ಮಾಡುತ್ತ ಎಂತಹ ಮುನಿವೃತ್ತಿಯನ್ನನುಸರಿಸಿದ್ದನೋ ಅಂತಹ ನಿಯಮವನ್ನು ಪಾಲಿಸಲು ಇವನ ಹೊರತು ಮತ್ತೊಬ್ಬನಿಗೆ ಶಕ್ತಿಯೆಲ್ಲಿಂದ ಬಂದೀತು ? ರಾಮನ ವನವಾಸದಲ್ಲಿದ್ದ ಸಮಯದಲ್ಲಿ ಒಂದು ದಿನವಾಗಲೀ ಇವನು ಪುರಪ್ರವೇಶಮಾಡ ಲಿಲ್ಲ ಸಕಲ ರಾಜ್ಯವನ್ನೂ, ರಾಜಭೋಗವನ್ನೂ ಇವನು ತ್ಯಜಿಸಿದ್ದುದನ್ನು ನೋಡಿದರೆ ಆಶ್ಚರ್ಯವಾಗುತ್ತಿತ್ತು ರಾಮನು ಬಿಟ್ಟಮನೆಯು ಬಂಕೆಯಿಂದ ಸುಟ್ಟುಹೋದ ಮನೆಯೆಂದು ತಿಳಿದು ಇವನು ನಂದಿಗ್ರಾಮದ ಎಲೆಮನೆಯಲ್ಲಿ ವಾಸ ಮಾಡಿದನು ಹದಿನಾಲ್ಕು ವರ್ಷಕಾಲ ಈ ಮಹಾನುಭಾವನು ದುಃಖವೆಂಬ ಹಾಸಿಗೆ

ಅನೇನ ರಾಜ್ಯಂ ಸಂತ್ಯಕ್ತಂ ಗೃಹಂ ದಗ್ಧಮಿವಾಗ್ನಿನಾ ।
ಅನೇನ ದುಃಖಶಯ್ಯಾಸು ಶಯಿತಂ ಸುಮಹಾತ್ಮನ　　॥ ೩೩ ॥

ನಿತ್ಯಮಾಸನ್ನಭೋಗೇನ ಜಟಾವಲ್ಕಲಧಾರಿಣಾ ।
ಫಲಮೂಲಾಶಿನಾನೇನ ರಾಮರಾಜ್ಯಂ ಹಿ ಪಾಲಿತಂ　　॥ ೩೪ ॥

ಶೃಣ್ವನ್ನುವಾಕ್ಯಾನಿ ಸುದೀರಿತಾನಿ
ರಾಮಾನುಜೋ ರಾಮಗೃಹಂ ಜಗಾಮ ।
ಶೂರಾರ್ಯವಿದ್ವತ್ಪುರುಷೋಪಕೀರ್ಣಂ
ರತ್ನೈರ್ಯಥಾ ಸಾಗರಮಪ್ರಮೇಯಂ　　॥ ೩೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭರತಪ್ರಸ್ಥಾನವರ್ಣನಂನಾಮ
ದ್ವ್ಯಧಿಕ ದ್ವಿಶತತಮೋಽಧ್ಯಾಯಃ.

---

ಅಲ್ಲಿಯೇ ಮಲಗಿ ಕಾಲಕಳೆದವನು. ಭೋಗಸಾಮಗ್ರಿಗಳು ಎದುರಿಗೇ ಹತ್ತಿರ ದಲ್ಲಿಯೇ ಸಿದ್ಧನಾಗಿದ್ದರೂ, ಈ ಸಿದ್ಧಸಂಕಲ್ಪನಾದ ಭರತನು ಅವುಗಳನ್ನು ಲಕ್ಷಿಸದ, ಜಟಾಮುಡಿಯನ್ನು ಧರಿಸಿ ಗಡ್ಡೆಗೆಣಸುಗಳನ್ನೇ ಋಷಿಜನರಂತೆ ತಿಂದುಕೊಂಡು ಶ್ರೀರಾಮನಿಗೋಸ್ಕರವೇ ರಾಜ್ಯವನ್ನು ಪಾಲಿಸಲಾಗಿಟ್ಟು ಅವನ ಪಾದುಕೆಗಳಿಗೇ ಪಟ್ಟಾಭಿಷೇಕವಮಾಡಿ ರಾಜ್ಯವನ್ನಾಳಿದವನಲ್ಲವೇ? ಈ ಮಹಾನುಭಾವ! ಈ ಪುಣ್ಯಾ ತ್ಮನ ಯೋಗ್ಯತೆಯು ಮತ್ತಾವ ಬೇರೆ ಮನುಷ್ಯನಿಗೆ ಬಂದೀತೆಂದು ಆಕಾಶದಲ್ಲಿ ಎಂತು ಬಿಡುಗಣ್ಣರು ಮಾತನಾಡುತ್ತಿದ್ದುದನ್ನು ಕೇಳುತ್ತಾ ಆ ಭ್ರಾತೃಭಕ್ತನಾದ ಭರತಭೂಪಾಲಕನು, ಶೂರರಿಂದಲೂ, ಆರ್ಯಪುರುಷರಿಂದಲೂ, ವಿದ್ವಜ್ಜನರಿಂದಲೂ ಪರಿವೃತನಾಗಿ ವಿವಿಧರತ್ನಗಳಿಂದ ತುಂಬಿದ ಸಾಗರವನ್ನು ಪರಿತ್ತು ಪ್ರವೇಶಿಸುವಂತೆ ಶ್ರೀರಾಮನ ಅರಮನೆಗೆ ಬಂದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಭರತಪ್ರಸ್ಥಾನಯೆಂಬ ಹೆಸರಿನ
ಎರಡನೂರೆರಡನೆಯ ಅಧ್ಯಾಯವು
ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರ್ಯಧಿಕದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಗೃಹಾತ್ಪ್ರಯಾತೇ ಭರತೇ ಪ್ರಸ್ಥಾನಾರ್ಥಿನಿ ಯಾದವ ।
ಪ್ರಾಗೇವ ಲಕ್ಷ್ಮಣಂ ರಾಮೋ ನಿತ್ಯೋದ್ಯುಕ್ತಮಭಾಷತ ॥ ೧ ॥

ಅನುಯಾನಂ ಕುಮಾರಸ್ಯ ಭರತಸ್ಯ ಮಹಾತ್ಮನಃ ।
ಪ್ರೇಷಯಾಶ್ವಸಹಸ್ರಾಣಾಂ ಶತಾನಿ ತ್ರೀಣಿ ರಾಘವ ॥ ೨ ॥

ದಶ ದಂತಿಸಹಸ್ರಾಣಿ ರಥಾನಾಂ ಷಡ್ಗುಣಾನಿ ಚ ।
ಕೋಟ್ಯಃ ಪಂಚ ಪದಾತೀನಾಂ ಸಮರೇಷ್ವನಿವರ್ತಿನಾಂ ॥ ೩ ॥

### ಇನ್ನೂರಮೂರನೆಯ ಅಧ್ಯಾಯವು.

೧-೩. ಮಾರ್ಕಂಡೇಯನು ಹೇಳುತ್ತಾನೆ —ಭರತನು ವಿಜಯಪ್ರಯಾಣ ಮಾಡುವುದಕ್ಕಿಂತ ಮೊದಲು ರಾಮನ ಅಪ್ಪಣೆಯನ್ನು ಪಡೆಯಲು, ರಾಮನ ಸಮೀಪಕ್ಕೆ ಬಂದನೆಂದು ಹಿಂದೆ ಹೇಳಿಯಾಯಿತಷ್ಟೆ? ಈರೀತಿ ಭರತನು ಬರುವುದಕ್ಕಿಂತ ಮುಂಚೆಯೇ ಭಗವಾನ್ ಶ್ರೀರಾಮಚಂದ್ರಮೂರ್ತಿಯು ತನ್ನ ತಮ್ಮನಾದ ಲಕ್ಷ್ಮಣನನ್ನು ಕರೆದು ಭರತನ ಅನುಯಾನದ (ಜತೆಯಲ್ಲಿ ಹೊರಡುವ ಪರಿವಾರದ) ವಿಚಾರವಾಗಿ ಏನು ಆಜ್ಞೆಮಾಡಿದ್ದನೆಂಬುದನ್ನು ಇಲ್ಲಿ ವಿವರಿಸುತ್ತೇವೆ ರಾಮನು ಭರತನ ಅನುಯಾನಕ್ಕಾಗಿ ಯುದ್ಧಕ್ಕೆ ಹೊರಡುವಾಗ ಸಿದ್ಧಪಡಿಸಬೇಕಾದ ಸಂಭಾರಗಳನ್ನೂ ಜನಸಹಾಯವನ್ನೂ ಇಂತು ಅಪ್ಪಣೆಮಾಡಿದನು ಮೂರು ಲಕ್ಷ ಕುದುರೆಗಳು, ಹತ್ತು ಸಾವಿರ ಆನೆಗಳು, ಅರವತ್ತು ಸಾವಿರ ರಥಗಳು, ಐದು ಕೋಟಿ ಯುದ್ಧ ಕುಶಲ

ಧನಾಧ್ಯಕ್ಷಾಸ್ತಥಾ ವತ್ಸಮನುಗಚ್ಛಂತು ಲಕ್ಷ್ಮಣಂ ।
ಗೋರಥೈಷ್ಟ ತಥಾ ಪುಷ್ಟೈರ್ಗೋಭಿರುಷ್ಟ್ರೈಸ್ತಥೈವ ಚ ॥ ೪ ॥

ವ್ಯಾಯುತ್ತೈಃ ಪುರುಷೈರಶ್ವೈರ್ಗರ್ದಭೈಶ್ಚ ತಥಾಽವರೈಃ ।
ವಸ್ತ್ರರೂಪ್ಯಸುವರ್ಣಾನಾಂ ಮಣೀನಾಮಪಿ ಭಾಗಶಃ ॥ ೫ ॥

ವಿಸರ್ಗಾಯ ಕುಮಾರಸ್ಯ ಪರಿಪೂರ್ಣಾ ಯಥಾಸುಖಂ ।
ಬ್ರಾಹ್ಮಣಾಃ ಕ್ಷತ್ರಿಯಾ ಮುಖ್ಯಾಸ್ತಥೈವ ನಟನರ್ತಕಾಃ ॥ ೬ ॥

ಗೀತೇ ನೃತ್ತೇ ತಥಾ ಲಾಸ್ಯೇ ಪ್ರವೀಣಾಶ್ಚ ವರಾಂಗನಾಃ ।
ಪ್ರಾಸ್ಥಾನಿಕಾಶ್ಚ ಯೇ ಕೇಚಿತ್ಪಾನವಿಕ್ರಯಿಣಶ್ಚ ಯೇ ॥ ೭ ॥

ರೂಪಾಜೀವಾಶ್ಚ ವಣಿಜೋ ನಾನಾಪಣ್ಯೋಪಜೀವಿನಃ ।
ನಾನಾರೂಪಮುಪಾದಾಯ ಬಹುಪಣ್ಯಂ ವ್ರಜಂತು ವೈ ॥ ೮ ॥

ವಿಷವೈದ್ಯಾಃ ಶಲ್ಯವೈದ್ಯಾಸ್ತಥಾ ಕಾಯಚಿಕಿತ್ಸಕಾಃ ।
ಕರ್ಮಾಂತಿಕಾಃ ಸ್ಥಪತಯೋ ಮಾರ್ಗಿಣೋ ವೃಕ್ಷರೋಪಕಾಃ ॥ ೯ ॥

---

ರಾದ ಪದಾತಿಗಳು (ಸೈನಿಕರು) ಇವರೆಲ್ಲರ ಆಹಾರ ಪದಾರ್ಥಗಳನ್ನೂ ಅವರಿಗೆ ಬೇಕಾಗುವ ದ್ರವ್ಯರಾಶಿಯನ್ನು ಒದಗಿಸುವ ಧನ ಧಾನ್ಯಾಧ್ಯಕ್ಷರುಗಳೂ, ಅವರ ಪರಿವಾರಗಳೂ, ಎತ್ತಿನ ಬಂಡಿಗಳೂ, ಒಂಟೆಯ ಬಂಡಿಗಳೂ ಸಹ ಪದಾರ್ಥಗಳನ್ನು ತುಂಬಿಕೊಂಡು ಒರುವುದಕ್ಕಾಗಿ ಎಷ್ಟು ಆವಶ್ಯಕವೋ ಅಷ್ಟು ಹೊರಡಲಿ. ಕುದುರೆ, ಹೇಸರಗತ್ತೆಗಳ ಮೇಲೆ ಕುಳಿತು ಸವಾರರೂ, ಅವರ ಆಳುಗಳೂ ಹೊರಡಲಿ ಚಿನ್ನ, ಬೆಳ್ಳಿ, ಬಟ್ಟೆ ರತ್ನಗಳು ಭರತನ ಉಪಯೋಗಕ್ಕೆ ಎಷ್ಟು ಬೇಕೋ ಅಷ್ಟನ್ನು ತೆಗೆದುಕೊಂಡು ಹೊರಡಲಿ ಭರತನ ಸೌಖ್ಯಕ್ಕೆ ಇನ್ನೂ ಏನೇನು ಬೇಕೋ ಅವುಗಳನ್ನೆಲ್ಲಾ ತೆಗೆದುಕೊಂಡು ಹೋಗಲಿ ಬ್ರಾಹ್ಮಣರೂ, ಕ್ಷತ್ರಿಯರೂ, ಮೇಳದವರೂ, ವ್ಯಾಪಾರಿಗಳೂ ಗೀತನೃತ್ಯ ವಾದ್ಯ ಕುಶಲರೂ, ಮೇಳಕಟ್ಟುವುದರಲ್ಲಿ ಜಾಣೆಯರಾದ ಸೂಳೆಯರೂ, ಅವರ ಹಿಮ್ಮೇಳದವರೂ, ಇನ್ನೂ ಬೇಕುಬೇಕಾದ ರಸಿಕರೂ, ಪಾನ(ಮದ್ಯ) ವಿಕ್ರಯಿಗಳೂ, ಸೈನಿಕರ ಸೌಕರ್ಯಕ್ಕೆ ಬೇಕಾದಷ್ಟು ಮಂದಿ ಸೂಳೆಯರೂ, ವಿವಿಧ ಪದಾರ್ಥಗಳನ್ನು ಮಾರುವ ವರ್ತಕರೂ ಸಹ ತಮ್ಮ ತಮ್ಮ ಅಂಗಡಿಗಳನ್ನು ತೆಗೆದುಕೊಂಡು

ಕೂಪಕಾರಾಃ ಸುಧಾಕಾರಾ ವಂಶಕರ್ಮಕೃತಸ್ತಥಾ ।
ವಣಿಗ್ವರಾಶ್ಚ ಯೇ ಕೇಚಿತ್ಕೂರ್ಚಕಾರಾಶ್ಚ ಶೋಭನಾಃ ॥ ೧೦ ॥

ಪರಿಕರ್ಮಕೃತಶ್ಚೈವ ತಥಾ ವಸ್ತ್ರೋಪಜೀವಿನಃ ।
ಮಾಯೂರಿಕಾಸ್ತೈತ್ತಿರಿಕಾಶ್ಚೇತಕಾ ಭೇದಕಾಶ್ಚ ಯೇ ॥ ೧೧ ॥

ರಂಜಕಾ ದಂತಕಾರಾಶ್ಚ ತಥಾ ದಂತೋಪಜೀವಿನಃ ।
ಏರಂಡವೇತ್ರಕಾರಾಶ್ಚ ಕಟಕಾರಾಶ್ಚ ಶೋಭನಾಃ ॥ ೧೨ ॥

ಆರಕೂಟಕೃತಶ್ಚೈವ ತಾಮ್ರಕೂಟಾಸ್ತಥೈವ ಚ ।
ಭೂರ್ಜಕೂಟಾಃ ಖಡ್ಗಕಾರಾ ಗುಡಸೀಧುಪ್ರಪಾಚಕಾಃ ॥ ೧೩ ॥

ಔರಭ್ರಕಾ ಮಾಹಿಷಕಾಸ್ತುನ್ನವಾಯಾಶ್ಚ ಲಕ್ಷ್ಮಣ ।
ಯೇ ಚಾಭಿಷ್ಟಾವಕಾಃ ಕೇಚಿತ್ಸೂತಮಾಗಧಬಂಧಿನಃ ॥ ೧೪ ॥

ಚೈಲನಿರ್ಣೇಜಕಾಶ್ಚೈವ ಚರ್ಮಕಾರಾಸ್ತಥೈವ ಚ ।
ಅಂಗಾರಕಾರಾಶ್ಚ ತಥಾ ಲುಬ್ಧಕಾ ಯೇ ಚ ಧೀವರಾಃ ॥ ೧೫ ॥

ಕಬಂಧಧಾರಿಣೋ ಯೇ ಚ ಯೇ ಚ ಕಾಷ್ಠಪ್ರಪಾಟಿಕಾಃ ।
ವಸ್ತ್ರಸೀವನಸಕ್ತಾಶ್ಚ ಗೃಹಕಾರಾಶ್ಚ ಯೇ ನರಾಃ ॥ ೧೬ ॥

ಕುಂಭಕಾರಾಶ್ಚ ಯೇ ಕೇಚಿಚ್ಛ್ಮಶ್ರುವರ್ಧಕಿಸಶ್ಚ ಯೇ ।
ಲೇಖಕಾ ಗಣಕಾ ಯೇ ಚ ತಥಾ ತಂಡುಲಕಾರಕಾಃ ॥ ೧೭ ॥

---

ಅನುಯಾನಮಾಡಲಿ ವಿಷವೈದ್ಯರೂ, ಶಲ್ಯವೈದ್ಯರೂ, ವಸ್ತ್ರಸ್ಪೃಷ್ಯರೂ, ದೇಪ ಚಿಕಿತ್ಸಕರೂ ಹೊರಡಲಿ. ಬಡಗಿಗಳೂ, ಕುಲುಮೆ ಕೆಲಸದವರೂ, ಜವಳಿ ಅಂಗಡಿಯವರೂ, ಮರನೆಡುವವರೂ, ಭಾವಿ ತೋಡುವವರೂ, ಸುಣ್ಣ ಸುಡುವವರೂ, ಬಿದಿರುಗೆಲಸದ ಗೌರಿಗಳೂ, ಚಾಪೆ ನೇಯುವವರೂ, ಅಲಂಕಾರ ಕೆಲಸ ಬಲ್ಲವರೂ, ನವಿಲು ಸಾಕುವವರೂ, ಹಕ್ಕಿಸಾಕುವ ಜನರೂ, ರಂಗಾರೆಯುವರೂ, ಎಣ್ಣೆ ಮಾರುವವರೂ, ತಾಮ್ರ ಹಿತ್ತಾಳೆ ಪಾತ್ರೆಗಳನ್ನು ತಯಾರಿಸುವವರೂ, ಆಯುಧಗಳನು ನಿರ್ಮಿಸುವ ಕುಶಲರೂ, ಕಂಬಳಿಮಾಡುವ ಕುರುಬರೂ, ಎಮ್ಮೆ ಸಾಕುವ ಜನರೂ, ನೇಯ್ಗೆಯವರೂ, ಚಿಪ್ಪಿಗರೂ, ಸೂತಮಾಗಡ ವಂದಿಗಳೆಂಬ ಹೊಗಳುಭಟರುಗಳೂ,

ಸಕ್ತುಕಾರಾಶ್ಚ ಯೇ ಕೇಚಿಚ್ಛಾಕಪಣ್ಯೋಪಜೀವಿನಃ ।
ತೈಲಿಕಾ ಗಾಂಧಿಕಾಶ್ಚೈವ ತೀರ್ಥಸಂಶುದ್ಧಿಕಾರಕಾಃ ॥ ೧೮ ॥

ಚಿತ್ರಕರ್ಮವಿದೋ ಯೇ ಚ ಯೇ ಚ ಲಾಂಗೂಲಿಕಾ ಜನಾಃ ।
ಸೂತಾಃ ಪೌರಗನಾಶ್ಚೈವ ಸೌವಿದಲ್ಲಾಶ್ಚ ಲಕ್ಷ್ಮಣ ॥ ೧೯ ॥

ಗೋಪಾ ವನಚರಾ ಯೇ ಚ ನದೀತೀರವಿಚಾರಣಾಃ ।
ಗೋಸಂಘೈರ್ಮಹಿಷೀಸಂಘೈಸ್ತೇಽನುಯಾಂತು ಯಥಾಸುಖಂ ॥ ೨೦ ॥

ಶ್ರೇಣೀ ಮಹತ್ತರಾ ಯೇ ಚ ಗ್ರಾಮಘೋಷಮಹತ್ತರಾಃ ।
ತಥೈವಾಟವಿಕಾ ಯೇ ಚ ಯೇ ಚ ಶೈಲವಿಚಾರಣಾಃ ॥ ೨೧ ॥

ಸೌಮಿತ್ರೇ ಸರ್ವ ಏವೈತೇ ಸುಭೃತಾಶ್ಚ ಸುಪೂಜಿತಾಃ ।
ಅನುಯಾಂತು ಕುಮಾರಂ ಮೇ ಭರತಂ ಭ್ರಾತೃವತ್ಸಲಂ ॥ ೨೨ ॥

---

ಚರ್ಮ ಹದಮಾಡುವವರೂ, ಇದ್ದಲು ಸುಡುವವರೂ, ಬಲೆ ಬೀಸುವ ಬೆಸ್ತರೂ, ಬೇಟೆಗಾರರೂ, ನೀರು ಹೊರುವವರೂ, ಸೌದೆ ಸೀಳುವವರೂ, ಬಟ್ಟೆ ಒಗೆಯುವವರೂ, ಮನೆಗೆಲಸ ಮಾಡುವವರೂ, ಗಡಿಗೆ, ಕುಡಿಕೆ ಮಾಡುವ ಕುಂಬಾರರೂ, ದಪ್ಪ ದಪ್ಪ ಮಾನೆ ಬೆಳೆಸಿರುವವರೂ, ಗ್ರಂಥಕರ್ತರೂ, ಪತ್ರವ್ಯವಹಾರ ಮಾಡುವ ಲೇಖಕರೂ, ಜೋಯಿಸರೂ, ಮುತ್ತು ಭತ್ತ ಕುಟ್ಟುವವರೂ, ಹಿಟ್ಟು ಬೀಸುವವರೂ, ಅಕ್ಕಿಮಾಡುವವರೂ, ತರಕಾರಿ ಮಾರುವವರೂ, ತರಕಾರಿ ಹೆಚ್ಚುವವರೂ, ಅಡಿಗೆ ಮನೆಯ ಯಜಮಾನರೂ, ಅಡಿಗೆಯವರೂ, ಊಳಿಗದವರೂ, ದನಕಾಯುವವರೂ, ಹಸು ಕರೆಯುವವರೂ, ಅವರವರ ಮಂದೆಯ ಹಸುಗಳೊಡನೆ ಹೊರಡಲಿ ಮೇಲ್ಕಂಡ ಗುಂಪುಗಳೆಲ್ಲಾ ಸಾಲುಗಟ್ಟಿ ಅವರವರ ಅಧಿಕಾರಗಳೊಡನೆ ಪ್ರಯಾಣಮಾಡಲಿ. ಈ ರೀತಿ ಲಕ್ಷ್ಮಣನಿಗೆ ರಾಮನು ಹೇಳಿದೊಡನೆಯೇ, ರಾಜಾಜ್ಞಾಪ್ರಕಾರವಾಗಿ ಲಕ್ಷ್ಮಣನು

ಇತ್ಯೇವಮುಕ್ತಾಃ ಸ ತು ತಾಃ ಸಮಸ್ತಾ-
ನಾಜ್ಞಾಪಯಾಮಾಸ ನರೇಂದ್ರವಾಕ್ಯಾತ್ ।
ಆಮಂತ್ರ್ಯ ರಾಮಂ ಶಿರಸಾ ಚ ಸರ್ವೇ
ವಿನಿರ್ಯಯುಸ್ತೇ ನಗರಾತ್ಪ್ರಹೃಷ್ಟಾಃ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅನುಯಾತ್ರಿಕವರ್ಣನಂನಾಮ
ತ್ರ್ಯಧಿಕ ದ್ವಿಶತತಮೋಽಧ್ಯಾಯಃ.

ಸಕಲರಿಗೂ ಆಜ್ಞಾಪಿಸಿ, ರಾಮನ ಮುಂದೆ ಈ ವೃತ್ತಾಂತವನ್ನು ತಿಳಿಸಿ ನಮಸ್ಕರಿಸಿದನು ಲಕ್ಷ್ಮಣನ ಅಪ್ಪಣೆಯಂತೆ ಮೇಲೆ ವಿವರಿಸಿದ ಸಮಸ್ತ ಜನರೂ ಭರತನೊಡನೆ ಪ್ರಯಾಣಮಾಡಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಅನುಯಾತ್ರಿಕ ವರ್ಣನೆಯೆಂಬ
ಹೆಸರಿನ ಇನ್ನೂರಮೂರನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರಧಿಕ ದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಏತಸ್ಮಿನ್ನೇವಕಾಲೇ ತು ರಾಮಃ ಶುಶ್ರಾವ ತನ್ಮಹತ್ ।
ಶಂಖವಾದ್ಯರವೋನ್ಮಿಶ್ರಂ ಭರತಸ್ಯಾನುಯಾತ್ರಿಕಂ ॥ ೧ ॥

ರಾಜದ್ವಾರಮುಪಾಗತ್ಯ ಭರತೋಽಪಿ ಮಹಾಯಶಾಃ ।
ಪದ್ಭ್ಯಾಂ ಜಗಾಮ ರಾಜಾನಮವತೀರ್ಯ ತುರಂಗಮಾತ್ ॥ ೨ ॥

ಸ ದದರ್ಶ ತದಾ ರಾಮಂ ರತ್ನಸಿಂಹಾಸನಸ್ಥಿತಂ ।
ಅನುಲಿಪ್ತಂ ಪರಾರ್ಧ್ಯೇನ ಚಂದನೇನ ಸುಗಂಧಿನಾ ॥ ೩ ॥

## ಇನ್ನೂರನಾಲ್ಕನೆಯ ಅಧ್ಯಾಯವು

೧ ಮಾರ್ಕಂಡೇಯನು ಹೇಳುತ್ತಾನೆ —ಇದೇ ಸಮಯದಲ್ಲಿ ಭರತನ ಅನುಯಾತ್ರಿಕಸೂಚಕವಾದ ಶಂಖವಾದ್ಯ ರವಗಳಿಂದೊಡಗೂಡಿದ ಮಹತ್ತರವಾದ ಧ್ವನಿಯು ರಾಮನ ಕಿವಿಗೆ ಕೇಳಿಸಿತು.

೨. ಅಷ್ಟರಲ್ಲೇ ಭರತನೂ ಕೂಡ ತನ್ನ ವಿಜಯಯಾತ್ರೆಯನ್ನು ರಾಮನಿಗ ತಿಳಿಸಿ ಅವನ ಚರಣಗಳಿಗಭಿವಂದಿಸಿ ಹೊರಡಬೇಕೆಂದಾಲೋಚಿಸಿ, ಕುದುರೆಯನ್ನಿಳಿದು ಕಾಲುನಡಿಗೆಯಿಂದಲೇ ರಾಮನ ಮನೆಯ ಬಳಿಗೆ ಬಂದನು

೩-೯. ಭರತನು ಲೀಲಾನಾಟಕ ರೂಪಿಯಾದ ಪರಮಾತ್ಮನಾದ ಶ್ರೀರಾಮ ಚಂದ್ರಮೂರ್ತಿಯನ್ನು ಸಂದರ್ಶನಮಾಡಿ ಅವನ ಆಶೀರ್ವಾದವಂ ಪಡೆಯಲಪೇಕ್ಷಿಸಿ

ಸೂಕ್ಷ್ಮಂ ವಸಾನಂ ವಸನಂ ಸರ್ವಾಭರಣಭೂಷಿತಂ ।
ತೇಜಸಾ ಭಾಸ್ಕರಾಕಾರಂ ಸೌಂದರ್ಯೇಣೋಡುಪೋಪಮಂ ॥ ೪ ॥

ಕ್ಷಮಯಾ ಪೃಥಿವೀತುಲ್ಯಂ ಕ್ರೋಧೇ ಕಾಲಾನಲೋಪಮಂ ।
ಬೃಹಸ್ಪತಿಸಮಂ ಬುದ್ಧ್ಯಾ ವಿಷ್ಣುತುಲ್ಯಂ ಪರಾಕ್ರಮೇ ॥ ೫ ॥

ಸತ್ಯೇ ದಾನೇಽಪ್ಯನೌಪಮ್ಯಂ ದಮೇ ಶೀಲೇ ಚ ರಾಘವಂ ।
ಪುರೋಹಿತೈರಮಾತ್ಯೈಶ್ಚ ಯುತಂ ಪ್ರಕೃತಿಭಿಸ್ತಥಾ ॥ ೬ ॥

ದೃಷ್ಟ್ವಾ ತಂ ಭರತಃ ಶ್ರೀಮಾಞ್ಜಗಾಮ ಶಿರಸಾ ಮಹೀಂ ।
ಭರತಂ ಯುವರಾಜಾನಂ ರಾಮಾಯ ವಿದಿತಾತ್ಮನೇ ॥ ೭ ॥

ನ್ಯವೇದಯತ ಧರ್ಮಾತ್ಮಾ ಪ್ರತೀಹಾರಃ ಸಲಕ್ಷ್ಮಣಂ ।
ಉತ್ಥಾಯ ಕಂಠೇ ಜಗ್ರಾಹ ರಾಮೋಽಪಿ ಭರತಂ ತದಾ ॥ ೮ ॥

---

ಆ ಭಗವಂತನ ಶರೀರವನ್ನು ಪ್ರವೇಶಿಸಿದನು ಅಲ್ಲಿ ಆ ಲೀಲಾಮಾನುಷ ವಿಗ್ರಹನು ಆಗ ರತ್ನಸಿಂಹಾಸನದಲ್ಲಿ ಆಸನದಿಂದ ಕುಳಿತಿದ್ದನು ಆ ಮಹಾನುಭಾವನು ಮೈಗೆಲ್ಲಾ ಲೇಪಿಸಿಕೊಂಡಿದ್ದ ಅತ್ಯಂತ ಶ್ರೇಷ್ಠವಾದ ಸುಗಂಧ ದ್ರವ್ಯದಿಂದ ಹೊರಹೊರಟ ಪರಿಮಳವು ಸಕಲ ಪ್ರದೇಶವನ್ನೂ ಸುಗಂಧಮಯವನ್ನಾಗಿ ಮಾಡಿದ್ದಿತು ಶ್ರೀರಾಮಮೂರ್ತಿಯು ತೆಳುವಾದ ಬಟ್ಟೆಯನ್ನು ಉಟ್ಟು ಅಂಥವನ್ನೇ ಹೊದ್ದಿದ್ದನು ಸರ್ವಾವಯವಗಳಲ್ಲಿಯೂ ಸುವರ್ಣ ವಜ್ರರತ್ನ ಮಣಿಖಚಿತವಾದ ಅನರ್ಘ್ಯವಾದಾಭರಣಗಳು ಕಂಗೊಳಿಸುತ್ತಲಿದ್ದವು ಮುಖದ ಕಾಂತಿಯು ಸೂರ್ಯನಂತೆ ಅತ್ಯಂತ ತೇಜಸ್ಸಿನಿಂದ ಹೊಳಹೊಳೆಯುತ್ತಲಿದ್ದಿತು ಆ ಸ್ವಾಮಿಯ ಮುಖ ಸೌಂದರ್ಯವಾದರೋ ಚಂದ್ರನಂತೆ ಆಹ್ಲಾದಜನಕವಾಗಿದ್ದಿತು ಆ ಜಗದೊಡೆಯನ ಕ್ಷಮೆಯು ಭೂದೇವಿಯ ಕ್ಷಮೆಯಂತೆ ಅಪಾರವಾಗಿದ್ದಿತು ಭಗವಂತನು ಕೋಪಿಸಿಕೊಂಡರೆ ಕಾಲಾಗ್ನಿಜ್ವಾಲೆಯು ಅವನ ಮುಂದೆ ನಿಲ್ಲುತ್ತಿರಲಿಲ್ಲ ಆ ತ್ರಿಲೋಕೇಶ್ವರನ ಬುದ್ಧಿಯನ್ನು ನೋಡಿ ಬೃಹಸ್ಪತಿಯೂ ಕೂಡ ಪಾಠ ಕಲಿಯಬೇಕಾಗಿದ್ದಿತು ಪರಾಕ್ರಮದಲ್ಲೋ ಭಯಂಕರ ಪರಾಕ್ರಮಶಾಲಿಯಾದ ಸಾಕ್ಷಾನ್ಮಹಾವಿಷ್ಣುವಾದ ತನ್ನನ್ನೇ ತಾನು ಹೋಲುತ್ತಿದ್ದನು ಸತ್ಯದಾನ ದಮಾಶೀಲಗಳಲ್ಲಂತೂ, ಈ ರಮಾಪತಿಯಾದ ರಘುಕುಲ ತಿಲಕನನ್ನು ಹೋಲುವವರು ಸಪ್ತ ಲೋಕಗಳಲ್ಲಿ ಹುಡುಕಿದರೂ ಮತ್ತೊಬ್ಬರು ಸಿಗಲಾರರು ಇಂತಹ ಮಹಾಮಹಿಮೆಗಳಿಂದೊಪ್ಪು

**ಮೂರ್ಧ್ನಿ ಚೈನ ಮುಪಾಘ್ರಾಯ ಆದಿದೇಶಾಸ್ಯ ಶಾಸನಂ ।**
**ಭರತಂ ತು ಸುಖಾಸೀನಂ ರಾಮೋ ವಚನಮಬ್ರವೀತ್ ॥ ೯ ॥**

ತ್ತಿದ್ದ ಆ ರಾಮಚಂದ್ರ ಪರಬ್ರಹ್ಮನು ಪುರೋಹಿತರಿಂದಲೂ, ಮಂತ್ರಿವರ್ಗದಿಂದಲೂ, ಇತರ ಮುಖ್ಯ ಪರಿವಾರ ಜನರಿಂದಲೂ ಸುತ್ತುವರಿದವನಾಗಿ ಒಡ್ಡೋಲಗವನ್ನು (ರಾಜ ಸಭೆ) ಮಂಡಿಸಿ ಆತ್ಮಾರಾಮನಂತೆ ರಾರಾಜಿಸುತ್ತಲಿದ್ದನು

ಇಂತಹ ನಯನ ಮನೋಹರನಾದ ತನ್ನ ಜ್ಯೇಷ್ಠಭ್ರಾತೃವಾದ, ಭೂತಪಂಚಕ ಗಳಿಗೊಡೆಯನಾದ ಜಗದಾನಂದಮೂರ್ತಿಯನ್ನು ಕಂಡೊಡನೆಯೇ ಆ ಭಗವಂತನ ಅನನ್ಯಭಕ್ತನಾದ ಭರತನು ನೆಲದ ಮೇಲೆ ತಲೆಯನ್ನು ಸೋಕಿಸಿ ಉದ್ದವಾಗಿ ಅಡ್ಡಬಿದ್ದನು.

ಆಗ ಅಲ್ಲಿದ್ದ ಮಂಧಿಮಾಗಧರು, ಯುವರಾಜರಾದ ಭರತನೃಪಾಲಕರು ಸಾಷ್ಟಾಂಗ ನಮಸ್ಕಾರಮಾಡುತ್ತಿದ್ದಾರೆ. ಮಹಾಸ್ವಾಮಿ ! ಸ್ವಾಮಿ ಸರಾಕ್ ! ಎಂದು ಘಟ್ಟಿಯಾಗಿ ಕೂಗಿದರು

ಮತ್ತೊಬ್ಬ ಅಲ್ಲಿ ನಿಂತಿದ್ದ ಪ್ರತೀಹಾರಿಯು ಭರತನರೇಶ್ವರರು ಮಾತ್ರವೇ ಅಲ್ಲ ಅವರ ಸಹೋದರರಾದ ಲಕ್ಷ್ಮಣ (ರಾಜ) ರೂ ಸಹ ಜತೆಯಲ್ಲಿ ಬಂದಿದ್ದಾರೆ ಮಹಾಸ್ವಾಮಿ ! ಸರಾಕ್ ! ಎಂದು ಕೂಗಿದನು

ಮಂಗಿನೂಗಧ ಪ್ರತೀಹಾರಿಗಳ ಮಾತು ಕಿವಿಗಳಿಗೆ ಸೋಕಿದೊಡನೆಯೇ ಶ್ರೀರಾಮಚಂದ್ರಮೂರ್ತಿಯು ಕೂಡಲೆ ಸಿಂಹಾಸನದಿಂದ ಕೆಳಗಿಳಿದು ಎಂದು ಭರತನ ಕತ್ತನ್ನು ತಬ್ಬಿಕೊಂಡು ಗಾಢಾಲಿಂಗನಮಾಡಿದನು. ಮತ್ತು ಆ ಪ್ರೀತಿಯ ತಮ್ಮನ ತಲೆಯನ್ನು ಪದೇ ಪದೇ ಮೂಸಿ ನೋಡಿದನು ಮತ್ತು ಅವನ ಕೈಗಳನ್ನು ತಾನೇ ಹಿಡಿದುಕೊಂಡು ಕೆಳಗೆ ಕುಳ್ಳಿರಿಸಿದನು ಈರೀತಿ ಭರತನನ್ನು ಕುಳ್ಳಿರಿಸಿದೊಡ ನೆಯೇ ಸಕಲ ಹೃದಯಾಂತರಂಗವಿರಾಜಮಾನನಾದ, ಸಕಲ ಪ್ರಾಣಾಧಾರಭೂತ ನಾದ ದೇವದೇವೋತ್ತಮನಾದ ಆ ಪರಮಪುರುಷನಾದ ಶ್ರೀರಾಮಚಂದ್ರಮೂರ್ತಿಯು ಆ ಭರತನನ್ನು ಕುರಿತು ಅವನ ಶುಭ ವಿಜಯಕಾಲಗಳಲ್ಲಿ ಇಂತು ಸಂಗಭಾಷಣವನ್ನು ಮಾಡಿದನು ಮುಂದಿನ ಶ್ಲೋಕಗಳಲ್ಲವನ್ನೋದಿ ವಾಚಕರು ಧನ್ಯರಾಗಲಿ

ಚಪ್ಪಣಿ ಶ್ರೀರಾಮಚಂದ್ರನು, ಅಂಜನೇಯನು ಸೀತಾಮಾತೆಯನ್ನು ನೋಡಿಕೊಂಡು ಲಂಕಾಪಟ್ಟಣದಿಂದ ಹಿಂತಿರುಗಿ ಬಂದು ಶುಭೋದಂತವನ್ನು ಹೇಳಿ ದಾಗ ಒಮ್ಮೆ ಆ ತನ್ನ ಪ್ರೇಮಭಕ್ತನಿಗೆ ಆಲಿಂಗನವನ್ನು ಕೊಟ್ಟು ಈ ಮಾತನ್ನು ಹೇಳಿದನು.

ಗಂಧರ್ವಪುತ್ರಾಂಸ್ತಾನ್ಹತ್ವಾ ಕರ್ತವ್ಯಂ ನಗರದ್ವಯಂ ।
ಸಿಂಧೋರುಭಯಪಾರ್ಶ್ವೇ ತು ಪುತ್ರಯೋರುಭಯೋಃ ಕೃತೇ ॥ ೧೦ ॥

ಅಭಿಷಿಚ್ಯ ತದಾ ವತ್ಸ ಪುತ್ರೌ ನಗರಯೋಸ್ತಯೋಃ ।
ಯುಧಾಜಿತಿ ಪರೀಧಾಯ ಕ್ಷಿಪ್ರಮಾಗಂತುಮರ್ಹಸಿ ॥ ೧೦ ॥

ತ್ವಯಾ ವಿನಾ ನರವ್ಯಾಘ್ರ ನಾಹಂ ಜೀವಿತುಮುತ್ಸಹೇ ।
ಕ್ಷತ್ರಧರ್ಮಂ ಪುರಸ್ಕೃತ್ಯ ತತ್ರ ತ್ವಂ ಪ್ರೇಷಿತೋ ಮಯಾ ॥ ೧೨ ॥

ಸ ತ್ವಂ ಗಚ್ಛ ಮಹಾಭಾಗ ಮಾ ತೇ ಕಾಲಾತ್ಯಯೋ ಭವೇತ್ ।
ಸ್ವಸ್ತ್ಯಸ್ತು ತೇಽಂತರಿಕ್ಷೇಭ್ಯಃ ಪಾರ್ಥಿವೇಭ್ಯಶ್ಚ ಗಚ್ಛತಃ ॥ ೧೩ ॥

---

ಇದಾನೀಂತೇ ಪ್ರಯಚ್ಛಾಮಿ ಸರ್ವಸ್ವಂ ಮಮ ಮಾರುತೇ ।
ಇತ್ಯಾಲಿಂಗ್ಯ ಸಮಾಶ್ಲಿಷ್ಯ ಗಾಢಂ ವಾನರಪುಂಗವಂ ॥ ೧ ॥

ಪರಿರಂಭೋಹಿಮೇ ವತ್ಸ ದುರ್ಲಭಃ ಪರಮಾತ್ಮನಃ ।
ಅತಸ್ತ್ವಂ ಮಮಭಕ್ತೋಸಿ ಪ್ರಿಯೋಽಸಿ ಹರಿಪುಂಗವ ॥ ೨ ॥

ಓ ನನ್ನ ಪ್ರಿಯಭಕ್ತನೆ! ನೀನು ಮಾಡಿದ ಉಪಕಾರಕ್ಕಾಗಿ ನನ್ನ ಸರ್ವಸ್ವ ವನ್ನೂ ಕೊಟ್ಟುಬಿಟ್ಟಿದ್ದೇನ ತೆಗೆದುಕೋ, ಎಂದು ಅವನ ಕತ್ತನ್ನು ಬಿಗಿಯಾಗಿ ತಬ್ಬಿಕೊಂಡು ಈ ಮಾತನ್ನಾಡಿದನು ಓ ನನ್ನ ಪ್ರಾಣಪ್ರಿಯನಾದ ಮಾರುತಿಯೇ, ಪರಮಾತ್ಮನಾದ ನನ್ನ ಆಲಿಂಗನವೆಂಬುದು ಸಾಮಾನ್ಯನಾಗಿ ಎಲ್ಲರಿಗೂ ಲಭ್ಯವಾಗ ತಕ್ಕದಲ್ಲ ಪರಮೋಪಕಾರಿಯಾದ ನಿನಗೆ ನನ್ನ ಸರ್ವಸ್ವದಾನರೂಪವಾದ ಗಾಢಾ ಲಿಂಗನವು ದೊರೆತಿದೆ

ಈ ಭಗವಂತನ ಮಾತನ್ನು ಕೇಳಿ ಮಾರುತಿಯು ಪರಮಪುರುಷ, ಶ್ರೀರಾಮಚಂದ್ರ ಓ ನನ್ನೊಡೆಯ ರಾಮಮೂರ್ತೀ, ನನಗೆ ಈ ಪರಮಪುಣ್ಯಲಭ್ಯವಾದ ಮಾನವ ಜನ್ಮವನ್ನು ಕೊಟ್ಟೆ ನಿನ್ನಲ್ಲಿ ಭಕ್ತಿಯನ್ನೂ ಕೊಟ್ಟೆ ನನಗೆ ಇನ್ನೇನಾಗಬೇಕೆಂದು ಪ್ರತ್ಯುತ್ತರ ಹೇಳಿದನು

೧೦-೧೯. ರಾಮನು ಭರತನನ್ನು ಕುರಿತು ಇಂತು ಹೇಳಿದನು —ಭರತ, ನೀನು ಸಿಂಧೂನದೀ ತೀರದಲ್ಲಿರುವ ಶೈಲೂಷ ಗಂಧರ್ವ ಗಣವನ್ನು ಸೈನ್ಯಸಹಿತನಾಗಿ

ದಿವ್ಯೇಭ್ಯಶ್ಚೈವ ಭೂತೇಭ್ಯಃ ಸಮರೇ ಚ ತಥಾನಘ ॥ ೧೪ ॥

ಸ್ವಾಂಸ್ವಾಂ ದಿಶಮಧಿಷ್ಠಾಯ ದಿಕ್ಪಾಲಾ ದೀಪ್ತತೇಜಸಃ ।
ಪಾಲಯಂತು ಸದಾ ತುಭ್ಯಂ ದೀಪ್ತವಿಗ್ರಹಧಾರಿಣಃ ॥ ೧೫ ॥

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸಾಧ್ಯಾಶ್ಚ ಸಮರುದ್ಗಣಾಃ ।
ಆದಿತ್ಯಾ ವಸವೋ ರುದ್ರಾ ಅಶ್ವಿನೌ ಚ ಭಿಷಗ್ವರೌ ॥ ೧೬ ॥

ಭೃಂಗವೋಂಗಿರಸಶ್ಚೈವ ಕಾಲಸ್ಯಾವಯವಾಸ್ತಥಾ ।
ಸರಿತಃ ಸಾಗರಾಃ ಶೈಲಾಃ ಸಮುದ್ರಾಶ್ಚ ಸರಾಂಸಿ ಚ ॥ ೧೭ ॥

ದೈತ್ಯದಾನವಗಂಧರ್ವಾಃ ಪಿಶಾಚೋರಗರಾಕ್ಷಸಾಃ ।
ದೇವಪತ್ನ್ಯಸ್ತಥಾ ಸರ್ವಾಃ ದೇವಮಾತರ ಏವ ಚ ॥ ೧೮ ॥

---

ಹೋಗಿ ಸಂಹರಿಸಿ, ಆ ನದೀತೀರದ ಎರಡು ಭಾಗಗಳಲ್ಲೂ ಎರಡು ದೇಶವನ್ನು ನಿರ್ಮಾಣಮಾಡು. ಆ ರಾಜ್ಯಗಳೆರಡನ್ನೂ ನಿನ್ನಿಬ್ಬರು ಮಕ್ಕಳಿಗೆ ಕೊಟ್ಟುಬಿಡು ಈ ಮೇರೆ ನೀನು ಆ ನಗರಗಳಲ್ಲಿ ನಿನ್ನಿಬ್ಬರು ಮಕ್ಕಳಿಗೂ ಪಟ್ಟಾಭಿಷೇಕವನ್ನು ಮಾಡಿ, ಈ ವೃತ್ತಾಂತವನ್ನು ಕೈಕೆಯರಾಜ್ಯದಲ್ಲಿರುವ ನಿನ್ನ ಸೋದರಮಾವನಾದ ಯುಧಾಜಿನ್ಮಹಾರಾಜರಿಗೆ ತಿಳಿಸಿ ನನ್ನ ಬಳಿಗೆ ಬಾ

ಭರತ, ನಿನ್ನನ್ನು ಬಿಟ್ಟು ನಾನು ಬದುಕಿರಲಾರೆ ಆದರೂ ಕ್ಷಾತ್ರಧರ್ಮಕ್ಕೆ ಮರ್ಯಾದೆಕೊಡುವುದಕ್ಕಾಗಿಯೂ, ದುಷ್ಟ ಶಿಕ್ಷಣಕ್ಕಾಗಿಯೂ ಈಗ ನಿನ್ನನ್ನು ಕಳು ಹಿಸಿಕೊಡಬೇಕಾಗಿ ಬಂದಿದೆ

ಅಪ್ಪ ಮಗು, ಭರತ! ಇನ್ನು ಹೊರಡಪ್ಪ! ಸಾವಕಾಶಮಾಡಬೇಡ ನಿನಗೆ ಮಂಗಳವಾಗಲಿ, ನಿನ್ನ ಈ ವಿಜಯಪ್ರಯಾಣಕಾಲದಲ್ಲಿ ಮಾರ್ಗಗಾಮಿಯಾದ ನಿನಗೆ ಆಕಾಶವೂ, ಭೂಮಿಯೂ, ದೇವಲೋಕದ ದೇವತೆಗಳೂ, ಭೂಲೋಕದ ಪ್ರಾಣಿಗಳೂ ಮಂಗಳವನ್ನುಂಟುಮಾಡಲಿ

ನೀನು ಯುದ್ಧಮಾಡುತ್ತಿರುವ ಸಮಯದಲ್ಲಿ ಸಕಲ ದಿಕ್ಪಾಲಕರೂ ತಮ್ಮ ತಮ್ಮ ಸ್ಥಳಗಳಲ್ಲೇ ಇದ್ದುಕೊಂಡು ತಮ್ಮ ತೇಜಸ್ಸಿನಿಂದ ದಿವ್ಯದೇಹವನ್ನು ಧರಿಸಿ ನಿನ್ನನ್ನು ಸಂರಕ್ಷಿಸಲಿ ಬ್ರಹ್ಮನೂ, ರುದ್ರನೂ, ವಿಷ್ಣುವೂ, ಸಾಧ್ಯರೂ, ಸಪ್ತಮ ರುದ್ಗಣಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ, ಅಶ್ವಿನೀ

ಶಸ್ತ್ರಾಣ್ಯಸ್ತ್ರಾಣಿ ಶಾಸ್ತ್ರಾಣಿ ಮಂಗಲಾಯ ಭವಂತು ತೇ ।
ವಿಜಯಂ ದೀರ್ಘಮಾಯುಶ್ಚ ಭೋಗಾಂಶ್ಚಾನ್ಯಾ ದಿಶಂತು ತೇ ॥ ೧೯ ॥

ಇತಿ ಸ್ವಸ್ತ್ಯಯನಂ ಶ್ರುತ್ವಾ ರಾಜ್ಞಾ ಸ ಸಮುದೀರಿತಂ ।
ರಾಮಸ್ಯ ಪಾದೌ ಶಿರಸಾ ತ್ವಭಿವಂದ್ಯ ಧನುರ್ಧರಂ ॥ ೨೦ ॥

ನಿರ್ಗತ್ಯ ರಾಜಭವನಾದ್ರಾಮಾಜ್ಞಾಕಲ್ಪಿತಂ ಜಗತ್ ।
ಹಿಮಾದ್ರಿಕೂಟಸಂಕಾಶಂ ಚಾರುದಂಷ್ಟ್ರೋಜ್ಜ್ವಲಾನನಂ ॥ ೨೧ ॥

ಮದೇನ ಸಿಂಚಮಾನಂ ಚ ನೃಪವೇಶ್ಮಾಜಿರಂ ನೃಪ ।
ಸಮಾಕ್ರಾಂತಕಟಂ ಚಾಪಿ ಪಾನಲುಬ್ಧಶಿಲೀಮುಖೈಃ ॥ ೨೨ ॥

ದೇವತೆಗಳೂ ಭೃಗು ಅಂಗೀರಸಾದಿ ಮಹರ್ಷಿಗಳೂ, ಕಾಲಾವಯವಗಳಾದ ನಿಮಿಷ-ಘಳಿಗೆ-ಮುಹೂರ್ತ-ಯಾಮ-ದಿನ-ತಿಥಿ-ಪಕ್ಷ-ಮಾಸ-ಸಂವತ್ಸರಗಳೂ, ಮೋಳಿಗಳೂ, ಸಮುದ್ರಗಳೂ, ಬೆಟ್ಟಗಳೂ, ಸರೋವರಗಳೂ, ದೈತ್ಯದಾನವ ಗಂಧರ್ವರೂ, ಪಿಶಾಚೋರಗ ರಾಕ್ಷಸರೂ, ದೇವಪತ್ನಿಯರೂ, ದೇವಮಾತೆಯರೂ, ಶಸ್ತ್ರಾಸ್ತ್ರಗಳೂ, ಶಾಸ್ತ್ರಗಳೂ ನಿನಗೆ ಮಂಗಳವನ್ನುಂಟುಮಾಡಲಿ ಮತ್ತು ಈಗ ನಾನು ಹೇಳಿದ ಸಕಲರೂ ನಿನಗೆ ವಿಜಯವನ್ನೂ ದೀರ್ಘಾಯುಸ್ಸನ್ನೂ ಸಕಲ ಭೋಗ ಸಂಪತ್ತುಗಳನ್ನೂ ಅನುಗ್ರಹಿಸಲಿ ನೀನು ಹೋಗಿ ಬಾ, ಮಗುವೆ!

೨೦-೨೨ ಈರೀತಿ ತನಗೆ ತನ್ನ ಅಣ್ಣನು ಶುಭಾಶಂಸನವನ್ನು ಮಾಡಿದುದನ್ನು ಕೇಳಿ ಭರತನು, ಧನುರ್ಧಾರಿಯಾಗಿಯೇ ನೆಲದ ತನಕ ಬಗ್ಗಿ ಶ್ರೀರಾಮನ ಚರಣಗಳಿಗೆ ಅಭಿವಂದಿಸಿ ಅವನ ಅಪ್ಪಣೆಯಂತೆ ಹೊರಟು, ಈ ಪ್ರಪಂಚವೆಲ್ಲವೂ ಶ್ರೀರಾಮಚಂದ್ರ ಪರಮಾತ್ಮನ ಆಜ್ಞೆಯಿಂದಲೇ ಕಲ್ಪಿತವಾದುದೆಂದೂ, ಈ ಮಹಾನುಭಾವನೇ ಜಗದೊಡೆಯನೆಂದೂ ದೃಢವಾಗಿ ನಂಬಿ ಅರಮನೆಯಿಂದ ಹೊರಬಿದ್ದನು

ಭರತನು ಹೊರಗೆ ಬಂದೊಡನೆ ಅಲ್ಲಿ ಪಟ್ಟದಾನೆಯು ಸಿದ್ಧವಾಗಿ ನಿಂತಿತ್ತು ಅದರ ಲಕ್ಷಣವನ್ನು ಇಲ್ಲಿ ಸ್ವಲ್ಪ ವಿವರಿಸುವೆವು ಹಿಮವತ್ಪರ್ವತದಂತೆ ಪ್ರಕಾಶಿಸುತ್ತಾ ಸುಂದರವಾದ ಕೊಂಬುಗಳಿಂದಲೂ ಸುಂದರಾನನದಿಂದಲೂ ಕೂಡಿದ್ದಾ ಮದಗಜವು ಎರಡು ಕಪೋಲಗಳಿಂದಲೂ ಮದೋದಕ ಧಾರೆಗಳನ್ನು ಸುರಿಸುತ್ತಾ ಬಂದು ಅರಮನೆಯ ಬಾಗಿಲಿನಲ್ಲಿ ಬೆನ್ನುಳ್ಳುದಾಗಿ ಅಲ್ಲಿ ಸಿದ್ಧವಾಗಿ ನಿಂತಿತ್ತು.

ಸ್ತಬ್ಧಚಾರುಮಹಾಕರ್ಣಂ ಮಧೂಪಕೃಪಯೈವ ತು ।
ದೀರ್ಘಾಗ್ರಸುದ್ವಕ್ಷಕ್ಕತಂ ಕೃತಶೃಂಗಾವತಸಕಂ ॥ ೨೩ ॥

ಸ್ವಾಸನಂ ನ್ಯೂಧಕುಂಭಂ ಚ ತಥೋದಗ್ರಂ ಮಹಾಬಲಂ ।
ನಕ್ಷತ್ರಮಾಲಾಂ ಶಿರಸಾ ಧಾರಯಾನಂ ತು ಕಾಂಚನೀಂ ॥ ೨೪ ॥

ಪಟುಸ್ವನೇ ತಥಾ ಘಂಟೇ ದರ್ಶನೀಯೇ ಮನೋಹರೇ ।
ಕುಥಂ ವಿಚಿತ್ರಂ ರಮ್ಯಂ ಚ ಕೋವಿದಾರಂ ಮಹಾಧ್ವಜಂ ॥ ೨೫ ॥

ವೈಜಯಂತ್ಯಃ ಪತಾಕಾಶ್ಚ ಕಿಂಕಿಣೀಜಾಲಮಾಲಿತಾಃ ।
ಸಮಾರೂಢಂ ನಯವಿದಾ ಮಹಾಮಾತ್ರೇಣ ಧೀಮತಾ ॥ ೨೬ ॥

ವೈಡೂರ್ಯದಂಡತೀಕ್ಷ್ಣಾಗ್ರಕಾಂಚನಾಂಕುಶಧಾರಿಣಾ ।
ಜಘನಸ್ಥೇನ ಚಾನ್ಯೇನ ವರತೋಮರಧಾರಿಣಾ ॥ ೨೭ ॥

---

೨೩-೨೭ ಆ ಆನೆಯ ಸುವಾಸನೆಯುಳ್ಳ ಮದೋದಕದಿಂದ ಹೊರಹೊರಟ ಸುವಾಸನೆಯನ್ನು ಆಸ್ವಾದಿಸಲೋಸುಗ ದುಂಬಿಗಳು ಮುತ್ತಿಕೊಂಡಿದ್ದಾಗ್ಯೂ ಆ ರಾಜಠೀವಿಯುಳ್ಳ ಗಜವು ಸ್ವಲ್ಪವೂ ಕಿವಿಯನ್ನಲ್ಲಾಡಿಸದೆ ಗಂಭೀರವಾಗಿ ನಿಂತಿತ್ತು ಅದರ ತಲೆಯೆಂಬ ಶಿಖರದ ಮೇಲೆ ಮಾವುತನು ಕೂತಿರುವುದನ್ನು ನೋಡಿದರೆ ಶಿಖರದ ಮೇಲೆ ಕಲಶವನ್ನಿಟ್ಟಂತೆ ಕಾಣುತ್ತಿತ್ತು ಆ ರೀತಿಯಾದ ಮಾವುತನನ್ನು ತನ್ನ ಕುಂಭಸ್ಥಳದಲ್ಲಿ ಕುಳ್ಳಿರಿಸಿಕೊಂಡಿದ್ದ ಆ ಆನೆಯು, ಚಿನ್ನದ ನಕ್ಷತ್ರಮಾಲಿಕೆಯನ್ನು ಕಂಠದಲ್ಲಿ ಧರಿಸಿಕೊಂಡಿದ್ದಿತು ಅದರ ಕತ್ತಿಗೆ ಕಟ್ಟಿದ್ದ ಚಿನ್ನದ ದೊಡ್ಡ ಗಂಟೆಗಳು ದೊಡ್ಡ ಸದ್ದನ್ನು ಮಾಡುತ್ತಾ ಬಹು ದೂರಕ್ಕೆ ಕೇಳಿಸುತ್ತಲಿದ್ದಿತು ಅದರ ಹೆಗಲ ಮೇಲೆ ಧ್ವಜವೂ, ಪತಾಕೆಯೂ, ಕಿರುಗಂಟೆಗಳಿಂದ ಕೂಡಿ ಕಾಣಬರುತ್ತಿದ್ದುವು ಅದನ್ನು ಧರಿಸಿದ್ದ ಸೇವಕನ ಪಕ್ಕದಲ್ಲಿ ಸಕಲ ನೀತಿಜ್ಞನಾದ ಮಂತ್ರಿಯು ಕುಳಿತಿದ್ದನು. ಆ ಮಂತ್ರಿಯ ಪಕ್ಕದಲ್ಲಿ ವೈಡೂರ್ಯಮಯವಾದ ದಂಡವನ್ನೂ, ಸುವರ್ಣದ ಅಂಕುಶ (ಈಟಿ) ವನ್ನೂ ಹಿಡಿದ ಮತ್ತೊಬ್ಬ ಮಾವುತನು ಕುಳಿತಿದ್ದನು. ಅವನ ಪಕ್ಕದಲ್ಲಿ (ಆನೆಯ ಸೊಂಟದ ಬಳಿ) ಶ್ರೇಷ್ಠವಾದ ತೋಮರಾಯುಧವನ್ನು ಹಿಡಿದ ಮತ್ತೊಬ್ಬ ರಾಜಸೇವಕನು ಕುಳಿತಿದ್ದನು ಆ ಆನೆಯ ಮುಂದುಗಡೆ ನಿಂತು ಜೋಯಿಸರೂ, ಪುರೋಹಿತರೂ, ಋತ್ವಿಕ್ಕುಗಳೂ, ವಿಜಯಪ್ರದವಾದ ವೇದ

ತಥಾ ವೈಜಯಿಕೈರ್ಮಂತ್ರೈರ್ದೈವಜ್ಞೇನಾಭಿಮಂತ್ರಿತಂ ।
ಆರುರೋಹ ಮಹಾತೇಜಾ ಜಯತ್ಕಾರಾಭಿನಂದಿನಃ ॥ ೨೮ ॥

ಪೂರ್ಣೇಂದುಮಂಡಲಾಕಾರಂ ರುಕ್ಮದಂಡಂ ಮನೋಹರಂ ।
ಛತ್ರಮಾದಾಯ ತಂ ಶ್ವೇತಂ ಚಾರುರೋಹ ಸ ಲಕ್ಷ್ಮಣಃ ॥ ೨೯ ॥

ಚಾಮರೌ ದ್ವೌ ಸಮಾದಾಯ ಚಂದ್ರರಶ್ಮಿಸಮಪ್ರಭೌ ।
ಆರೂಢಂ ಯೋಷಿತೋಯುರ್ಗ್ಮಂ ರೂಪೇಣಾಪ್ರತಿಮಂ ಭುವಿ ॥ ೩೦ ॥

ತಂ ಸಮಾರುಹ್ಯ ನಾಗೇಂದ್ರ ಮದಲೇಖಾಭಿಗಾಮಿನಂ ।
ಜಗಾಮ ಸಹ ಗಾರ್ಗ್ಯೇಣ ರಥಾರೂಢೇನ ಯಾದವ ॥ ೩೧ ॥

---

ಮಂತ್ರಗಳಿಂದ ಆ ಆನೆಯನ್ನು ಅಭಿಮಂತ್ರಿಸಿ ಅಂತಹ ಆ ಮಹಾಗಜದ ಮೇಲೆ ಭರತನು ಹತ್ತಿ ಕುಳಿತುಕೊಂಡೊಡನೆಯೇ ಸಕಲ ದಿಗಂತರಾಳಗಳಿಂದ ಜಯಜಯ ಕಾರವು ಹೊರಟು ಭೂಮ್ಯಾಕಾಶಗಳೆಲ್ಲಾ ಜಯತ್ಕಾರಗಳಿಂದ ತುಂಬಹೋಯಿತು

ಆ ಭರತ ಮಹಾಪ್ರಭುವು ಆನೆಯನ್ನು ಹತ್ತಿ ಕುಳಿತುಕೊಂಡೊಡನೆಯೇ ಪೂರ್ಣ ಚಂದ್ರಮಂಡಲದಂತಿರುವ ಮನೋಹರವಾದ ಒಂದು ಚಿನ್ನದ ದಂಡವನ್ನೂ, ಒಂದು ಶ್ವೇತಛತ್ರಿಯನ್ನು ಹಿಡಿದುಕೊಂಡು ಲಕ್ಷ್ಮಣನು ಆನೆಯ ಮೇಲೆ ಹತ್ತಿ ಭರತನ ಸಮೀಪದಲ್ಲಿ ಕುಳಿತನು, ಲಕ್ಷ್ಮಣನು ಕುಳಿತೊಡನೆಯೇ ಅಪ್ರತಿಮಸುಂದರಿಯ ರಾದ ಇಬ್ಬರು ರಮಣಿಯರು ಎರಡು ಚಾಮರಗಳನ್ನು ಧರಿಸಿ ಆ ಆನೆಯ ಮೇಲೆ ಹತ್ತಿ ಭರತನ ಉಭಯ ಪಾರ್ಶ್ವಗಳಲ್ಲಿಯೂ ನಿಂತುಕೊಂಡರು ಭರತನು ಪುರೋಹಿತರಾದ ಗಾರ್ಗ್ಯರನ್ನೂ ಆನೆಯ ಹಿಂದೆ ಇದ್ದ ರಥವನ್ನೇರುವಂತೆ ಹೇಳಿ ಪ್ರಯಾಣ ಹೊರಟನು.

ಗಜವು ಮುಂದಕ್ಕೆ ಸರಿಯಿತು ಆ ಗಜಾರೋಹಿಯಾದ ಭರತನ ಹಿಂದೆ ಚತುರಂಗಬಲವೂ ಹೊರಟಿತು ಎಲ್ಲೆಲ್ಲೂ ಬಾವುಟಗಳು ಹಾರಾಡುತ್ತಲಿದ್ದುವು. 'ಎತ್ತು ಹಾರುವುದಕ್ಕಿಂತ ಮುಂಚೆ ಗೋಣೀಹಾರಿತು ಸಂತೆ ಕಟ್ಟುವುದಕ್ಕಿಂತ ಮುಂಚೆ ಗಂಟುಕಳ್ಳರು ನೆರೆದರು, " ಎಂಬ ಗಾದೆಯನ್ನನುಸರಿಸಿ ಮಾಂಸವನ್ನು ತಿಂದು ಜೀವಿಸುವ ಹದ್ದುಗಳೂ, ಕಾಗೆಗಳೂ, ನರಿಗಳೂ, ಪಿಶಾಚಿಗಳೂ, ಯಕ್ಷ

**ತಮನ್ವಯೌ ಮಹಾಭಾಗ ಚತುರಂಗಮಹಾಬಲಂ ।**
**ಪತಾಕಾಧ್ವಜಸಂಬಾಧಂ ಕಲ್ಪಯಂತಂ ವಸುಂಧರಾಂ ॥ ೩೨ ॥**

**ಶ್ಯೇನಾಃ ಕಾಕವಹಾಃ ಕಂಕಾಃ ಪಿಶಾಚಾ ಯಕ್ಷರಾಕ್ಷಸಾಃ ।**
**ಯಯುಃ ಪುರಸ್ಸರಾಸ್ತಸ್ಯ ಭರತಸ್ಯ ಮಹಾತ್ಮನಃ ॥ ೩೩ ॥**

ಗಂಧರ್ವಪುತ್ರಮಾಂಸಾನಾಂ ಲುಬ್ಧಾ ಮಾಂಸೋಪಜೀವಿನಃ ।
ತೂರ್ಯಘೋಷೇಣ ಮಹತಾ ಬಂದಿನಾಂ ನಿಃಸ್ವನೇನ ಚ ॥ ೩೪ ॥

ವಾಯುನಾ ಚಾನುಲೋಮೇನ ಸೇವ್ಯಮಾನಃ ಸುಗಂಧಿನಾ ।
ಮಂಗಲಾನಾಂ ಚ ಮುಖ್ಯಾನಾಂ ದರ್ಶನಾದ್ಧೃಷ್ಟಮಾನಸಃ ॥ ೩೫ ॥

ನಿರ್ಯಯೌ ರಾಜಮಾರ್ಗೇಣ ಜನಸಂಬಾಧಶಾಲಿನಾ ।
ತೇಜಸ್ವಿನಾಂ ಚ ತೇಜಾಂಸಿ ಹೃದಯಾನಿ ಚ ಯೋಷಿತಾಂ ॥ ೩೬ ॥

ರಾಕ್ಷಸ ಗಣವೂ ಸಹ ಗಂಧರ್ವರ ರುಚಿಕರವಾದ ಮಾಂಸದ ಸವಿಯನ್ನು ನೋಡು ವುದಕ್ಕಾಗಿ ಗುಂಪು ಕಟ್ಟಿಕೊಂಡು ಭರತನಿಗಿಂತ ಬಹುದೂರ ಮುಂದೆ ಪ್ರಯಾಣ ಮಾಡಿಕೊಂಡು ಹೊರಟಿವು

೩೪-೩೬ ಆ ಸಮರಪ್ರಯಾಣ ಕಾಲದಲ್ಲಿ ಎಲ್ಲೆಲ್ಲಿ ನೋಡಿದರೂ ನೃತ್ಯ ಗೀತ ವಾದ್ಯಗಳೆಂಬ ತೂರ್ಯಧ್ವನಿಗಳೂ, ಸ್ತುತಿಪಾಠಕರ ಹೊಗಳುವ ಧ್ವನಿಯೂ ಎಲ್ಲೆಲ್ಲಿಯೂ ತುಂಬಿಹೋಗಿತ್ತು ಎಡಗಡೆಯಿಂದ ವಾಯುವು ಸುಗಂಧದಿಂದೊಡ ಗೂಡಿ ಸುಖವಾಗಿಯೂ ಹಿತವಾಗಿಯೂ ಬೀಸುತ್ತಿತ್ತು ಈ ನಯನಮನೋಹರ ವಾದ ವಿಜಯಯಾತ್ರಾ ಸಂಬಂಧವಾದ ಮೆರವಣಿಗೆ (ಉತ್ಸವ) ಯನ್ನು ನೋಡಲ- ಬೀದಿಗಳಲ್ಲಿ ಬಹು ದೂರದವರೆಗೆ ಜನರ ಗುಂಪು ತುಂಬಿಹೋಗಿತ್ತು ಆ ಗುಂಪಿನ ಮಧ್ಯದಲ್ಲೇ ಮೆರವಣಿಗೆಯು ಮೆಲ್ಲಮೆಲ್ಲನೆ ಸಾಗುತ್ತಿತ್ತು ಗಜಾರೂಢನಾದ ಭರತನು ತೇಜಸ್ವಿಗಳ ತೇಜಸ್ಸನ್ನೂ, ಭಾಮಿನಿಯರ ಭಾವ (ಹೃದಯ) ಗಳನ್ನೂ ಸೆಳೆದು ಕೊಳ್ಳುತ್ತಾ ಊರಿನಿಂದ ಹೊರಕ್ಕೆ ಪ್ರಯಾಣಮಾಡಿದನು

ಆದದಾನೋ ಮಹಾತೇಜಾ ನಗರಾತ್ಸ ವಿನಿರ್ಯಯೌ ।
ಕ್ರೋಶಮಾತ್ರಂ ತತೋ ಗತ್ವಾ ಸಮೇ ದೇಶೇ ಚ ಸೋದಕೇ ॥ ೩೭ ॥

ಪ್ರಶಸ್ತದ್ರುಮಸಂಕೀರ್ಣೇ ಶಿಬಿರಂ ಪ್ರಾಜ್ಞಸೇವಿತಂ ।
ಸೇನಾಧ್ಯಕ್ಷೈಃ ಸುನಿಪುಣೈರ್ವಿವೇಶ ಭರತಸ್ತದಾ ॥ ೩೮ ॥

ಸ ಪ್ರವಿಶ್ಯ ಮಹಾತೇಜಾಃ ಶಿಬಿರಂ ಸ್ವಂ ನಿವೇಶನಂ ।
ಮಂಗಲಾಲಂಭನಂ ಕೃತ್ವಾ ವರಾಸನಗತಃ ಪ್ರಭುಃ ॥ ೩೯ ॥

ಪೌರಜಾನಪದಂ ಸರ್ವಂ ಪ್ರೇಷಯಾಮಾಸ ಯಾದವ ।
ಪರಿಷ್ವಜ್ಯ ತತಃ ಪಶ್ಚಾಲ್ಲಕ್ಷ್ಮಣಂ ಶುಭಲಕ್ಷಣಂ ॥ ೪೦ ॥

ಮೂರ್ಧ್ನಿ ಚೈನಮುಪಾಘ್ರಾಯ ಪ್ರೇಷಯಾಮಾಸ ಧರ್ಮವಿತ್ ।
ಪ್ರಾಯಾಣಿಕಂ ಚ ಶ್ವೋಭೂತೇ ದುಂದುಭಿಸ್ತಾಡ್ಯತಾಂ ಮಮ ॥ ೪೧ ॥

---

೩೭-೪೦ ಒಂದು ಗಾವುದದ ದೂರ ಪ್ರಯಾಣಮಾಡಿದ ಬಳಿಕ ಭರತನು ತೃಣಜಲ ಸಮೃದ್ಧವಾಗಿದ್ದ ಒಂದು ಸಮ ಭೂಭಾಗದಲ್ಲಿ ಸೇನಾನಿವೇಶವನ್ನು (ಬಿಡಾರ) ಮಾಡಿದನು ಆ ಸ್ಥಳದಲ್ಲೆಲ್ಲೆಲ್ಲಿಯೂ ದೊಡ್ಡ ದೊಡ್ಡ ಮರಗಳಿದ್ದುವು ಈ ಪ್ರಯಾಣದ ಮುಂಭಾಗವಾಗಿಯೇ ರಾಜಾಜ್ಞೆಯಿಂದ ಆ ಪ್ರದೇಶದಲ್ಲಿ ಅನೇಕ ಗುಡಾರಗಳು ಸಿದ್ಧವಾಗಿದ್ದುವು ಆ ಸ್ಥಳದಲ್ಲಿ ಸೇನಾಧಿಪತಿಗಳೊಡನೆಯೂ ನಿಪುಣರಾದ ಇತರ ಅಧಿಕಾರಿಗಳೊಡನೆಯೂ ಭರತನು ಆನೆಯಿಂದಿಳಿದು ತನಗಾಗಿ ಸಿದ್ಧಪಡಿಸಿದ್ದ ಶಿಬಿಕೆಯಲ್ಲಿ ಇಳಿದುಕೊಂಡನು ಅಲ್ಲಿ ಸಜ್ಜುಗೊಳಿಸಲ್ಪಟ್ಟಿದ್ದ ಸಿಂಹಾಸನದ ಮೇಲೆ ಭರತನು ಕುಳಿತುಕೊಂಡನು

ಈರೀತಿ ಶಿಬಿಕೆಯಲ್ಲಿ ಸುಖಾಸೀನನಾಗಿ ಕುಳಿತ ಭರತನು ತನ್ನನ್ನು ಬಿಡಲಾರದ ತನ್ನ ಹಿಂದೆ ಬಹುದೂರ ಬಂದುಬಿಟ್ಟಿದ್ದ ಸಕಲ ಪುರಜನರಿಗೂ ಒಳ್ಳೇ ಮಾತುಗಳನ್ನಾಡಿ ಹಿಂದಕ್ಕೆ ಕಳುಹಿಸಿಕೊಟ್ಟನು ಆಬಳಿಕ ಶುಭ ಲಕ್ಷಣಗಳಿಂದೊಡಗೂಡಿದ ಲಕ್ಷ್ಮಣನನ್ನು ಬಲವಾಗಿ ಆಲಂಗಿಸಿಕೊಂಡು ಶಿರಸ್ಸನ್ನಾಘ್ರಾಣಿಸಿ, ಅವನನ್ನೂ ಸಹ ಧರ್ಮಾತ್ಮನಾದ ಭರತನು ಊರಿಗೆ ಹಿಂತಿರುಗಿ ಕಳುಹಿಸಿಕೊಟ್ಟನು

೪೧-೫೨ ಆ ಬಳಿಕ ಭರತನು ಸಮರಸನ್ನಾಹಿತರಾಗಿ ಜೊತೆಯಲ್ಲಿ ಬಂದಿರುವ ಸಕಲ ಸೈನಿಕರನ್ನೂ ಜನರನ್ನೂ ಮುಖ್ಯ ಮುಖ್ಯಾಧಿಕಾರಿಗಳನ್ನು ಕುರಿತು

**ದೈಶಿಕಾಃ ಪುರತೋ ಯಾಂತು ಯೇ ಚ ವೃಕ್ಷಾವರೋಹಕಾಃ ।**
**ಆಚ್ಛಾದ್ಯ ಸಕಲಂ ಚೈವ ಶಿಬಿರಂ ಚ ತಥಾವಿಧಂ ॥ ೪೨ ॥**

**ಅವೃಕ್ಷೇಷು ತು ದೇಶೇಷು ರೋಪಯಂತು ದ್ರುಮಾನ್ ಜನಾಃ ।**
**ದ್ರುಮಾಃ ಕಂಟಕಿನಶ್ಚೈವ ಯೇ ಚ ಮಾರ್ಗಪ್ರರೋಧಕಾಃ ॥ ೪೩ ॥**

**ಛಿಂದಂತು ಗತ್ವಾ ತಾನದ್ಯ ತೀಕ್ಷ್ಣೈಃ ಶೀಘ್ರಂ ಪರಶ್ವಧೈಃ ।**
**ತೋಯಹೀನೇಷು ದೇಶೇಷು ಕೂಪಾನ್ಕುರ್ವಂತು ಮೇ ತಥಾ ॥ ೪೪ ॥**

**ವಿಷಮಾಂಶ್ಚ ತಥಾ ದೇಶಾನ್ಸಮಾನ್ಕುರ್ವಂತು ಮೇ ಪಥಿ ।**
**ತೀರಾಣಿ ಸರಿತಾಂ ಚೈವ ಕುರ್ವಂತು ಪುಲಿನಾನಿ ಚ ॥ ೪೫ ॥**

**ನ ಭವೇದ್ಯೇನ ಸಂಘಟ್ಟೋ ಜನಸ್ಯ ಪಥಿ ಯಾಸ್ಯತಃ ।**
**ಪುರಃ ಪ್ರಯಾಂತು ಸೈನ್ಯೇನ ವಿಜಯೇ ರತಿವರ್ಧನಾಃ ॥ ೪೬ ॥**

---

ಇಂತು ಆಜ್ಞಾಪನೆಮಾಡಿದನು—ನಾಳೆಯ ದಿವಸ ಬೆಳಗಾದೊಡನೆ ಸಮರದುಂದುಭಿಯು ಮೊಳಗಲಿ ಸಕಲ ಯುದ್ಧೋತ್ಸಾಹಿಗಳೂ ಮುಂದೆ ಮುಂದೆ ಹೊರಡಲಿ ಮರಗಳನ್ನು ನೆಡುವವರು ಮುಂದೆ ಹೊರಡಲಿ ಬರೀ ಬಯಲಾಗಿರುವ ಮರದ ನೆರಳಿಲ್ಲದ ಮರುಭೂಮಿಯಲ್ಲಿ ಮರಗಳನ್ನು ನೆಡಲಿ. ದಾರಿಗೆ ಅಡ್ಡಲಾಗಿ ಬೆಳೆದಿರುವ ದೊಡ್ಡ ದೊಡ್ಡ ಮರಗಳನ್ನೂ, ಮುಳ್ಳು ಪೊದೆಗಳನ್ನು, ಮುಳ್ಳುಮರಗಳನ್ನೂ ಕತ್ತರಿಸಿಹಾಕಲಿ ಅಂತಹ ಮರಗಳನ್ನು ಕಡಿದುಹಾಕಲು ಹರಿತವಾದ ಕೊಡಲಿಯನ್ನು ತೆಗೆದುಕೊಂಡು ಮರ ಕಡಿಯುವವರು ಮೊದಲು ಹೊರಡಲಿ ದಾರಿಯಲ್ಲೆಲ್ಲಿ ನೀರು ಸಿಕ್ಕುವುದಿಲ್ಲವೋ ಅಂತಹ ಸ್ಥಳಗಳಲ್ಲಿ ಭಾವಿಯನ್ನು ತೋಡಿ ಜಲಗಳನ್ನು ಸಿದ್ಧಪಡಿಸಲಿ ಹಳ್ಳ ತಿಟ್ಟಾಗಿ ಏರುಪೇರಾಗಿ ಏರುತಗ್ಗಿನ ಭೂಪ್ರದೇಶಗಳನ್ನು ಸಮಭೂಮಿಯನ್ನಾಗಿಮಾಡಲಿ ನದಿಯ ತೀರಗಳಲ್ಲೆಲ್ಲಾ ಕಡೆಗಳಲ್ಲಿಯೂ ಮರಗಳನ್ನು ನೆಡಿಸಿರಿ ದಾರಿ ನಡೆಯುವಾಗ ಜನರು ಒಬ್ಬರನ್ನೊಬ್ಬರು ತಳ್ಳಿಕೊಂಡು ನೂಕಿಕೊಂಡು ನಡೆಯದಂತೆ, ಸಾಲುಸಾಲಾಗಿ ವರಸೆವರಸೆಯಾಗಿ ಬಿಡಿಯಾಗಿ ಒಬ್ಬರ ಹಿಂದೊಬ್ಬರು ಶಿಸ್ತಿನಿಂದ ನಡೆಯಲಿ ವಿಜಯಶಾಲಿಗಳಾಗಲು ಅರ್ಹ

ನೀಲಶ್ಚ ನಕ್ರದೇವಶ್ಚ ವಸುಮಾನ್ಮನಯಸ್ತಥಾ ।
ಮಧ್ಯಪ್ರಯಾಣೇ ಗಾಂಧಾರೋ ಜಯನಾಭೋ ರಣೋತ್ಕಟಃ ॥ ೪೭ ॥

ಸುಶೀಲಃ ಕಾಮಪಾಲಶ್ಚ ಯಾಂತು ಸೈನ್ಯೇನ ದಂಶಿತಾಃ ।
ಜಘನಂ ಕಟಿಕಸ್ತ್ವಾಹಂ ಪಾಲಯಾನೋ ಯಥಾಸುಖಂ ॥ ೪೮ ॥

ಸೈನ್ಯೇನ ಸಹ ಯಾಸ್ಯಾಮಿ ವಿಜಯಾಯ ನೃಪಸ್ಯ ತು ।
ಪಶ್ಯಂತು ದೈಶಿಕಾಃ ಸ್ಥಾನಂ ಪ್ರಭೂತಯವಸೇಂಧನಂ ॥ ೪೯ ॥

ಸೋದಕಂ ಚ ಸಮಂ ಯತ್ರ ಸೇನಾವಾಸೋ ಭವೇನ್ಮಮ ।
ಏವಮಾಜ್ಞಾಪ್ಯ ಭರತೋ ವಿಜಹಾರ ಯಥಾಸುಖಂ ॥ ೫೦ ॥

ಸುಷ್ವಾಪ ಚ ನಿಶಾಂ ತತ್ರ ಘರ್ಮಕಾಲೇ ಮನೋಹರಾಂ ॥ ೫೧ ॥

---

ರಾದ ಸಮರೋತ್ಸಾಹಿಗಳಾದ, ನೀಲ, ನಕ್ರದೇವ, ವಸುಮಂತ, ಸುತಪ ಇವರುಗಳು ತಮ್ಮ ಸೈನ್ಯಗಳನ್ನು ಮುಂದೆ ಮುಂದೆ ಬಿಟ್ಟುಕೊಂಡು ಹೊರಡಲಿ. ಅವರ ಹಿಂದೆ ಮಧ್ಯಭಾಗದಲ್ಲಿ ಗಾಂಧಾರ, ಜಯನಾಭ, ರಣೋತ್ಕಟ, ಸುಶೀಲ, ಕಾಮಪಾಲ ಇವರು ತಮ್ಮ ತಮ್ಮ ಸೈನ್ಯಗಳನ್ನು ಬಿಟ್ಟುಕೊಂಡು ಹೊರಡಲಿ. ಈ ಎಲ್ಲ ಸೈನ್ಯಗಳ ಹಿಂಭಾಗದಲ್ಲಿ ಉಳಿದ ಸಕಲ ಸೈನ್ಯಗಳನ್ನೂ ಬಿಟ್ಟುಕೊಂಡು, ರಾಮಾಜ್ಞೆಯಿಂದ ವಿಜಯ ಸಂಪಾದನಾರ್ಥವಾಗಿ ನಾನು ಬರುವೆನು ಎಲ್ಲರಿಗಿಂತ ಮುಂದೆ ಹೊರಟ ನಾಗರಿಕಾದಿವರ್ಗದವರು ಅಲ್ಲಲ್ಲಿಯೇ ಮಜಲನ್ನು ಗೊತ್ತುಮಾಡಿ ಸೇನಾನಿವೇಶನಕ್ಕಾಗಿ ಬಿಡಾರಗಳನ್ನು ಮಾಡಲಿ ಆ ಜಾಗವು ತೃಣಜಲ ಸಮೃದ್ಧಿಯಾಗಿರಲಿ ಸಮನಾಗಿಯೂ ಜಲಸಮೃದ್ಧಿಯಿಂದೊಡಗೂಡಿಯೂ ಇರುವ ಒಳ್ಳೇ ಸ್ಥಳದಲ್ಲಿ ನನ್ನ ಬಿಡಾರವನ್ನು ನಿರ್ಮಿಸಿರಿ ಈರೀತಿ ಭರತನು ತನ್ನ ಅಧಿಕಾರ ವರ್ಗಕ್ಕೆ ಆಜ್ಞೆಮಾಡಿ ತಾನು ಸುಖವಾಗಿ ಆ ಬೇಸಗೆಯ ರಾತ್ರಿಯಲ್ಲಿ ಮಲಗಿ ಚೆನ್ನಾಗಿ ನಿದ್ದೆಮಾಡಿದನು ಈ ರೀತಿ ಆ ರಘುಕುಲತಿಲಕನಾದ ಭರತನು ಮಲಗಿಕೊಂಡೊಡನೆಯೇ ಆ ಪುಣ್ಯಕರ

ಸುಪ್ತಸ್ಯ ಸಾ ತತ್ರ ರಘೂದ್ವಹಸ್ಯ
ಪ್ರಶ್ಯಾ ಯುಯೌ ರಾತ್ರಿರದೀನಸತ್ತ್ವ ।
ಸಂಪೂರ್ಣಚಂದ್ರಾಭರಣಾ ಪ್ರತೀತಾ
ಜ್ಯೇಷ್ಠಸ್ಯ ಮಾಸಸ್ಯ ರಣೋತ್ಸುಕಸ್ಯ ॥ ೫೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭರತನಿರ್ಯಾಣವರ್ಣನಂನಾಮ ಚತುರಧಿಕ
ದ್ವಿಶತತಮೋಽಧ್ಯಾಯಃ.

---

ವಾದ ಜ್ಯೇಷ್ಠಮಾಸದ ಶುಕ್ಲಪಕ್ಷದ ಬೆಳದಿಂಗಳಿಂದ ಕೂಡಿದ ಆ ರಾತ್ರಿಯು ಬಹು
ಸುಖವಾಗಿ ಕಳೆದುಹೋಯಿತು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಭರತನ ಸಮರಪ್ರಯಾಣ ವರ್ಣನೆಯೆಂಬ
ಹೆಸರಿನ ಇನ್ನೂರನಾಲ್ಕನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಾಧಿಕದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಪ್ರಭಾತಾಯಾಂ ತು ಶರ್ವರ್ಯಾಂ ದುಂದುಭಿಃ ಸಮಹನ್ಯತ ।
ಪ್ರಾಯಾಣಿಕೋ ಮಹಾರಾಜಾ ಭರತಸ್ಯ ಮಹಾತ್ಮನಃ ॥ ೧ ॥

ತಸ್ಯ ಶಬ್ದೇನ ಮಹತಾ ವಿಬುದ್ಧಃ ಕಟಕೇ ಜನಃ ।
ಅವಶ್ಯಕರಣೀಯಾನಿ ಕೃತ್ವಾ ರಾಜಂಸ್ತ್ವರಾನ್ವಿತಾಃ ॥ ೨ ॥

ತ್ವರಿತಾ ಗಮನಾರ್ಥಾಯ ಸಮಾಹೂಯೇತರೇತರಂ ।
ಪಟವೇಶ್ಮಾನಿ ರಮ್ಯಾಣಿ ಸಂಹಂತುಮುಪಚಕ್ರಮುಃ ॥ ೩ ॥

---

### ಇನ್ನೂರೈದನೆಯ ಅಧ್ಯಾಯವು

೧-೩ ಮಾರ್ಕಂಡೇಯನು ಹೇಳಿದನು --ರಾತ್ರಿ ಕಳೆದು ಬೆಳಗಾಯಿತು ನಗಾರಿಯು ಧಣಾರ್ ಧಣಾರ್ ಎಂಬ ಧ್ವನಿಯು ವಿಜಯಪ್ರಯಾಣಸೂಚಕನಾಗಿ ಮೊಳಗತೊಡಗಿತು ಭರತನ ಪಾಳ್ಯದಲ್ಲಿ ಬಿಡಾರವನ್ನು ಬಿಟ್ಟಿದ್ದ ಜನರೆಲ್ಲರೂ ಈ ಮಹಾಧ್ವನಿಯನ್ನು ಕೇಳಿ ಹಾಸಿಗೆಯಿಂದ ಮೇಲಕ್ಕೆದ್ದು ಪ್ರಯಾಣ ಸನ್ನಾಹಮಾಡಿದರು ಬೇಗ ಬೇಗ ಸಾಮಾನುಗಳನ್ನು ಕಟ್ಟಿ ಅಣಿಮಾಡತೊಡಗಿದರು. ಪ್ರಯಾಣಕ್ಕೆ ವಿಳಂಬವಾದೀತೆಂದು ಒಬ್ಬರನ್ನೊಬ್ಬರು ಎಬ್ಬಿಸುತ್ತಾ ಹೊರಡಲು ತ್ವರಪಡಿಸುತ್ತಿದ್ದರು. ಚಿತ್ರವಿಚಿತ್ರವಾಗಿ ಕಟ್ಟಿದ್ದ ಬಿಡಾರಗಳ ಬಟ್ಟೆಗಳನ್ನೆಲ್ಲಾ ಬಿಚ್ಚಿ ಬಿಚ್ಚಿ ಹಾಕುತ್ತಲೂ, ಅದನ್ನು ಕೂಡಲೆ ಕೆಲವರು ಭದ್ರವಾಗಿ ಕಟ್ಟಿ ಕಟ್ಟಿ ಹಾಕುತ್ತಲೂ ಇದ್ದರು

ಮಹಾಂತಿ ಸುಮನೋಜ್ಞಾನಿ ವರ್ತಿತೋರ್ಣಕೃತಾನಿ ಚ ।
ಚಕ್ರುಸ್ತಾನಿ ಚ ರಾಜೇಂದ್ರ ಸುಖವಾಹ್ಯಾನ್ಯಯತ್ನತಃ ॥ ೪ ॥

ತತಸ್ತ್ವಾರೋಪಯಾಂಚಕ್ರುಃ ಕರಭೇಷು ಖರೇಷು ಚ ।
ಗೋರಥೇಷು ತು ಮುಖ್ಯೇಷು ತಥಾ ದಂತಿಷು ಸತ್ವರಾಃ ॥ ೫ ॥

ಭಾಂಡಮುಚ್ಚಾವಚಂ ಚೈವ ಶಯನಾನಿ ಮೃದೂನಿ ಚ ।
ಆಸನಾನಿ ಚ ಮುಖ್ಯಾನಿ ಭಾಂಡಂ ಯಚ್ಚ ಮಹಾನಸೇ ॥ ೬ ॥

ಪೇಯಂ ಚ ಯವಸಂ ಚೈವ ಶಸ್ತ್ರಾಣಿ ವಿವಿಧಾನಿ ಚ ।
ಕವಚಾನಿ ತುರಂಗಾಣಾಂ ಶಿಲ್ಪಭಾಂಡಾನಿ ಯಾನಿ ಚ ॥ ೭ ॥

ಧನಂ ಚ ವಿವಿಧಂ ರಾಜನ್ಸರ್ವೋಪಕರಣಾನಿ ಚ ।
ಆರೋಪ್ಯಮಾಣೇ ಭಾಂಡೇ ತು ಕರಭಾಣಾಂ ವಿಕೃಷ್ಯತಾಂ ॥ ೮ ॥

ಶುಶ್ರುವೇ ತುಮುಲಃ ಶಬ್ದಃ ಖರಾಣಾಂ ಚ ಖರಸ್ವನಃ ।
ಗಜಾನಾಂ ಯುಜ್ಯಮಾನಾನಾಂ ತುರಂಗಾಣಾಂ ರಥೈಃ ಸಹ ॥ ೯ ॥

---

೪-೫ ಮನೋಹರವಾಗಿ ಅಲಂಕಾರವಾಗಿ ಕಟ್ಟಿದ್ದ ಸುಲಭವಾದ ಕಂಬಳಿಯ ಹೇರೆಗಳನ್ನು ಬಹು ಸುಲಭವಾಗಿ ಬಿಚ್ಚಿ ಯಾನಗಳ ಮೇಲೆ ಏರಿಸಿದರು ಆನೆಗಳ ಮೇಲೆ, ಕತ್ತೆಗಳ ಮೇಲೆ, ಎತ್ತಿನ ಬಂಡಿಗಳ ಮೇಲೆ ಭಾರಭಾರವಾದ ಸಾಮಾನುಗಳನ್ನೆಲ್ಲಾ ಹೇರಿದರು

೬-೮ ದೊಡ್ಡ ದೊಡ್ಡ ಪಾತ್ರೆಗಳು, ಹಾಸಿಗೆಗಳು, ಮಣೆಗಳು, ಬಿಂದಿಗೆ ಕೊಳವಪ್ಪಲೆಗಳು, ಉಳಿದ ಇತರ ಅಡಿಗೆ ಪಾತ್ರೆಗಳೂ, ಪಾನೀಯ ಪದಾರ್ಥಗಳೂ, ಹುಲ್ಲಿನ ಕಂತೆಗಳೂ, ವಿವಿಧ ಶಸ್ತ್ರಗಳೂ, ಕುದುರೆ ಜೀನುಗಳೂ, ಅಲಂಕಾರವಾದ ಪಾತ್ರೆಗಳೂ, ಹಣದ ಚೀಲಗಳೂ, ಹಣದ ಪಟ್ಟಿಗೆಗಳೂ, ಇನ್ನೂ ಅನೇಕ ಉಪಯುಕ್ತ ವಸ್ತುಗಳೆಲ್ಲವೂ ಗಜಾದಿ ವಾಹನಗಳ ಮೇಲೂ, ಬಂಡಿಗಳ ಮೇಲೂ ಭದ್ರವಾಗಿ ಪೇರಿಸಲ್ಪಟ್ಟುವು

೯-೧೧ ಸಾಮಾನು ತುಂಬಿದ ಗಾಡಿಗಳೂ, ಸಾಮಾನನ್ನು ಹೊತ್ತ ಪ್ರಾಣಿಗಳೂ ಮುಂದಕ್ಕೆ ಹೊರಟೊಡನೆ ಬಹು ಗದ್ದಲವಾಯಿತು. ಎಲ್ಲಾ ಪ್ರಾಣಿಗಳೂ ಧ್ವನಿಮಾಡತೊಡಗಿದವು. ಕತ್ತೆಗಳು ಕಿರಿಚಿದುವು ಆನೇಗಾಡಿ, ಕುದುರೆಗಾಡಿ

ವಾದ್ಯಾನಾಂ ಪಣ್ಯಮಾನಾನಾಂ ಶುಶ್ರುವೇ ತುಮುಲಂ ಸ್ವನಂ ।
ನಾದೇನ ಗಜಘಂಟಾನಾಂ ಬೃಂಹಿತೇನ ಚ ಪಾರ್ಥಿವ ॥ ೧೦ ॥

ಹ್ರೇಷಿತೇನ ತುರಂಗಾಣಾಂ ಬಭೂವ ತುಮುಲಃ ಸ್ವನಃ ।
ಪ್ರಾಯಾಣಿಕಮುಪಾದಾಯ ತಾಂಡಯನ್ನೇವ ದುಂದುಭಿಂ ॥ ೧೧ ॥

ಅಗ್ರೇ ಪ್ರಯಾಣಮಾನ್ಯೇನ ಯಯೌ ದುಂದುಭಿಃ ಸಹ ।
ಪಣ್ಯಾನಿ ಚ ಸಮಾದಾಯ ವಣಿಜಸ್ತ್ವರಿತಾ ಯಯುಃ ॥ ೧೨ ॥

ಗೃಹೀತುಕಾಮಾಶ್ಚಾನ್ಯಾನಿ ಸೋದಕಾನಿ ಸಮಾನಿ ಚ ।
ಸ್ಥಾನಾನಿ ವರಮುಖ್ಯಾನಾಂ ಯಯು ಶ್ಚಾಗ್ರೇಸರಾ ನರಾಃ ॥ ೧೩ ॥

ಮಹಾನಸಿಕಮುಖ್ಯಾಸ್ತು ತ್ವರಿತಾಶ್ಚ ತಥಾ ಯಯುಃ ।
ಸುಖಯಾನಾಸು ರಮ್ಯಾಸು ತಥೈವಾಶ್ವತರೀಷು ಚ ॥ ೧೪ ॥

---

ಗಳು, ಎತ್ತಿನಗಾಡಿಗಳ ಚಕ್ರಗಳು ಕಿರಕಿರ ಸಪ್ಪಳಮಾಡಿದುವು ವಾದ್ಯಗಳು ಮೊಳಗ ತೊಡಗಿದುವು ಆನೆಗಳ ಕತ್ತಿಗೆ ಕಟ್ಟಿದ್ದ ದೊಡ್ಡ ಘಂಟೆಗಳ ಸದ್ದೂ, ಗಜಗಳ ಬೃಂಹಿತವೂ (ಕೂಗು) ಕುದುರೆಗಳ ಹೇಷಾ (ಕೂಗುವ) ಧ್ವನಿಯೂ ಎಲ್ಲಕ್ಕೂ ಮುಂದೆ ಹೊರಟ ಮಾವಟಿಗರು ಆನೆಗಳ ಮೇಲೆ ಕುಳಿತು ನಗಾರಿಯನ್ನು ಬಡಿಯುವ ಭಾರೀ ಧ್ವನಿಯೂ ದಿಕ್ಕುಗಳ ತುದಿಗಳನ್ನು ಮುಟ್ಟುವಂತೆ ಮೊಳಗುತ್ತಿದ್ದುವು

೧೨-೧೪ ಸೈನ್ಯದಲ್ಲಿ ವ್ಯಾಪಾರಮಾಡಿ ಲಾಭ ಸಂಪಾದಿಸಲಿಕ್ಕಾಗಿ ವ್ಯಾಪಾರ ಪದಾರ್ಥಗಳೊಡನೆ ಹೊರಟಿದ್ದ ವರ್ತಕರು ಬೇಗ ಬೇಗ ಎದ್ದು ಅವಸರ ಅವಸರವಾಗಿ ಕ್ರಯ್ಯ ಪದಾರ್ಥಗಳನ್ನು ಕಟ್ಟಿ ಬೇಗ ಬೇಗ ಪ್ರಯಾಣಮಾಡಿದರು ಮುಂದೆ ಮುಂದೆ ಹೊರಟ ಪ್ರಯಾಣಿಕರನ್ನೂ, ಸೈನ್ಯವನ್ನೂ ಹಿಂಬಾಲಿಸಿ ಅವರ ಜೊತೆಗೆ ತಾವೂ ಬೇಗ ಸೇರಿಕೊಂಡು ಜೊತೆಯಲ್ಲಿ ಹೊರಡಬೇಕೆಂಬ ಆತುರದಿಂದ ಹಿಂದಾಗಿ ಹೊರಟ ಜನರು ಬೇಗ ಬೇಗ ಹೆಜ್ಜೆ ಹಾಕುತ್ತಿದ್ದರು ಅಡಿಗೆ ಮನೆಯವರ ಅವಸ್ಥೆ ಹೇಳುವಹಾಗಿಲ್ಲ ತಡವಾಗಿ ತಾವು ಎದ್ದದ್ದಕ್ಕೆ ಪಶ್ಚಾತ್ತಾಪ ಪಡುತ್ತಾ ತಮ್ಮ ತಮ್ಮ ಒಂಡಿಗಳನ್ನೂ ವಾಹನಗಳನ್ನೂ ಕಟ್ಟಿಸಿ ವೇಗವಾಗಿ ಬಿಟ್ಟುಕೊಂಡು ಎಲ್ಲರಿಗಿಂತ ಮುಂಚೆ ತಲುಪುವುದಕ್ಕಾಗಿ ಆತುರಪಟ್ಟು ಪ್ರಯಾಣ ಬೆಳಸಿದರು

ಆರೋಪ್ಯ ಯೋಷಿತೋ ಜಗ್ಮುಃ ಪ್ರತ್ಯೂಷೇ ಮುದಿತಾ ಜನಾಃ ।
ಆರೂಢಾಶ್ಚಾಪರಾ ನಾರ್ಯಃ ಸವಿತಾನಾಃ ಕರೇಣವಃ ॥ ೧೫ ॥

ಕಂಚುಕೋಷ್ಣೀಷಿಭಿರ್ಗುಪ್ತಾ ಗುಪ್ತಾ ವರ್ಷವರೈಸ್ತಥಾ ।
ಯಯುಃ ಸಸೈನ್ಯಾ ರಾಜೇಂದ್ರ ಗೀತವಾದ್ಯಪುರಃಸರಾಃ ॥ ೧೬ ॥

ದೀನಾಂಧಕೃಪಣಾನಾಥಾಂಸ್ತರ್ಪಯಂತ್ಯೋ ಧನೇನ ತಾಃ ।
ನರೇಂದ್ರಯೋಷಿತೋ ರಾಜ್ಞಾಂ ದಿವ್ಯಾಲಂಕಾರಭೂಷಿತಾಃ । ೧೭ ॥

ತಥಾಽನ್ಯೇ ಬದ್ಧನಿಸ್ತ್ರಿಂಶಾಃ ಪುರುಷಾಃ ಕಲಾಪಿನಃ ।
ಆದೀಪ್ಯ ತೃಣವೇಶ್ಮಾನಿ ಜಗ್ಮುಸ್ತ್ವರಿತಮಾನಸಾಃ ॥ ೧೮ ॥

೧೫-೧೬ ಸೈನ್ಯದ ಜೊತೆಯಲ್ಲಿ ಹೊರಟ ಹೆಂಗಸರು ಆನೆಗಳ ಮೇಲೆ ಹತ್ತಲು ಶಕ್ತಿಯಿಲ್ಲದೆ ಬಹು ಪ್ರಯಾಸದಿಂದ ಆನೆ ಕುದುರೆಗಳ ರಥಗಳ ಮೇಲೆ ಹತ್ತಿಕೊಂಡು ಹೊರಟರು ಅವರುಗಳು ಆಗಿಂದಾಗ್ಯೆ ಸೆರಗನ್ನು ಸರಿಯಾಗಿ ಎಳೆದು ಹೊದ್ದುಕೊಳ್ಳುತ್ತಿದ್ದರು. ಅವರ ಸಂರಕ್ಷಣೆಗೋಸ್ಕರ ಖೋಜಾ (ನಪುಂಸಕ) ಗಳು ಅವರ ಸುತ್ತಲೂ ಕಾವಲಿದ್ದರು ಆ ಲಲನೆಯರು ಆನೆಗಳ ಮೇಲೆ ಕುಳಿತು ಹೋಗುವಾಗ ರಮ್ಯವಾಗಿ ಹಾಡುತ್ತಿದ್ದರು ಕೆಲವರು ನಾಟ್ಯವಾಡುತ್ತಿದ್ದರು

೧೭ ಕುರುಡರೂ, ಕುಂಟರೂ, ಹೆಳವರೂ, ತಿರುಕರೂ, ಅಂಗಹೀನರೂ ಕಾಸನ್ನು ಕೇಳುತ್ತಾ ಜೊತೆಯಲ್ಲಿ ಬರುತ್ತಿದ್ದುದನ್ನು ನೋಡಲಾರದೆ ಅವರಿಗೆ ರಾಜಸ್ತ್ರೀಯರು ತಮ್ಮ ತಮ್ಮ ಹಣದ ಚೀಲಗಳನ್ನು ಬಿಚ್ಚಿ ಅದರಿಂದ ದುಡ್ಡುಗಳನ್ನು ಈಚೆಗೆ ತೆಗೆದು ಆ ಕಂಗಾಲರಿಗೆ ಕೊಡುತ್ತಲಿದ್ದರು

೧೮ ಕಲವು ಜನ ಸಿಪಾಯಿಗಳು (ಬಿಚ್ಚುಗತ್ತಿಯವರು) ತಮ್ಮ ಕತ್ತಿಗಳನ್ನು ಒರೆಯಲ್ಲಿ ಸೇರಿಸಿ ಸೈನಿಕರ ಉಡುಪನ್ನು ಧರಿಸಿ ಹೊರಡುವ ಸಮಯದಲ್ಲಿ ತಾವು ರಾತ್ರಿ ಮಲಗಿದ್ದ ಹುಲ್ಲು ಗುಡಿಸಲುಗಳಿಗೆ ಬೆಂಕಿಯನ್ನು ಹಾಕಿ ಉರಿಸಿ ಬೇಗ ಬೇಗ ಹೊರಟರು

ಭರತೋಽಪಿ ಸಮಾರುಹ್ಯ ಶಿಬಿಕಾಂ ರತ್ನಭೂಷಿತಾಂ ।
ವಿನಿರ್ಯಯೌ ಮಹಾತೇಜಾಸ್ತೂರ್ಯಘೋಷಪುರಃಸರಃ ॥ ೧೯ ॥

ಶೂನ್ಯಂ ಚ ಶಿಬಿರಸ್ಥಾನಂ ಗೃಧ್ರಮಂಡಲಸಂಕುಲಂ ।
ಬಹುಕ್ರವ್ಯಾದಸಂಕೀರ್ಣಂ ಕ್ಷಣೇನ ಸಮಪದ್ಯತ ॥ ೨೦ ॥

ಗಜೋಷ್ಟ್ರಗರ್ದಭಾಶ್ವಾನಾಂ ಶರೀರಾವಯವೈರ್ಯುತಂ ।
ಭಗ್ನಭಾಂಡಸಮಾಕೀರ್ಣಂ ಶರೀರಾವಯವೈರ್ವೃತಂ ॥ ೨೧ ॥

ಬಹುಕ್ರವ್ಯಾದಸಂಕೀರ್ಣಂ ಕರೀಷೋತ್ಕರಸಂಯುತಂ ।
ಖಾತೈರ್ಮಹಾನಸಸ್ಥಾನೈರ್ದಗ್ಧಮೃತ್ತಿಕಯಾ ಯುತೈಃ ॥ ೨೨ ॥

ಸಮುಂಡಕರ್ದಮೋಪೇತೈರ್ಮಕ್ಷಿಕಾಸಹಿತೈರ್ಯುತಂ ।
ಸಂತ್ಯಜ್ಯ ನಿರ್ಯಯುಃ ಸರ್ವೇ ಭರತಸ್ಯ ತು ಸೈನಿಕಾಃ ॥ ೨೩ ॥

---

೧೯ ಭರತನು ರತ್ನಖಚಿತವಾದ ಪಲ್ಲಕ್ಕಿಯನ್ನು ಹತ್ತಿ ಪ್ರಯಾಣಮಾಡಿದನು. ಆಗ ಸಕಲ ಮಂಗಲ ವಾದ್ಯಗಳೂ ಭೋರ್ಗರೆದುವು. ಗೀತವಾದ್ಯಗಳ ಧ್ವನಿಗಳಾದುವು.

೨೦. ಈರೀತಿ ಭರತನ ಸೈನ್ಯವು ಆ ಶಿಬಿರವನ್ನು ಬಿಟ್ಟು ಹೊರಟುಹೋದನೆಯೇ ಆ ಬಯಲಲ್ಲೆಲ್ಲಾ ಜನವಿಲ್ಲದಂತಾಗಲು, ಆ ಸ್ಥಳಕ್ಕೆ ಹದ್ದುಗಳೂ ಹಸಿದ ರಾಕ್ಷಸರೂ, ಒಂದು ಕ್ಷಣಮಾತ್ರಕ್ಕಾಗಿ ಮುತ್ತಿಕೊಂಡು ಬಿಟ್ಟರು

೨೧-೨೨ ಈ ಬಿಡಾರವನ್ನು ಬಿಟ್ಟಿದ್ದ ಜಾಗದಲ್ಲಿ ಈಗ ನೋಡಿದರೆ ಎಲ್ಲೆಲ್ಲಿಯೂ ಕತ್ತೆ ಕುದುರೆ ಆನೆ ಒಂಟೆಗಳ ಲದ್ದಿಯೂ, ಒಡೆದ ಗಡಿಗೆ ಮಡಿಕೆಗಳ ಚೂರಿನ ರಾಶಿಯೂ ಕಾಣುತ್ತಿದ್ದುವು ಇಲ್ಲಿ ಏನಾದರೂ ತಿನ್ನುವುದಕ್ಕೆ ಸಿಕ್ಕೀತೋ ಏನೋ ಎಂದು ಹೊಟ್ಟೆಗಿಲ್ಲದ ಹೇಡಿ ರಾಕ್ಷಸರು ಅಲ್ಲಿ ಮುತ್ತಿಕೊಂಡಿದ್ದರು ಎತ್ತೆತ್ತಲೂ ಬೆರಣೀಬೂದಿಗಳೂ, ಇದ್ದಲು ರಾಶಿಯೂ, ಅಡಿಗೆಗಾಗಿ ಅಗೆದಿದ್ದ ಸುಟ್ಟ ಒಲೆಗಳ ಗುಂಪೂ ಕಣ್ಣಿಗೆ ಕಾಣಿಸುತ್ತಿದ್ದವು

೨೩ ಅಡಿಗೆಯನ್ನು ಮಾಡಿದ ಸ್ಥಳಗಳಲ್ಲಿ ನೊಸರನ್ನು ಸುರಿದುಬಿಟ್ಟಿದ್ದರಿಂದ ಅದರ ಗರಣೆಗಳು ಧೂಳಿನೊಡನೆ ಬೆರೆತು ಕೆಸರಾಗಿ ವಾಸನೆ ಹುಟ್ಟಿಬಿಟ್ಟಿದ್ದಿತು ಆ ಮಜ್ಜಿಗೆ ಕೆಸರಿಗೆ ಲಕ್ಷೋಪಲಕ್ಷ ನೊಣಗಳು ಮುತ್ತಿಕೊಂಡು ಅಸಹ್ಯವಾಗಿ ತೋರುತ್ತಿತ್ತು ಈ ಸ್ಥಳಗಳನ್ನೆಲ್ಲಾ ಬಿಟ್ಟು ಭರತನ ಸಕಲ ಪರಿವಾರವೂ ಮುಂದಿನ

**ಪ್ರಯಾಣೇ ತಸ್ಯ ಸೈನ್ಯಸ್ಯ ಬಲೀವರ್ದಾಂಚ್ಛ್ರಮಾನ್ವಿತಾನ್ ।**
**ನಾಗಾನುತ್ಥಾಪಯಾಮಾಸುರುಪವಿಷ್ಟಾನ್ಪ್ರಯತ್ನತಃ ॥ ೨೪ ॥**

**ಕೇಚಿದುಷ್ಟ್ರಪರಿತ್ರಸ್ತಾನ್ಗರ್ದಭೇನ ನಿಪಾತಿತಾನ್ ।**
**ಭಾಂಡಾನಾರೋಪಯಾಂ ಚಕ್ರುಃ ಭೂಯ ಏವ ನರೋತ್ತಮಾಃ॥ ೨೫ ॥**

**ಸದ್ಯೋತ್ತಾರೇಷು ಮಹಿಷಾನ್ಕೇಚಿತ್ಸೂರ್ಯಾಂಶುತಾಪಿತಾನ್ ।**
**ನಿಷಣ್ಣಾನ್ಸಹ ಭಾರೇಣ ತಾಡಯಾಂಚಕ್ರಿರೇ ಜನಾಃ ॥ ೨೬ ॥**

**ಕೇಚಿದಶ್ವತರಾಂಸ್ತ್ರಸ್ತಾನ್ ನಾಗಬೃಂಹಿತನಿಸ್ವನೈಃ ।**
**ಆರೂಢಯೋಷಿತೋ ಯತ್ನಾಜ್ಜಗೃಹುರ್ನೃಪ ರಶ್ಮಿಷು ॥ ೨೭ ॥**

ಮುಜಲು ಮುಟ್ಟಲು ಪ್ರಯಾಣ ಜಳಸಿದುವು.

೨೪ ಈ ಪ್ರಯಾಣಕಾಲದಲ್ಲಿ ಎತ್ತುಗಳು ಆಯಾಸಪಟ್ಟು ಮಲಗಿ ಮೆಲುಕು ಹಾಕುತ್ತಾ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದುವು ಇದರಂತೆ ಆನೆಗಳೂ ಸಹ ಮಲಗಿ ವಿಶ್ರಾಂತಿಯನ್ನು ಹೊಂದುತ್ತಿದ್ದುವು ಅವುಗಳನ್ನು ಬೆನ್ನಿನ ಮೇಲೆ ತಟ್ಟಿಹೊಡೆದು ಬಲಾತ್ಕಾರದಿಂದ ಜನರು ಎಬ್ಬಿಸಿ ನಿಲ್ಲಿಸುತ್ತಿದ್ದರು

೨೫ ಒಂಟೆಗಳಿಗೆ ಹೆದರಿ ಹೊರೆಯನ್ನು ಹೊತ್ತಿದ್ದ ಕತ್ತೆಗಳು ಬೆಚ್ಚಿ ತಮ್ಮ ಬೆನ್ನು ಮೇಲೆ ಹೇರಿದ್ದ ಸಾಮಾನುಗಳನ್ನು ಕೆಡವಿಕೊಂಡವು ಅದರ ರಕ್ಷಣೆಗಾಗಿ ಬರುತ್ತಿದ್ದ ಜನರು ಪುನಃ ಆ ಸಾಮಾನುಗಳನ್ನು ಕತ್ತೆಗಳ ಮೇಲೆ ಸರಿಯಾಗಿ ಹೇರಿ ಅದನ್ನು ಹೊಡೆದುಕೊಂಡು ಹಿಂದೆ ಹೊರಟರು

೨೬ ಮಧ್ಯಾಹ್ನ ಬಿಸಿಲೇರುತ್ತ ಬರಲು ನದಿಗಳನ್ನು ದಾಟುವಾಗಲೂ ಎತ್ತರ ಸ್ಥಳಗಳನ್ನು ಹತ್ತುವಾಗಲೂ ಹೊರೆ ಹೊರಲಾರದೆ ಕೋಣಗಳು ಅಲ್ಲಲ್ಲಿಯೇ ಬಿದ್ದು ಕೊಳ್ಳುತ್ತಿದ್ದವು ಪಾಪ! ಆ ಪ್ರಾಣಿಗಳನ್ನು ಜನರು ನಿರ್ದಯರಾಗಿ ಬಲವಾಗಿ ಹೊಡೆದು ಎಬ್ಬಿಸಿ ಮುಂದಕ್ಕೆ ಹೊರಡಿಸುತ್ತಿದ್ದರು

೨೭ ಆನೆಗಳ ಕೂಗಿಗೆ ಬೆಚ್ಚಿದ ಹೇಸರ ಕತ್ತೆಗಳ ಮೇಲೆ ಕುಳಿತಿದ್ದ ಹುಡುಗಿಯರು ತಾವೆಲ್ಲಿ ಬಿದ್ದೇವೋ ಎಂಬ ಭಯದಿಂದ ಆ ಕತ್ತೆಗಳ ಬೆನ್ನನ್ನು ಬಲವಾಗಿ ತಬ್ಬಿಕೊಳ್ಳುತ್ತಿದ್ದರು

ಕೇಚಿದಶ್ವೈರ್ಗಜತ್ರಸ್ತೈರಾಕ್ಷಿಪ್ತಾ ಭುವಿ ಮಾನವಾಃ ।
ಜಾನುನಿಮಶ್ರಣಾರ್ಥಾಯ ವಾಜಿಗ್ರೀವಕೃತಾಂಘ್ರಯಃ ॥ ೨೮ ॥

ತುರಂಗಾಂಶ್ಚ ತದೋದ್ಭ್ರಾಂತ್ ತಾಂಸ್ತ್ರಸ್ತಚರ್ಮಾಂಶ್ಚ ಸಾದಿನಃ।
ಕೇಚಿದಾಕ್ರಮ್ಯ ವೇಗೇನ ಜಗೃಹುಸ್ತತ್ರ ಯಾದವ ॥ ೨೯ ॥

ವಿಶಶ್ರಮುಸ್ತಥಾ ಕೇಚಿದ್ವೃಕ್ಷಚ್ಛಾಯಾಸು ಮಾನವಾಃ ।
ಕೇಚಿಚ್ಛೋದಕತೀರೇಷು ಚಕ್ರಿರೇ ಭೋಜನಕ್ರಿಯಾಂ ॥ ೩೦ ॥

ಕೇಚಿತ್ಸಂತ್ರಸ್ತತುರಗಸನ್ನಿಕೃಷ್ಟಸಮುತ್ಥಿತೈಃ ।
ದ್ರುತಾನ್ಕಾಪಿಂಜಲ್ಯೈರ್ಯತ್ನಾಜ್ಜಗೃಹುಸ್ತಾಂಸ್ತುರಂಗಮಾನ್ ॥ ೩೧ ॥

೨೮ ಆನೆಗಳನ್ನು ನೋಡಿ ಬೆದರಿ ಕುದುರೆಗಳು ಓಡುತ್ತಿರುವಲ್ಲಿ ಅದರ ಮೇಲೆ ಕುಳಿತಿದ್ದ ಸವಾರರು ಕೆಳಗೆ ಉರುಳಿಕೊಳ್ಳುತ್ತಿದ್ದರು ಆ ಏಟಿಗೆ ಬಿದ್ದೊಡನೆಯೇ ಅವರ ಮೊಣಕಾಲುಗಳೂ, ಮಂಡಿಗಳೂ ನೋವಾಗುತ್ತಿದ್ದವು ಆ ನೋವನ್ನು ಪರಿಹರಿಸಿಕೊಳ್ಳಲಿಕ್ಕಾಗಿ ಆ ಸವಾರರು ತಮ್ಮ ಜೊತೆಯಲ್ಲಿ ತಂದಿದ್ದ ವಾಯುತೈಲಗಳನ್ನು ನೋವಾದ ಜಾಗಕ್ಕೆ ಹಚ್ಚಿ ತಿಕ್ಕಿಕೊಳ್ಳುತ್ತಿದ್ದರು

೨೯ ಮತ್ತೆ ಕೆಲವು ಕುದುರೆಗಳು ಆನೆಯ ಕೂಗಿಗೆ ಹೆದರಿ ಹತೋಟಿ ತಪ್ಪಿ ಓಡುತ್ತಿದ್ದುದನ್ನು ನೋಡಿ ಆ ಅಶ್ವಾರೂಢರು ಕಡಿವಾಣಗಳನ್ನು ಹಿಂದಕ್ಕೆಳೆದು ಆ ಕುಣಿಕೆಗಳನ್ನು ತಡೆದು ತಡೆದು ನಿಲ್ಲಿಸುತ್ತಿದ್ದರು

೩೦. ನಡಿಗೆಯಿಂದ ಹೋಗುತ್ತಿದ್ದ ಜನರು ಬಿಸಿಲ ವೇಗವನ್ನು ತಾಳಲಾರದ ಮರದ ನೆರಳುಗಳಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು ಮತ್ತೆ ಕೆಲವರು ನೀರಿದ್ದ ಜಾಗವನ್ನು ನೋಡಿ ಆ ನೀರಿನ ಬಳಿ ಕುಳಿತು ತಾವು ಕಟ್ಟಿ ತಂದಿದ್ದ ಬುತ್ತಿಯನ್ನು ಬಿಚ್ಚಿ ಅನ್ನವನ್ನುಣ್ಣುತ್ತಿದ್ದರು

೩೧ ಆನೆಗಳನ್ನು ಕಂಡು ಹೆದರಿ ಮೇಲಕ್ಕೆ ಹಾರಿ ಬೀಳುತ್ತಿರುವ ಕುದುರೆಗಳನ್ನು ಅದರ ಮೇಲಿನ ಚತುರರಾದ ಸವಾರರು, ಆ ವೇಗದ ಕುಣಿತವನ್ನು ತಪ್ಪಿಸಿ ಹಿಂದಕ್ಕೆ ಕಡಿವಾಣವನ್ನೆಳೆದು ಜಗ್ಗಿಸಿ ನಿಲ್ಲಿಸುತ್ತಿದ್ದರು.

ಕೇಚಿತ್ಕಟಕಸಂತ್ರಸ್ತಾನ್ಮೃಗಯೂಥಾನ್ಪ್ರಧಾವತಃ ।
ವೇಗೇನಾಕ್ರಮ್ಯ ವಿಶಿಖೈರ್ಜಘ್ನುರ್ಯದುಕುಲೋದ್ವಹ ॥ ೩೨ ॥

ಕೇಚಿಚ್ಚ ಯವಸಂ ಚಕ್ರುಃ ಕೇಚಿಚ್ಚಕ್ರುರಥೇಂಧನಂ ।
ತಥಾನ್ಯೈರ್ದ್ವಿಗುಣೀಭೂತಂ ತಥಾ ದುಂದುಭಿನಿಸ್ಸ್ವನಂ ॥ ೩೩ ॥

ಪ್ರಾಯಾಣಿಕಂ ಜಘುಃ ಶೀಘ್ರಂ ಶ್ರಮಂ ಯದುಕುಲೋದ್ವಹ ।
ಕೇಚಿದಾಪಣವೀಥ್ಯಗ್ರಮುಹಾವಂಶಸಮುಚ್ಛ್ರಿತಂ ॥ ೩೪ ॥

ಸಪತಾಕಂ ನರಾ ದೃಷ್ಟ್ವಾ ಪ್ರಾಪ್ತಾಃ ಸ್ಮ ಇತಿ ಮೇನಿರೇ ।
ಚಕ್ರುಃ ಕೇಚಿಚ್ಚ ಚ್ಛಂದಾಸಿ ಸಹಾಯಾನಾಂ ಪುನಃಪುನಃ ॥ ೩೫ ॥

---

೩೨ ಈರೀತಿ ಮಹತ್ತರವಾದ ಸೈನ್ಯವು ಬರುತ್ತಿರುವುದನ್ನು ನೋಡಿ ಕಾಡಿನಲ್ಲಿದ್ದ ನಾನಾವಿಧ ವನಮೃಗಗಳು, ದಿಕ್ಕುತೋರದೆ ಹದರಿ ದಿಕ್ಕಾಪಾಲಾಗಿ ಓಡುತ್ತಿರುವುದನ್ನು ನೋಡಿ ಮೃಗಯಾ (ಬೇಟೆ) ಕೌತುಕಿಗಳಾದ ಕೆಲವರು ಗುರಿಕಟ್ಟಿ ಬಾಣಗಳನ್ನು ಪ್ರಯೋಗಿಸಿ ಆ ಕಾಡು ಮೃಗಗಳನ್ನು ಕೊಲ್ಲುತ್ತಿದ್ದರು

೩೩. ಹುಲ್ಲಿನ ಭಾರವಾದ ಹೊರೆಯನ್ನು ಹೊತ್ತು ಕೆಲವರು ಆ ಸೈನ್ಯದ ಜೊತೆಯಲ್ಲಿ ಬರುತ್ತಿದ್ದರು ಇನ್ನು ಕೆಲವರು ಬಹು ಭಾರವಾದ ಸೌದೇ ಹೊರೆಗಳನ್ನು ಹೊತ್ತು ನಡೆಯುತ್ತಿದ್ದರು ಅದರಂತಹವನ್ನು ಭಾರವಾದ ನಗಾರಿಗಳನ್ನು ಕತ್ತಿಗೆ ತಗಲುಹಾಕಿಕೊಂಡು ಅದನ್ನು ಎರಡು ಕೈಗಳ ಕೋಲುಗಳಿಂದ ಬಾರಿಸುತ್ತಾ ಕೆಲವರು ನಡೆದು ಬರುತ್ತಿದ್ದರು

೩೪ ಈರೀತಿಯಾಗಿ ಪ್ರಯಾಣ ಹೊರಟು ಬರುತ್ತಿದ್ದ ಜನರು ಬಹುದೂರ ನಡೆದು ಆಯಾಸಗೊಂಡು, ಎಷ್ಟು ಹೊತ್ತಿಗೆ ಬಿಡಾರವು ಸಿಕ್ಕೀತೋ ಎಂದು ಹಾರೈಸುತ್ತಿರುವುದರೊಳಗ ದೊಡ್ಡ ದೊಡ್ಡ ಬೊಂಬುಗಳಿಂದ ಕಟ್ಟಿದ್ದ ಅಂಗಡಿ ಬೀದಿಯು ಗೋಚರವಾಯಿತು

೩೫ ಎಲ್ಲೆಲ್ಲೂ ಹಾರಾಡುತ್ತಿರುವ ಬಾವುಟಗಳು ಕಾಣಿಸಿದುವು ಓಹೋ! ಇನ್ನೇನು ನಾವು ಇಳಿಯುವ ಮಜಲು ಸಿಕ್ಕಿತೆಂದು ಜನರು ಸಂತೋಷಪಡತೊಡಗಿದರು ಕೆಲವರು ಹತ್ತಿರದಲ್ಲಿದ್ದವರನ್ನು ಕುರಿತು, ಇದೇ ತಾನೇ ನಾವು ಇಳಿಯುವ ಸ್ಥಳ, ಎಂದು ಪದೇ ಪದೇ ಕೇಳುತ್ತಿದ್ದರು

ಪುರೋಗತಾನಾಂ ರಾಜೇಂದ್ರ ಸ್ಥಾನಲಬ್ಧಿಚಿಕೀರ್ಷಯಾ ।
ಕೇಚಿತ್ಪಟಕುಟೀಂ ದೃಷ್ಟ್ವಾ ಸ್ವಕೀಯಾಂ ತ್ವರಿತಾ ಯಯುಃ ॥ ೩೬ ॥

ವರ್ತಿತೋರ್ಣಾಕೃತಂ ದೃಷ್ಟ್ವಾ ಗೃಹಾಂಶ್ಚಾನ್ಯೇ ಯಯುರ್ದ್ರುತಂ ।
ಕೇಷಾಂಚಿತ್ತತ್ರ ವೇಶ್ಮಾನಿ ತೀರ್ಣಾನಿ ನೃಪಸತ್ತಮ ॥ ೩೭ ॥

ಕೃತಾನಿ ಕ್ರಿಯಮಾಣಾನಿ ದದೃಶುಸ್ತತ್ರ ಮಾನವಾಃ ।
ದ್ರುಮೈರ್ವಿಶ್ರಾಮ್ಯಮಾಣೈಶ್ಚ ಕ್ರಿಯಮಾಣೈಸ್ತಥಾ ಕಟೈಃ ॥ ೩೮ ॥

ಗೃಹೈರಾರೋಪ್ಯಮಾಣೈಶ್ಚ ಪಟೋರ್ಣಾತೃಣಸಂಸ್ಕೃತೈಃ ।
ಶುಶುಭೇ ತನ್ಮಹಾರಾಜ ಕಟಕಂ ಶುಭಕರ್ಮಣಃ ॥ ೩೯ ॥

ಶಸ್ತ್ರೇಣ ಸಂಶೋಧಯತಾಂ ಭುವಂ ಭೂಮಿಪತೇ ನೃಣಾಂ ।
ರಾಜಸಾಕ್ರಾಂತವಪುಷಾಮಪ್ರಕಾಶಂ ವಪುರ್ಬಭೌ ॥ ೪೦ ॥

೩೬ ವಜ್ರಮಹಾರಾಜ! ಭರತನ ವಿಜಯ ಯಾತ್ರಾಪ್ರಕರಣವನ್ನು ಚೆನ್ನಾಗಿ ಕೇಳು. ಸೈನ್ಯವು ಮುಂದೆ ಮುಂದೆ ಸಾಗುತ್ತಿರುವಲ್ಲಿ ಒಹು ಮುಂದೆ ಹೋದ ಜನರು ಮುಂದಿನ ಮಜಲನ್ನು ಸಮೀಪಿಸುತ್ತಿರುವಾಗ ಅಲ್ಲಿ ಸೈನ್ಯದ ವಿಶ್ರಾಂತಿಗಾಗಿ ಹಾಕಿದ್ದ ಗುಡಾರಗಳನ್ನು ಕಂಡರು. ನೋಡಿದೊಡನೆಯೇ ತಮ್ಮ ಗಳಿಗೆ ಸಿದ್ಧಪಡಿಸಿದ ಬಿಡಾರದ ಗುಡಾರವಾವುದೆಂದು ಹುಡುಕಿ ಅದನ್ನು ಕಂಡು ಹಿಡಿಯುವುದಕ್ಕಾಗಿ ಪ್ರಯಾಣವನ್ನು ಚುರುಕುಮಾಡಿದರು.

೩೭-೪೦ ಅಲ್ಲಿ ತಮ್ಮ ಬಿಡಾರದ ಕುಟೀರಗಳನ್ನು ಕಂಬಳಿಗಳಿಂದ ಅಂದವಾಗಿ ಕಟ್ಟಿದ್ದುದನ್ನು ನೋಡಿ ಅವರಲ್ಲಿ ಹೋಗಿ ಇಳಿದುಕೊಂಡರು. ಅನೇಕ ಗುಡಾರಗಳು ಸಿದ್ಧವಾದುವು. ಇನ್ನು ಕೆಲವನ್ನು ಕಟ್ಟುತ್ತಾ ಇದ್ದರು. ಕೆಲವು ಗುಡಾರಗಳು ಮರದ ನೆರಳನ್ನನುಸರಿಸಿ ಕಟ್ಟಲ್ಪಡುತ್ತಿದ್ದವು. ನೆಲವನ್ನು ಚೆನ್ನಾಗಿ ಕೆತ್ತಿ ಅದರ ಮೇಲೆ ಹುಲ್ಲನ್ನು ಹರಡಿ ಅದರ ಮೇಲೆ ಮೆತ್ತಗಿರುವ ಕಂಬಳಿ ಜಮಖಾನೆಗಳನ್ನು ಹಾಸಿ ಅನೇಕ ಗುಡಾರಗಳನ್ನು ಕಟ್ಟಿದ್ದರು. ಆ ಗುಡಾರವನ್ನು ಕಟ್ಟುತ್ತಿರುವ ಜನರು ಗುದ್ದಲಿ ಪಿಕಾಸಿಗಳಿಂದ ಮಣ್ಣನ್ನು ಅಗೆದು ಅದನ್ನು ಸಮನಾಗಿ ಹರಡಿ ಕೆಲಸಮಾಡುತ್ತಿದ್ದಾಗ ಮೈಕೈಗಳೆಲ್ಲಾ ಧೂಳಿನಿಂದ ವ್ಯಾಪ್ತವಾಗಿ ಕಾಂತಿಹೀನವಾಗಿ ಕಾಣುತ್ತಿದ್ದವು.

ಪಾರ್ಶ್ವಸ್ಥತೋಯಸಂಪೂರ್ಣದೃತಯಶ್ಚ ತಥಾ ಜನಾಃ ।
ಧಾವಮಾನಾಃ ಪ್ರದೃಶ್ಯಂತೇ ವರ್ಧಿತಾ ಗೃಹಶೋಧನೇ ॥ ೪೧ ॥

ಅಭ್ಯುಕ್ಷಯಂತಿ ಚಾಪ್ಯನ್ಯೇ ತೃಣವೇಶ್ಮಾನಿ ಪಾರ್ಥಿವ ।
ತಪ್ತಾನಾಂ ಶೀತಕಾಮಾನಾಂ ದೃತಿವಕ್ತ್ರೋದ್ಗತೈರ್ಜಲೈಃ ॥ ೪೨ ॥

ಅಭಿಶ್ರವೇಣ ಧೂಪೇನ ಸಮಂತಾದಾಕುಲೀಕೃತಂ ।
ಬಭೂವ ತಸ್ಯ ಕಟಕಂ ನೀಹಾರೇಣೈವ ಸಂಯುತಂ ॥ ೪೩ ॥

ಅವರೋಪಿತಭಾಂಡಾನಾಂ ದಾಂತಾನಾಂ ಯದುನಂದನಂ ।
ಪೃಷ್ಠಾನ್ಯಭ್ಯುಕ್ಷಯಾಮಾಸುಗೋಮಯೇನ ಜಲೇನ ಚ ॥ ೪೪ ॥

ಖರೋಷ್ಟ್ರಸಬಲೀವರ್ದಂ ಚರಣಾರ್ಥೇ ವಿನಿರ್ಗತಂ ॥ ೪೫ ॥

ದದೃಶೇ ಬಹುಸಾಹಸ್ರಂ ಕಟಕೇ ಭರತಸ್ಯ ತು ।
ರಥೇಭ್ಯಸ್ತುರಗಾನನ್ಯೇ ವಿಮುಚ್ಯ ಹಯಕೋವಿದಾಃ ॥ ೪೬ ॥

---

೪೧-೪೩ ಮಣ್ಣನ್ನು ಅಗೆದು ನೆಲವನ್ನು ಗಟ್ಟಿಮಾಡುವುದಕ್ಕಾಗಿ ಸಮೀಪದಲ್ಲಿ ತೋಡಿದ್ದ ಕುಂಟೆ ಭಾವಿಗಳಿಂದ ನೀರನ್ನು ತಂದು ಸುರಿದು ಅವನ್ನು ದಮ್ಮಸ್ಸು ಮಾಡಿ ನೆಲವನ್ನು ಗಟ್ಟಿಮಾಡಲು ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಓಡಾಡುತ್ತಲಿದ್ದ ಕೂಲಿಗಳು ಅಲ್ಲಿ ಬಹುಮಂದಿ ಕಾಣಿಸುತ್ತಲಿದ್ದರು ಇನ್ನು ಕೆಲವು ಆಳುಗಳು ನೆಲದಮೇಲೆ ಹರಡಿದ್ದ ಹುಲ್ಲಿನ ಮೇಲೆ ಕೊಂಚ ಕೊಂಚ ನೀರನ್ನು ಚಮುಕಿಸಿ ಬಿಲಿಸಿನ ಬೇಗೆಯಿಂದಾದ ಆಯಾಸವು ಕಡಿಮೆಯಾಗಿ ತಣ್ಣಗಿರುವಂತೆ ಮಾಡುತ್ತಿದ್ದರು ಮತ್ತು ಆ ಗುಡಾರಗಳು ಸುವಾಸನೆಯುಳ್ಳದಾಗಿರಲೆಂದು ಧೂಪದ ಹುಡಿಗಳನ್ನು ಅಲ್ಲಲ್ಲಿ ಕೆಂಡಗಳ ಮೇಲೆ ಹಾಕಿ ಧೂಪದ ಹೊಗೆಯನ್ನು ಕೊಡುತ್ತಿದ್ದರು

೪೪-೪೬ ಎಲ್ಲ ಪಾತ್ರೆ ಪದಾರ್ಥಗಳ ಬಂಡಿಗಳೂ ಆಡಿಗೆ ಬಿಡಾರದ ಬಳಿ ಇದೊಡನೆ ಆ ಪಾತ್ರಗಳನ್ನೆಲ್ಲಾ ಕೆಳಕ್ಕಿಳಿಸಿ ಆ ಪಾತ್ರಗಳನ್ನು ಸಗಣಿ ನೀರಿನಿಂದ ಚುಮುಕಿಸಿ ಹುಳಿ ಹಾಕಿ ಶುದ್ಧಪಡಿಸಿ ಅವುಗಳನ್ನು ಒಳಕ್ಕೆ ಇಡಿಸುತ್ತಿದ್ದರು

ಹೇಸರಗತ್ತೆಗಳೂ. ಆನೆಗಳೂ, ಕುದುರೆಗಳೂ, ಎತ್ತುಗಳೂ ಸಾವಿರಗಟ್ಲೆ ಬಂದು ಬಂದು ಆ ಬಿಡಾರದ ಪ್ರದೇಶಗಳಲ್ಲಿ ನಿಲ್ಲುತ್ತಿದ್ದವು

ಅವರೋಪಿತಭಾಂಡಾನಿ ಸ್ವಾಂತಯಾಂಚಕ್ರಿರೇ ಶನೈಃ ।
ಸಮುತ್ಥಾಯ ರಜೋ ಭೌಮಂ ತುರಂಗಪರಿವರ್ತನೈಃ ॥ ೪೭ ॥

ಖಮಾರುರೋಹ ರಾಜೇಂದ್ರ ಕಪೋತಾರುಣಪಾಂಡುರಂ ।
ಸ್ಥಾಪಯಾಂಚಕ್ರಿರೇ ಚಾನ್ಯೇ ಜಲಸ್ಥಾನೇ ಚ ವಾಜಿನಃ ॥ ೪೮ ॥

ಶ್ರೇಣೀಂ ಚಕ್ರುಸ್ತಥೈವಾನ್ಯೇ ಕಟಿಚ್ಛಾಯಾಸು ಪಾರ್ಥಿವ ।
ವಿತಾನಾಧಸ್ತಥಾ ಕೇಚಿತ್ಸ್ಥಾಪಯಾಂಚಕ್ರಿರೇ ಹಯಾನ್ ॥ ೪೯ ॥

ಹಯೇಭ್ಯೋ ಯವಸಂ ದತ್ವಾ ಕೇಚಿದ್ಬುಭುಜಿರೇ ಜನಾಃ ।
ಕಟಿಚ್ಛಾಯಾಶ್ಚ ನಾಗಾನಾಂ ಚಕ್ರುಶ್ಚಾನ್ಯೇ ಸಹಸ್ರಶಃ ॥ ೫೦ ॥

ವಿತಾನಾನಿ ಚ ಮುಖ್ಯಾನಿ ಸೂರ್ಯತಾಪಪ್ರಶಾಂತಯೇ ।
ಸ್ನಾತಾನ್ ಜಲಾಶಯೇ ನಾಗಾಂಲ್ಲಬ್ಧತೋಯಾನ್ ಜನಾಧಿಪ ॥ ೫೧ ॥

---

ಗಾಡಿಗಳಿಗೆ ಕಟ್ಟಿದ ಕುದುರೆಗಳನ್ನು ಬಿಚ್ಚಿ ಅವುಗಳನ್ನು ಲಾಯಗಳಲ್ಲಿ ಕಟ್ಟಿ ಆ ಗಾಡಿಗಳಲ್ಲಿದ್ದ ಸಾಮಾನುಗಳನ್ನು ಮೆಲ್ಲಗೆ ಕೆಳಗಿಳಿಸುತ್ತಿದ್ದರು

೪೭-೫೪ ಕೆಲವು ಕುದುರೆಗಳನ್ನು ನೀರಿಗೆ ಸಮೀಪವಾಗಿರುವ ಬಳಿಯಲ್ಲಿ ಗೂಟಹೊಡೆದು ಕಟ್ಟಿಹಾಕಿದರು ಹೀಗೆ ಆನೆಗಳನ್ನೂ, ಕುದುರೆಗಳನ್ನೂ ಸಾಲು ಸಾಲಾಗಿ ವರಸೆವರಸೆಯಾಗಿ ಗೂಟಗಳಿಗೆ ಕಟ್ಟಿಹಾಕಿದ್ದುದನ್ನು ನೋಡಿದರೆ ಆ ನೋಟವು ಬಹಳ ಮನೋಹರವಾಗಿ ತೋರುತ್ತಿತ್ತು ಆನೆಗಳಿಗೂ, ಕುದುರೆಗಳಿಗೂ ಜೊಂಡು-ಹುಲ್ಲು ಮುಂತಾದ ಆಹಾರಗಳನ್ನು ಮೊದಲು ಕೊಟ್ಟಬಳಿಕ, ಅದರ ಮಾವುತರೂ, ರಾವುತರೂ ತಾವು ಊಟಕ್ಕೆ ಹೋಗುತ್ತಿದ್ದರು

ಆ ಪ್ರಾಣಿಗಳ ಮೇಲೆ ಬಿಸಿಲು ಬೀಳದಂತೆ ಬಹು ಜಾಗರೂಕತೆಯಿಂದ ಡೇರೆಯ ನೆರಳುಗಳಲ್ಲೂ ಮರದ ನೆರಳುಗಳಲ್ಲಿಯೂ ಅವುಗಳನ್ನು ಗೂಟ ಹೊಡೆದು ಸಾಲಾಗಿ ಕಟ್ಟಿಹಾಕಿದರು ಆನೆಗಳನ್ನು ನೀರಿಗೆ ಬಿಟ್ಟು ಅವು ದಣಿವಾರುವಂತೆ ನೀರು ಕುಡಿದು ಸೊಂಡಿಲಿನಿಂದ ನೀರನ್ನೆತ್ತಿ ಬೆನ್ನಮೇಲೆ ಸ್ವೇಚ್ಛೆಯಾಗಿ ಸುರಿದುಕೊಂಡ ಬಳಿಕ ಆ ಆನೆಗಳನ್ನು ಕಟ್ಟಿದರು. ಈರೀತಿ ಗಜಸ್ನಾನವೆನ್ನುವಂತೆ ಆ ಗಜಗಳು ಸ್ನಾನಮಾಡಿದ

ಸಂಭಸ್ನಾನ್ಸ್ವಪರೀಧಾನಕುಂಭಾರ್ ನಿನ್ಯುಃ ಸ್ವಮಾಲಯಂ ।
ಕಟಕಾದ್ದೂರತಶ್ಚಕ್ರುರಾಲಾನಂ ನೃಪ ದಂತಿನಾಂ ॥ ೫೨ ॥

ಆಲಾನಾನಿ ಮಹಾರಾಜ ಮಹಾವೃಕ್ಷೇಷು ಮಾನವಾಃ ।
ಆದಾಯ ಗೋಪಿನಸ್ತತ್ರ ಕಟಕಾಚ್ಚ ವಿದೂರತಃ ॥ ೫೩ ॥

ಗೋಸಂಘಾನ್ಮಹಿಷೀಸಂಘಾಂಶ್ಚಕ್ರುರ್ನ್ಯ ಸ್ತಾನ್ಯಥಾಸುಖಂ ।
ಕಟಕೇ ಚ ತಥಾನಿ ನ್ಯುಗೋರ್ೀರಸಾನಿ ನರಾಧಿಪ ॥ ೫೪ ॥

ಕಟಕಾಪಣ್ಯವೀಥೀಂ ಚ ಸರ್ವಪಣ್ಯವಿಭೂಷಿತಾಂ ।
ದದೃಶುಃ ಪುರುಷಾಸ್ತತ್ರ ಅಯೋಧ್ಯಾಮಿವ ಚಾಪರಾಂ ॥ ೫೪ ॥

ಸ್ಥಾನಾನಿ ಸರ್ವವೈದ್ಯಾನಾಂ ಸಧ್ವಜಾನಿ ನರಾಧಿಪ ।
ಸಾಂಗದಾನಿ ಚ ದೃಶ್ಯಂತೇ ಕಟಕೇ ಭರತಸ್ಯ ತು ॥ ೫೬ ॥

ಸೇನಾಧ್ಯಕ್ಷೇಣ ವೀರೇಣ ವಿಜಯೇನ ಮಹಾತ್ಮನಾ ।
ಕೃತಂ ಶಾಸ್ತ್ರಾನುಸಾರೇಣ ಸ್ಕಂಧಾವಾರನಿವೇಶನಂ ॥ ೫೭ ॥

---

ಬಳಿಕ ಗುಡಾರಗಳಿಗೆ ದೂರವಾಗಿರುವ ಮರವ ನೆರಳಿನಲ್ಲಿ ಅವನ್ನು ಕಟ್ಟಿದರು

ಹಾಲು ಕರೆಯುವ ಹಸುಗಳನ್ನೂ ಎಮ್ಮೆಗಳನ್ನೂ, ಆನೆ ಕುದುರೆಗಳಿಗಿಂತ ದೂರದಲ್ಲಿ ಕಟ್ಟಿಹಾಕಿ ಅವುಗಳ ಹಾಲನ್ನು ಕರದುಕೊಂಡು ಬಿಡಾರಗಳಿಗೆ ತರುತ್ತಿದ್ದರು

೫೫ ಆ ಸೈನ್ಯಕ್ಕಾಗಿ ಸಿದ್ಧವಾಗಿದ್ದ, ನಾಲುಹಿಡಿದು ಜೋಡಿಸಿದ್ದ, ನಾನಾ ಪದಾರ್ಥಗಳನ್ನು ಮಾರುವ ಅಂಗಡಿ ಬೀದಿಗಳು ದಾರಿಯ ಎರಡು ಪಕ್ಕಗಳಲ್ಲೂ ಬಹುದೂರ ವಿಸ್ತರಿಸಿದ್ದುದನ್ನು ನೋಡಿದರೆ, ಇಲ್ಲಿಗೆ ಬೇರೆ ಒಂದು ಅಯೋಧ್ಯಾ ಪಟ್ಟಣವೇ ಬಂದಿದೆಯೋ ಅನ್ನುವಂತೆ ಕಾಣುತ್ತಿತ್ತು

೫೬ ಆ ಸೈನ್ಯದ ಜೊತೆಯಲ್ಲಿ ಬಂದಿದ್ದ ವೈದ್ಯರ ಗೃಹಗಳು ಬಾವುಟಗಳಿಂದ ಕೂಡಿ ಸ್ವಚ್ಛವಾಗಿ ರಚಿತವಾಗಿದ್ದುವು

೫೭. ಸೈನ್ಯದ ಜೊತೆಯಲ್ಲಿ ಬಂದಿದ್ದ ಮಹಾತ್ಮನಾದ ವಿಜಯನೆಂಬ ಸೈನ್ಯಾಧಿಪತಿಯು ಶಿಸ್ತಿನಂತೆ ಶಾಸ್ತ್ರಾನುಸಾರವಾಗಿ ಸಕಲರ ಬಿಡಾರಗಳೂ ನಿರ್ಮಿತವಾಗಿದ್ದುವು

**ನಿವೇಶ ಭರತಃ ಶ್ರೀಮಾಂಶ್ಚತುರಂಗಬಲಾನ್ವಿತಃ ।**
**ಅನ್ವೀಯಮಾನೋ ವೀರಾಭ್ಯಾಂ ಪುತ್ರಾಭ್ಯಾಂ ಯದುನಂದನ ॥ ೫೮ ॥**

**ಪುಷ್ಕರೇಣ ಚ ವೀರೇಣ ತಕ್ಷೇಣ ಸುಮಹಾತ್ಮನಾ ।**
**ಬಲಮುಖ್ಯೈಸ್ತಥೈವಾನ್ಯೈಃ ಸೂತಮಾಗಧಬಂದಿಭಿಃ ॥ ೫೯ ॥**

**ಶಂಖವಾದಿತ್ರಶಬ್ದೇನ ಪಟಹಾನಾಂ ಸ್ವನೇನ ಚ ।**
**ಭರತಸ್ಯ ಗೃಹದ್ವಾರತೋರಣಾಂತಿಕಮಾಗತಾಃ ॥ ೬೦ ॥**

**ಬಭೂವುರ್ಬಲಮುಖ್ಯಾಸ್ತೇ ದಿಕ್ಷು ಯೇ ಯದುನಂದನ ।**
**ಸಂತ್ಯಜ್ಯ ಮಧ್ಯಮಾಂ ವೀಥೀಂ ಪ್ರವೇಶಾಯ ಮಹಾಮನಾಃ ॥ ೬೧ ॥**

**ಬಂದಿಭಿಃ ಖ್ಯಾಪ್ಯಮಾನಾಂ ಸ್ವಾರ್ನಾಮುಕರ್ಮಾವದಾನತಃ ।**
**ಶಿರಃಕಂಪೇನ ಭರತಃ ಪ್ರೈರಯತ್ಸ್ವಾನ್ನಿವೇಶನಾನ್ ॥ ೬೨ ॥**

೫೮-೫೯. ಮಹಾರಾಜನಿಗಾಗಿ ಸಜ್ಜುಗೊಳಿಸಲ್ಪಟ್ಟಿದ್ದ ರಾಜಯೋಗ್ಯನಾದ ಬಿಡಾರದಲ್ಲಿ ಭರತನೂ, ಅವನ ಮಕ್ಕಳಾದ ಪುಷ್ಕರ ಮತ್ತು ತಕ್ಷರೂ ಸಹ ಇಳಿದು ಕೊಂಡರು ಚತುರಂಗ ಬಲವೂ ತಮತಮಗೆ ಸಿದ್ಧವಾಗಿದ್ದ ಆವೇಶನಗಳಲ್ಲಿ ಇಳಿದು ಕೊಂಡುವು ಸೂತಮಾಗಧ ವಂದಿಗಳು ರಾಜಗೃಹದ ಅಕ್ಕಪಕ್ಕಗಳಲ್ಲೇ ವಿಹಾರ ಮಾಡಿದರು

೬೦-೬೨ ಭರತನು ತನ್ನ ಬಿಡಾರದಲ್ಲಿಳಿದೊಡನೆ ನಾನಾವಿಧ ವಾದ್ಯಗಳು ಮೊಳಗಿದವು ವಂದಿಮಾಗಧರು ಹೊಗಳಿದರು ಆ ಬಳಿಕ ಅವರವರಿಗಾಗಿ ಸಿದ್ಧಪಡಿಸಿದ್ದ ಬೇರೆ ಬೇರೆ ಬಿಡಾರಗಳಲ್ಲಿ ಅವರವರ ಹೆಸರನ್ನು ನೋಡಿ ನೋಡಿ ಅಲ್ಲಲ್ಲಿ ಆಯಾಯ ಜನರು ಇಳಿದು ಸುಖವಾಗಿ ಸ್ನಾನಭೋಜನ ನಿದ್ರಾದಿಗಳಿಂದ ದಣಿವಾರಿಸಿ ಕೊಂಡರು ಮತ್ತೊಬ್ಬ ದೇವೇಂದ್ರನೋ ಎಂಬಂತೆ ಪ್ರಕಾಶಿಸುತ್ತಿದ್ದ ಭರತನೂ ಸಹ ತನ್ನ ಬಿಡಾರದಲ್ಲಿ ಸುಖವಾಗಿ ವಿಶ್ರಮಿಸಿಕೊಂಡನು

ಎರಡೆರಡು ಗಾವುದಕ್ಕೆ ಒಂದೊಂದು ಮಜಲಿನಂತೆ ಸಕಲ ಸೈನ್ಯವೂ ದಾರಿಯನ್ನು ಸಾಗಿಸುತ್ತಾ ಸ್ವಲ್ಪ ದಿನಗಳೊಳಗಾಗಿ ಗಂಗಾನದೀ ತೀರಕ್ಕೆ ಬಂದಿಳಿದವು

ಬಲಮುಖ್ಯಾನ್ನಿವೇಶಾಥ ಸ್ವಗೃಹಂ ಸರ್ವಶುದ್ಧಿಮತ್ ।
ದ್ವಿಯೋಜನಸಾಧ್ವನಾ ಶ್ರಾಂತಾ ಭರತಸ್ಯ ತು ಸೈನಿಕಾಃ ॥ ೬೩ ॥

ವಿವಿಶುರ್ಭವನಾನ್ಯಾಸ್ವಾನ್ಸ್ವಾನ್ಭೇಜಿರೇ ಶಯನಾನಿ ಚ ।
ಪ್ರವಿಶ್ಯ ವೇಶ್ಮಪ್ರವರಂ ಭರತೋಽಪಿ ಯಥಾಸುಖಂ ॥ ೬೪ ॥

ವಿಜಹಾರ ಮಹಾರಾಜ ದೇವರಾಜಸಮದ್ಯುತಿಃ ।
ಕ್ರಮೇಣಾನೇನ ಧರ್ಮಾತ್ಮಾ ಭೂಮಿಪಾಲ ದಿನೇದಿನೇ ।
ಆಸಸಾದ ವ್ರಜನ್ನೇವ ಗಂಗಾಂ ತ್ರಿಪಥಗಾಂ ನದೀಂ

ಸುರಾಂಗನಾಪೀನಪಯೋಧರಸ್ಥ-
ಸಚ್ಚಂದನಕ್ಷಾಲನಲಬ್ಧಲಕ್ಷ್ಮೀಂ ।
ಗ್ರೀಷ್ಮಾರ್ಕತಾಪಾದ್ವಿಗಲತ್ತುಷಾರ-
ವಿವೃದ್ಧಶೀತೋದಪಟೋತ್ತರೀಯಾಂ ॥ ೬೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರಯಾಣವರ್ಣನೋನಾಮ
ಪಂಚಾಧಿಕ ದ್ವಿಶತತಮೋಽಧ್ಯಾಯಃ.

೬೬ ಅಲ್ಲಿ ಗಂಗಾನದಿಯು ಪ್ರವಹಿಸುತ್ತಿರುವುದನ್ನು ನೋಡಿದರೆ, ದೇವ ಸ್ತ್ರೀಯರ ಪೀನಕುಚಗಳಿಗೆ ಲೇಪಿಸಿದ ಪರಿಮಳಗಂಧವನ್ನು ಗಂಗೆಯಿಂದ ತೊಳ ಯುವ ಕಾಲದಲ್ಲಿ ಉತ್ಪನ್ನಳಾದ ಲಕ್ಷ್ಮಿಯು, ಬಿಸಿಲಿನ ತಾಪದಿಂದ ಕರಗಿ ನೀರಾಗಿ ಹರಿಯುತ್ತಿರುವ ಹಿಮಗಳ ಕಣಗಳಂಬ ನೂಲುಗಳಿಂದ ನೇಯ್ದ ಬಿಳೀಸೀರೆ ಯನ್ನುಟ್ಟು ನಡೆದುಕೊಂಡು ಹೋಗುತ್ತಿರುವಳೋ ಎಂಬಂತೆ ಕಾಣಿಸುತ್ತಿತ್ತು. ಅಂದರ ಈ ತ್ರಿಪಥಗೆಯಾದ ಗಂಗೆಯಲ್ಲಿ ದೇವತಾಸ್ತ್ರೀಯರೂ ಸಹ ಪ್ರತಿದಿನವೂ ಸ್ನಾನಮಾಡಿ ಹೋಗುತ್ತಿದ್ದರೆಂದು ಮುಖ್ಯ ತಾತ್ಪರ್ಯ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಸುಖ ಪ್ರಯಾಣ ವರ್ಣನೆಯೆಂಬ
ಹೆಸರಿನ ಇನ್ನೂರೈದನೆಯ ಅಧ್ಯಾಯ
ಮುಗಿದುದು.

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಡುತ್ತರದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ನಿವೇಶಮಕರೋದ್ರಾಜನ್ ಗಂಗಾತೀರೇ ಸ ರಾಘವಃ ।
ಭರತಸ್ಯ ತದಾ ಚಕ್ರುರ್ಗಂಗಾಯಾಂ ಜಲಮಂಟಪಾನ್ ॥ ೧ ॥

ತಥೈವ ಬಲಮುಖ್ಯಾನಾಂ ಪ್ರಾಧಾನ್ಯೇನ ನರಾಧಿಪ ।
ಸೈನಿಕಶ್ಚ ಜನಸ್ತಸ್ಯ ಪ್ರಾಪ್ಯ ತಾಂ ಸುರನಿಮ್ನಗಾಂ ॥ ೨ ॥

ಸಾಫಲ್ಯಂ ಜನ್ಮನೋ ಮೇನೇ ತತ್ಯಾಜ ಚ ತಥಾ ಕ್ಲಮಂ ।
ಸಸ್ನೌ ಪಪೌ ಪಯಃ ಕಾಮಂ ಹರ್ಷೇಣ ಮಹತಾ ಯುತಃ ॥ ೩ ॥

### ಇನ್ನೂರಾರನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರರಾಜನೇ, ಕೇಳು. ಗಂಗಾನದೀ ತೀರದಲ್ಲಿ ಭರತನ ಸೈನ್ಯವು ಬಂದಿಳಿಯಿತಷ್ಟೆ? ಆಗ ಸೇವಕರು ಗಂಗೆಯಲ್ಲಿ ಭರತನ ಸ್ನಾನಕ್ಕಾಗಿ ಜಲಮಂಟಪಗಳನ್ನು ನಿರ್ಮಾಣಮಾಡಿದರು

೨-೬ ಭರತನ ಜೊತೆಯಲ್ಲಿ ಬಂದ ಸಕಲ ವೀರಶೂರ ಸೈನಿಕರೂ, ಇತರ ಎಲ್ಲಾ ವಿಧವಾದ ಜನರೂ ಗಂಗಾನದಿಯನ್ನು ನೋಡಿದ ಮಾತ್ರದಿಂದಲೇ ನಾವು ಹುಟ್ಟಿದುದು ಇಂದಿಗೆ ಸಾರ್ಥಕವಾಯಿತೆಂದುಕೊಳ್ಳುತ್ತಾ ಪ್ರಯಾಣದಿಂದುಂಟಾದ ಬಳಲಿಕೆಯನ್ನು ಮರೆತುಬಿಟ್ಟರು ಆ ಜನರ ಆನಂದಕ್ಕೆ ಪಾರವೇ ಇಲ್ಲ ಗಂಗೆ ಯನ್ನು ಇಳಿದು ಕೂಡಲೆ ಸ್ನಾನಮಾಡಿದರು ದಣಿವಾರುವಂತೆ ಯಥೇಚ್ಛವಾಗಿ

ಸ್ನಾಪಯಾಂಚಕ್ರಿರೇ ತತ್ರ ತುರಂಗಾಂಸ್ತುರಗಪ್ರಿಯಾಃ ।
ಕುಂಜರಾನ್ ಸ್ನಾಪಯಾಮಾಸುರ್ಮಹಾಮಾತ್ರಾಸ್ತಥೈವ ಚ ॥ ೪ ॥

ಮಜ್ಜದ್ಭಿರ್ಬಹುಸಾಹಸ್ರೈಃ ಕುಂಜರೈರ್ಜಾಹ್ನವೀ ನದೀ ।
ಕಿರಾತವಿಷಯೈಃ ಸೈವ ವಿರರಾಜ ಯಥೋಪಲೈಃ ॥ ೫ ॥

ಸಮುತ್ಥಿತಮಹಾಮಾತ್ರಾನ್ದೃಷ್ಟ್ವಾಭ್ಯಕ್ಷಣಛದ್ಮನಾ ।
ಚಿಕ್ರೀಡುರ್ದಂತಿಭಿಃ ಕೇಚಿದ್ವಿಶುರ್ಬಹುಭಿಸ್ತಥಾ ॥ ೬ ॥

ಗಂಗಾಮಾಸಾದ್ಯ ಸಂಹೃಷ್ಟಾ ಭರತಸ್ಯ ತು ಸೈನಿಕಾಃ ।
ಭರತೋಽಪಿ ತಥಾ ಸ್ನಾತಃ ಕೃತದೈವತಪೂಜನಃ ॥ ೭ ॥

ಶ್ರಾದ್ಧಂ ಚಕ್ರೇ ಮಹಾತೇಜಾ ದದೌ ದಾನಂ ತಥೈವ ಚ ।
ಪಶ್ಚಾತ್ತತ್ರ ಮಹಾದಾನಾನಾಜ್ಞಾಪಯತಿ ಯಾದವ ॥ ೮ ॥

ಗಂಗಾಜಲವನ್ನು ಪಾನಮಾಡಿದರು ಕುದುರೆಸವಾರರು ಮೊದಲಿಳಿದು ತಮ್ಮ ಪ್ರೀತಿಪಾತ್ರವಾದ ಕುದುರೆಗಳನ್ನು ಗಂಗೆಯಲ್ಲಿ ಇಳಿಸಿ ಸ್ನಾನಮಾಡಿಸಿದರು ಆನೆ ಮಾವುತರು ತಮ್ಮ ತಮ್ಮ ಆನೆಗಳನ್ನು ನೀರಿನೊಳಗೆ ಇಳಿಸಿದರು ಸಾವಿರಾರು ಆನೆಗಳು ಇಳಿದು ಗಂಗೆಯಲ್ಲಿ ವೈಯುಕ್ಕಿರುವುವನ್ನು ನೋಡಿದರೆ ಕಲ್ಲುಬಂಡೆಗಳು ನೀರಿನಲ್ಲಿ ಮುಳುಗಿದಂತೆ ಕಾಣುತ್ತಿತ್ತು ಗಂಗೆಯಲ್ಲಿ ಮುಳುಗಿ ಮೇಲಕ್ಕೆದ್ದ ಮಾವುತರನ್ನೂ, ಅವರಿಂದ ಅಂಕೆಯಲ್ಲಿಡಲ್ಪಟ್ಟು ಮುಳುಗುತ್ತಿರುವ ಆನೆಗಳನ್ನೂ ನೋಡಿದರೆ ಆನೆಗಳೊಡನೆ ಅವರು ಆಟವಾಡುವಂತೆ ಕಾಣುತ್ತಿತ್ತು

೭-೧೨. ಗಂಗಾನದಿಯನ್ನು ಕಂಡೊಡನೆಯೇ ಭರತನ ಸೈನಿಕರೆಲ್ಲರೂ ಆ ಮಹಾನದಿಯಲ್ಲಿ ಸ್ನಾನಮಾಡಿದರು. ಭರತನೂ ಸಹ ಗಂಗಾಸ್ನಾನಮಾಡಿ ದೇವತಾರ್ಚನೆಯಂ ಮುಗಿಸಿ ತೀರ್ಥಶ್ರಾದ್ಧವಂ ನೆರವೇರಿಸಿದನು ಶ್ರಾದ್ಧಾನಂತರ ಮಹಾದಾನೋಪದಾನಾಗಳನ್ನೂ ಯಥೇಚ್ಛವಾಗಿ ಮಾಡಿದನು ಆ ಬಳಿಕ ಶಿಲ್ಪಿಗಳನ್ನು ಕುರಿತು ಸಾಯಂಕಾಲದ ಹೊತ್ತಿಗೆ ನದೀತೀರದಲ್ಲಿ ಒಂದು ಕೂಟಾಗಾರವನ್ನು (ದೀಪಮಂದಿರ) ನಿರ್ಮಿಸಿ ಅದರಲ್ಲಿ ಸಾವಿರಾರು ದೀಪಗಳನ್ನು ಹಚ್ಚಿಸಿ ಅವುಗಳನ್ನೆಲ್ಲಾ ಗಂಗೆಯಲ್ಲಿ ತೇಲಿಬಿಡಿರಿ. ಹೀಗೆಂದು ಆಜ್ಞಾಪಿಸಿ, ಮತ್ತು ಇತರ ಸೇವಕರನ್ನು ಕುರಿತು

ಶಿಲ್ಪಿನೋ ಮಮ ಕುರ್ವಂತು ಕೂಟಾಗಾರಾನ್ಮನೋರಮಾನ್ ।
ರಾತ್ರೌ ದೀಪನಿವೇಶಾರ್ಥಂ ಶತಶೋಽಥ ಸಹಸ್ರಶಃ ॥ ೯ ॥

ಆನೀಯಂತಾಂ ತಥಾ ನಾವಃ ಸೈನ್ಯಸಂತರಣಾಯ ಮೇ ।
ಕ್ರಿಯಂತಾಂ ಚರ್ಮನಾವಶ್ಚ ಪ್ಲವಾಶ್ಚ ಶತಶಸ್ತಥಾ ॥ ೧೦ ॥

ಉತ್ತರಂ ಪಾರಮಾಸಾದ್ಯ ನಿವೇಶಃ ಕ್ರಿಯತಾಂ ತಥಾ ।
ಪರಂ ಪಾರಂ ಜನಾ ಯಾಂತು ಉದಂಯಾಸ್ತಮಯಾಂತರೇ ॥ ೧೧ ॥

ಏವಮಾಜ್ಞಾಪ್ಯ ಭರತೋ ವಿಜಹಾರ ಯಥಾಸುಖಂ ।
ಪ್ರಸಾರಿತಕರೋ ರಾಜನ್ಸರ್ವತ್ರೈವ ದಿವಾಕರಃ ॥ ೧೨ ॥

ಯಯಾವದರ್ಶನಂ ತತ್ರ ಭರತಸ್ಯೈವ ಲಜ್ಜಯಾ ।
ಪದ್ಮಪತ್ರದಲಾಗ್ರಾಭಾ ಪ್ರತೀಚೀ ಚಾಭವತ್ಕ್ಷಣಾತ್ ॥ ೧೩ ॥

ಆದಿತ್ಯೇಽಸ್ತಮನುಪ್ರಾಪ್ತೇ ಸಂಧ್ಯಾರಾಗಾನುರಂಜಿತಾ ।
ತತಸ್ತು ತಮಸಾ ವ್ಯಾಪ್ತೇ ನ ಪ್ರಾಜ್ಞಾಯತ ಕಿಂಚನ ॥ ೧೪ ॥

---

ಇಂತೆಂದನು — ಈ ರಾತ್ರಿಯೇ ನಾವುಗಳೆಲ್ಲರೂ ಗಂಗಾನದಿಯನ್ನು ದಾಟಬೇಕಾಗಿದ ಯಾದುದರಿಂದ ದೋಣಿ, ತೆಪ್ಪ, ಹರಿಗೋಲು, ಜಂಜಾಲು, ಮುಂತಾದ ನೂರಾರು ಸಾವಿರಾರು ನೌಕೆಗಳನ್ನು ಸಿದ್ಧಪಡಿಸಬೇಕೆಂದು ಆಜ್ಞಾಪಿಸಿ ತಾನು ವಿಶ್ರಾಂತಿಭವನಕ್ಕೆ ತೆರಳಿದನು

೧೩ ಆಗ ಮಧ್ಯಾಹ್ನದ ಬಿಸಿಲು ಸುಡುತ್ತಿತ್ತು ಈ ಬಿಸಿಲಿನ ವೇಗದಿಂದುಂಟಾದ ತಾಪದಿಂದ ಭರತನೂ, ಭರತನ ಸೈನ್ಯವೂ ಬಹುವಾಗಿ ಬಳಲೀತೆಂದು ಭಾವಿಸಿದವನಾಗಿ, ಸೂರ್ಯನು ಭರತನ ಮುಖಕಾಂತಿಗೆ ನಾಚಿಕೆಪಡುತ್ತಾ ಪಶ್ಚಿಮ ದಿಕ್ಕಿನಲ್ಲಿ ಔತುಕೊಳ್ಳುವುದಕ್ಕೆ ಪ್ರಯತ್ನಿಸಿದನು ಆ ಕೂಡಲೆ ಪ್ರತೀಚೀದಿಗಂಗನೆಯು ಪದ್ಮಪತ್ರದಳದಂತೆ ಕಾಂತಿಯುಳ್ಳವಳಾದಳು (ಅಸ್ತಮಾನಕಾಲ ವಾಯಿತೆಂದು ತಾತ್ಪರ್ಯ)

೧೪-೧೫ ಈರೀತಿ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಮರೆಯಾಗಲು ಆಕಾಶವು ಸಂಧ್ಯಾರಾಗದಿಂದ ಕಾಂತಿಹೀನವಾಗುತ್ತ ಬಂದು ಸ್ವಲ್ಪ ಹೊತ್ತಿನೊಳಗೆ ಎತ್ತ

ಭರತಾಜ್ಞಾಕೃತಾನ್ಪೂರ್ವಂ ಕೂಟಾಗಾರಾನ್ಸದೀಪಕಾನ್ ।
ಧ್ವಜಮಾಲಾಪರಿಕ್ಷಿಪ್ತಾಂಶ್ಚಿಕ್ಷಿಪುರ್ಜಾಹ್ನವೀಜಲೇ　　॥ ೧೫ ॥

ಸೈನಿಕೈಶ್ಚ ತಥಾ ಮುಖ್ಯೈರ್ಭರತಸ್ಯ ಪೃಥಕ್ಪೃಥಕ್ ।
ಗಂಗಾಂಭಸಿ ಪರಿಕ್ಷಿಪ್ತಾ ದೀಪವೃಕ್ಷಾಃ ಸಹಸ್ರಶಃ　　॥ ೧೬ ॥

ಸಾ ದೀಪಮಾಲಿನೀ ಗಂಗಾ ತೀರದ್ಯೋತಿತವಿಗ್ರಹಾ ।
ಜಹಾಸ ಫೇನಹಾಸೇನ ಜಿಹ್ವೇವ ಗಗನಪ್ರಿಯಾ　　॥ ೧೭ ॥

ಜಲಾಂತರಾಗತೈರ್ದಿವ್ಯೈರ್ದೀಪವೃಕ್ಷೈರ್ಮನೋಹರೈಃ ।
ತಥಾ ಕಲ್ಲೋಲಸಂಕ್ರಾಂತೈರ್ಗಂಗಾ ದೀಪ್ತೇವ ಲಕ್ಷ್ಯತೇ　　॥ ೧೮ ॥

---

ತ್ತಲೂ ಕತ್ತಲೆಯು ವ್ಯಾಪಿಸುತ್ತ ಬಂತು ಆಗ ಏನೇನೂ ಕಾಣುತ್ತಿರಲಿಲ್ಲ ಅಷ್ಟು ಹೊತ್ತಿಗೆ ಭರತನು ಪೂರ್ವದಲ್ಲೇ (ಮಧ್ಯಾಹ್ನದಲ್ಲೇ) ಮಾಡಿದ ಆಜ್ಞೆಯಂತೆ ದೀಪ ಮಾಲೆಗಳಿಂದೊಡಗೂಡಿದ ಕೂಟಾಗಾರವು ಎಲ್ಲರ ಕಣ್ಣಿಗೂ ಕಾಣಿಸಿತು ಆಕಾಶ ಬುಟ್ಟಿಗಳಲ್ಲಿ ದೀಪಗಳನ್ನು ಹಚ್ಚಿಸಿ ದೀಪವಂತಿರ ವ ಮಂಟಪಗಳನ್ನು ಮಾಡಿ ಅದರಲ್ಲೂ ಬಹಳ ದೀಪಗಳನ್ನು ಹತ್ತಿಸಿ ಅವುಗಳ ಮೇಲೆ ಬಾವುಟಗಳನ್ನೇರಿಸಿ ಅವುಗಳನ್ನೆಲ್ಲಾ ಗಂಗಾನದಿಯಲ್ಲಿ ತೇಲಿಬಿಟ್ಟರು

೧೬-೧೭ ಆ ದೀಪದ ಮನೆ (ಕೂಟಾಗಾರ) ಗಳಿಗೆ ಹೊಕ್ಕು ಸೈನಿಕರೂ, ಭರತನೂ, ಅವನ ಪರಿವಾರವೂ ತಮ್ಮ ತಮ್ಮ ಮನಸ್ಸಿಗೆ ಬಂದ ಚಿತ್ರ ವಿಚಿತ್ರ ದೀಪ ಗಳನ್ನು ತೆಗೆದುಕೊಂಡು ಗಂಗೆಯಲ್ಲಿ ತೇಲಿಬಿಡುತ್ತಾ ಬಂದರು ಈ ದೀಪಮಾಲೆ ಗಳಿಂದಲಂಕೃತಳಾದ ಗಂಗಾದೇವಿಯು ತನ್ನ (ಗಂಗೆಯ) ದಡದಲ್ಲಿ ಪ್ರಕಾಶಮಾನ ವಾದ ಶರೀರವನ್ನು ಧರಿಸಿದವಳಾಗಿ ಆಕಾಶದಿಂದಿಳಿದು ಬಂದು ನಾಲಿಗೆಯಂ ನೀಡಿ ನೊರೆಯೆಂಬ ರಾಶಿಯ ರೂಪವಾಗಿ ನಕ್ಕು ಆ ದೀಪಮಾಲೆಗಳನ್ನು ಹಾಸ್ಯಮಾಡು ತ್ತಿರುವಂತೆ ತೋರುತ್ತಿತ್ತು

೧೮ ಆ ಮನೋಹರವಾದ ದೀಪಗಳು ಗಂಗೆಯಲ್ಲೆಲ್ಲಿಯೂ ತುಂಬಿ ಪ್ರಕಾಶ ವಾಗಿರುವುದನ್ನು ನೋಡಿದರೆ, ಗಂಗೆಯ ಅಲೆಗಳೊಡನೆ ಅವುಗಳು ಸೇರಿ ಎದ್ದದ್ದು ಕುಣಿಯುತ್ತಿರುವಂತೆ ತೋರುತ್ತಿತ್ತು ಗಂಗೆಯಲ್ಲಿ ದೀಪವೆಂಬ ಮರಗಳು ಪ್ರಕಾಶ ವಾಗಿ ಬೆಳೆದಿರುವಂತೆಯೂ ಕಾಣುತ್ತಲಿತ್ತು

ಏವಂ ಹಿ ಕ್ರೀಡತಾಂ ತತ್ರ ಗಂಗಾತೀರೇ ತಥಾ ನೃಣಾಂ ।
ರಾತ್ರಾವೇವಾಂಜಸಾ ಜಗ್ಮುಸ್ಸರ್ವೋ ಬಹುವಿಧಾ ನೃಪ ॥ ೧೯ ॥

ಶಶಾಂಕರಾಜಹಂಸೇನ ದೃಷ್ಟ್ವಾ ಖಸರಸೀಂ ಜನಾಃ ।
ಆಕ್ರಮ್ಯಮಾಣಾ ಸುಷುಪುರ್ನಿಶೀಥೇ ನಿದ್ರಯಾನ್ವಿತಾಃ ॥ ೨೦ ॥

ಶಶಾಂಕೋದಯಸಂಸುಪ್ತಬಲಂಪದ್ಮವನೋಪಮಂ ।
ನಿಬೋಧಯಾಮಾಸ ತಥಾ ದಿವಾಕರಕರೋತ್ಕರಂ ॥ ೨೧ ॥

ಚಕೃಷುಸ್ತೇ ತದಾ ನಾವಃ ಕರ್ಣಧಾರಾ ಯಥಾ ಸ್ವಕಾಃ ।
ಬಲಂ ಚ ಸಕಲಂ ಪಾರಂ ತಾರಯಾಂಚಕ್ರಿರೇ ತದಾ ॥ ೨೨ ॥

ನಾವಸ್ತಾಂ ಕಿಂಕಿಣೀಜಾಲೈಃ ಪತಾಕಾಭಿಶ್ಚ ರಾಜಿತಾಃ ।
ನಿನ್ಯುರ್ಬಲಂ ಪರಂ ಪಾರಂ ಕರ್ಣಧಾರಸ್ಫಿಗಾಹತಾಃ ॥ ೨೩ ॥

೧೯-೨೦ ಹೀಗೆ ಭರತನ ಪರಿವಾರವು ಗಂಗಾತೀರದಲ್ಲಿ ಬಹಳ ಹೊತ್ತು ದೀಪದ ಆಟವನ್ನಾಡುತ್ತಿದ್ದು, ನಾವಿಕರಿಂದ ತರಲ್ಪಟ್ಟ ಸಾವಿರಾರು ನೌಕೆಗಳನ್ನು ನೋಡಿ ತಮ್ಮ ಕೊಳಗಳಲ್ಲಿ ಮುಳುಗಿದ ರಾಜಹಂಸಗಳಂತೆ ನೌಕೆಗಳಲ್ಲಿ ಹತ್ತಿ ಕುಳಿತು ಕೊಂಡರು ಆಗ ಅರ್ಧರಾತ್ರಿಯು ಸಮಯವಾದ್ದರಿಂದ ಆಯಾಯ ನಾವೆಗಳಲ್ಲೇ ನಿದ್ದೆಯ ಸಂಕಟವನ್ನು ತಡೆಯಲಾರದೆ ಅವರು ಮಲಗಿಬಿಟ್ಟರು

೨೧ ಹಗಲೆಲ್ಲಾ ಬಿಸಿಲಿನಲ್ಲಿ ಆಯಾಸಪಟ್ಟು, ರಾತ್ರಿ ಬೆಳದಿಂಗಳಿನಲ್ಲಿ ಆ ನೌಕೆಗಳಲ್ಲಿ ಮಲಗಿದ್ದ ಶುಭ್ರವಸನಧಾರಿಗಳಾದ ಭರತನ ಸೈನಿಕರನ್ನು ನೋಡಿದರೆ, ಚಂದ್ರೋದಯ ಕಾಲದಲ್ಲಿ ಅರಳಿ ಹೂಬಿಟ್ಟ ಬಿಳಿದಾವರೆಯ ವನಗಳಂತೆ ಆ ಗಂಗಾ ನದಿಯು ತೋರುತ್ತಿತ್ತು

೨೨ ಅಂತಿರ್ಪ ಸೈನಿಕರ ಗುಂಪನ್ನೆಳೆದುಕೊಂಡು ವಿವಿಧ ನೌಕೆಗಳು ಗಂಗಾ ನದಿಯ ಮೇಲೆ ಪ್ರಯಾಣ ಬೆಳೆಸಿದುವು ನಾವಿಕರಿಂದ ನಡೆಸಲ್ಪಟ್ಟು ಆ ಚಿತ್ರ ವಿಚಿತ್ರ ನೌಕೆಗಳು ನೋಡು ನೋಡುತ್ತಿದ್ದ ಹಾಗೆಯೇ ಗಂಗೆಯ ಆಚೆಯ ದಡವನ್ನು ಸೇರಿದುವು.

೨೩ ಪ್ರತಿಯೊಂದು ದೋಣಿಯ ಮೇಲೂ ಬಾವುಟಗಳನ್ನು ಕಟ್ಟಿದ್ದರು ಕಿರುಗಂಟೆಗಳು ಪದೇ ಪದೇ ಸದ್ದುಮಾಡುತ್ತಿದ್ದುವು ನಾವಿಕರು ಹಳ್ಳಿಯ ಹಾಡು

**ಭಾಂಡೈಃ ಪೂರ್ಣಾಸ್ತಥಾ ಕಾಶ್ಚಿತ್ಕಾಶ್ಚಿತ್ಪೂರ್ಣಾ ಜನೇನಚ ।**
**ತುರಂಗಮೈಸ್ತಥಾ ಪೂರ್ಣಾ ಗೋಖರೋಷ್ಟ್ರೈಸ್ತಥಾ ಪರಾಃ ॥ ೨೪ ॥**

**ಕಾಶ್ಚಿತ್ಸಕುಂಜರಾ ನಾವೋ ಯಯುಃ ಪಾರಂ ತದಾ ಪರಂ ।**
**ತಥಾ ಪದ್ಮದಲಾಕ್ಷೀಣಾಂ ಸ್ತ್ರೀಣಾಂ ನಾವಶ್ಚ ಪೂರಿತಾಃ ॥ ೨೫ ॥**

**ವಿಮಾನಾಭಾಃ ಪ್ರದೃಶ್ಯಂತೇ ಗಂಗಾಂಭಸಿ ನರೇಶ್ವರ ।**
**ಕರ್ಣಧಾರವರೋಪೇತಾ ದಂಡಿಭಿಃ ಪುರುಷೈರ್ವೃತಾಃ ॥ ೨೬ ॥**

**ಲೋಕಸಂತಾರಣಾರ್ಥಾಯ ಭೂಯೋ ಜಗ್ಮುಸ್ತಥಾ ಪರಾಃ ।**
**ಚರ್ಮನೌಭಿಸ್ತಥಾ ಕೇಚಿತ್ಪ್ಲವೈಃ ಕೇಚಿತ್ಸುಯಂತ್ರಿತೈಃ ॥ ೨೭ ॥**

**ಜಗ್ಮುರಾದಾಯ ಭಾಂಡಾನಿ ದೃತಿಭಿಶ್ಚ ತಥಾ ಕ್ವಚಿತ್ ।**
**ನರ್ಯದ್ಯತಿಸಮಾರೂಢೈಃ ಕೃಷ್ಯಮಾಣಾಸ್ತುರಂಗಮಾಃ ॥ ೨೮ ॥**

---

ಗಳನ್ನು ಹೇಳುತ್ತಾ ಆಡುತ್ತಾ ಕೇಕೆ ಹಾಕುತ್ತಾ ಆನಂದತುಂದಿಲರಾಗಿ ಆ ಸಮಸ್ತ ನೌಕೆಗಳನ್ನೂ ಸ್ವಲ್ಪ ಹೊತ್ತಿನೊಳಗಾಗಿ ದಡಕ್ಕೆ ತಂದುಬಿಟ್ಟರು

೨೪ ಆ ಅನೇಕ ವಿಧ ನೌಕೆಗಳೊಳಗೆ ಕೆಲವು ನೌಕೆಗಳಲ್ಲಿ ಪಾತ್ರೆ ಪದಾರ್ಥ ಗಳನ್ನು ತುಂಬಿದ್ದರು ಕೆಲವು ನೌಕೆಗಳಲ್ಲಿ ಜನರು ಕುಳಿತಿದ್ದರು ಆನೆಗಳನ್ನು ಹಲವು ಹರಿಗಲಗಳ ಮೇಲೆ ಹತ್ತಿಸಿದ್ದರು ಕುದುರೆಗಳೂ, ಹಸುಗಳೂ, ಹೇಸರಗತ್ತೆ ಗಳೂ, ಒಂಟೆಗಳೂ, ನೂರಾರು ನೌಕೆಗಳ ಮೇಲೆ ಏರಿಸಲ್ಪಟ್ಟು ದಡಕ್ಕೆ ತಂದು ಬಿಡ ಲ್ಪಟ್ಟವು.

೨೬ ಆನೆಗಳನ್ನು ತುಂಬಿಕೊಂಡಿದ್ದ ನಾವೆಗಳೂ, ಹೆಂಗಸರ ಗುಂಪನ್ನು ಕುಳ್ಳಿರಿಸಿಕೊಂಡಿದ್ದ ನಾವೆಗಳೂ, ಆ ಗಂಗಾನದಿಯಲ್ಲಿ ವಿಮಾನಗಳು ಹೋಗುವಂತ ಕಾಣಿಸುತ್ತಿದ್ದವು ಸಮರ್ಥರಾದ ನಾವಿಕರೇ ಆ ನಿಶೀಥದಲ್ಲಿ ನೌಕೆಗಳನ್ನು ಸಿಧಾನ ವಾಗಿ ನಡೆಸಿದನು.

೨೭ ಈಚೆಯ ದಡದಲ್ಲಿ ಇನ್ನೂ ಜನರ ಗುಂಪು ಯಥೇಚ್ಛವಾಗಿ ಉಳಿದಿತ್ತು ಅವರನ್ನೂ ಸಹ ಇನ್ನೊಂದು ಬಾರಿ ದೋಣಿಗಳು ಬಂದು ಆಚೇ ದಡಕ್ಕೆ ಸೇರಿಸಿದುವು ಅವರೆಲ್ಲರೂ ಜಂಜಾಲು, ತೆಪ್ಪ, ದೋಣಿಗಳಲ್ಲಿ ಕುಳಿತು ಗಂಗೆಯನ್ನು ದಾಟಿದರು.

೨೮ ಕೆಲವರು ತಮ್ಮ ತಮ್ಮ ಸಾಮಾನುಗಳ ಉಸ್ತುವಾರಿಗಳಿಗಾಗಿ ಆ

ಜಗ್ಮುಃ ಕೇಚಿತ್ಪರಂ ಪಾರಂ ಬಾಹುಭಿರ್ಮನುಜೇಶ್ವರ।
ಜಗ್ಮುರನ್ಯೇ ಪರಂ ಪಾರಂ ಸಂಗೃಹೀತಾಶ್ಚ ರಶ್ಮಿಭಿಃ ॥ ೨೯ ॥

ನೌಸ್ಥೈರೇವ ಪರೈಃ ಶೀಘ್ರಂ ತುರಗಾ ನೃಪಬಾಹುಭಿಃ।
ಮಹಿಷಾಣಾಂ ಚ ಸಂಘಾನಿ ಗವಾಂ ಚ ಯದುನಂದನ ॥ ೩೦ ॥

ಜಗ್ಮುರ್ಗೋಪಾಲಕೈಃ ಸಾರ್ಧಂ ಪರಂ ಪಾರಂ ಚ ಬಾಹುಭಿಃ।
ಉಷ್ಟ್ರಗರ್ದಭಸಂಘಾನಿ ತಾರ್ಯಮಾಣಾನಿ ಬಾಹುಭಿಃ ॥ ೩೧ ॥

ಭೂಯೋಭೂಯೋ ನ್ಯವರ್ತಂತ ತತ್ರ ರಾವೋ ಮಹಾನಭೂತ್।
ತೀರ್ಣಸ್ಯ ತಾರ್ಯಮಾಣಸ್ಯ ಸರಸ್ಯ ಯದುಸತ್ತಮ ॥ ೩೨ ॥

ಆಸೀತ್ಕೋಲಾಹಲೋ ಘೋರಸ್ತೀರಯೋರುಭಯೋರಪಿ।
ಭರತೋಽಪಿ ಮಹಾತೇಜಾಃ ಸ್ನಾತೋ ಹುತಹುತಾಶನಃ ॥ ೩೩ ॥

ಸಾಮಾನುಗಳ ಜತೆಯಲ್ಲಿಯೂ, ರಾಜಪುತ್ರರು ತಮ್ಮ ತಮ್ಮ ಕುದುರೆಗಳ ಜತೆಯಲ್ಲಿಯೂ ಹಡಗನ್ನು ಹತ್ತಿ ಆಚೆಯ ದಡಕ್ಕೆ ಹೋದರು

೨೯-೩೧ ಕೆಲವರು ಆ ದೋಣಿಯ ಬಳಿಕಿನಲ್ಲಿ ಈಜಿಕೊಂಡೇ ಹೋದರು ಕೆಲವರು ತಮ್ಮ ತಮ್ಮ ಕುದುರೆಗಳನ್ನೂ, ಎಮ್ಮೆ ಹಸುಗಳನ್ನೂ ಹಿಡಿದುಕೊಂಡು ಅವುಗಳನ್ನು ಗಂಗೆಯಲ್ಲಿ ನಡೆಸಿಕೊಂಡು ಅವುಗಳ ಜತೆಯಲ್ಲಿ ಅವುಗಳಿಗೆ ಕಟ್ಟಿದ್ದ ಹಗ್ಗಗಳನ್ನು ಹಿಡಿದುಕೊಂಡು ಈಜಿಕೊಂಡೇ ಹೋದರು. ಇದರಂತೆ ಹೇಸರಗತ್ತೆಗಳೂ, ಒಂಟೆಗಳೂ ಈಜುವವರ ಜತೆಯಲ್ಲಿ ಈಜಿಕೊಂಡೇ ಹೋದವು

೩೨-೩೩ ಗಂಗೆಯನ್ನು ದಾಟುತ್ತಿರುವವರ, ದಾಟಲು ಕಾದಿರುವವರ, ದಾಟಿದವರ, ಗುಲ್ಲು ಬಹಳ ಹೆಚ್ಚಾಗಿ ದಿಕ್ಕುಗಳನ್ನೆಲ್ಲಾ ತುಂಬಿಕೊಂಡಿದ್ದಿತು ಹೀಗೆ ಎರಡು ದಡಗಳಲ್ಲಿಯೂ ಗಲಭೆಯು ಬಹಳ ಹೆಚ್ಚಾಗಿತ್ತು

ಭರತನು ಗಂಗೆಯನ್ನು ದಾಟುವುದಕ್ಕಿಂತ ಮುಂಚೆ ಗಂಗಾಸ್ನಾನಮಾಡಿ ಬಳಿಕ ಔಪಾಸನವನ್ನು ಮಾಡಿ, ಯಜ್ಞೇಶ್ವರನನ್ನು ಗಂಧಮಾಲ್ಯಾನುಲೇಪನಗಳಿಂದ ಪೂಜಿಸಿ ಪ್ರಾರ್ಥಿಸಿದವನಾಗಿ ನೌಕೆಯನ್ನು ಹತ್ತುವುದಕ್ಕಿಂತ ಮುಂಚಿತವಾಗಿ ಮತ್ಸ್ಯ

ಮತ್ಸ್ಯರೂಪಧರಂ ವಿಷ್ಣುಂ ತಟೇ ಸಂಪೂಜ್ಯ ಯಾದವ ।
ಸ್ವಸ್ತಿವಾಚ್ಯಾಂಸ್ತತೋ ವಿಪ್ರಾನ್ಗೋಭಿರ್ವಸ್ತ್ರೈರ್ಧನೇನ ಚ　　॥ ೩೪ ॥

ಸಂಪೂಜ್ಯ ಜಾಹ್ನವೀಂ ದೇವೀಂ ಗಂಧಮಾಲ್ಯಾನುಲೇಪನೈಃ ।
ಸಂಪೂಜಯಾಮಾಸ ತದಾ ಭೂಯ ಏವ ದ್ವಿಜೋತ್ತಮಾನ್　　॥ ೩೫ ॥

ಗೋಭಿರಶ್ವೈಸ್ತಥಾ ನಿಷ್ಕೈರ್ವಸ್ತ್ರೈರ್ಗಂಧೈಸ್ತಥೈವ ಚ ।
ಆರುರೋಹ ತದಾ ನಾವಂ ಪಾಂಡುಕಂಬಲಸಂವೃತಾಂ　　॥ ೩೬ ॥

ಕಿಂಕಿಣೀಜಾಲವಿತತಾಂ ಪತಾಕಾಧ್ವಜಮಾಲಿನೀಂ ।
ಭರತೇ ತು ಸಮಾರೂಢೇ ಕರ್ಣಧಾರಸ್ಸಿಗಾಹತಾ　　॥ ೩೭ ॥

ಜಗಾಮ ಸಾ ಪರಂ ಪಾರಂ ನೌರ್ವಿಮಾನೋಪಮಾ ನೃಪ ।
ಸಂಪ್ರಾಪ್ಯ ಸ ಪರಂ ಪಾರಂ ಸಂಪೂರ್ಣಕಟಕಸ್ತದಾ ।
ಉವಾಸ ರಾಜಂಸ್ತತ್ರೈವ ದಿವಿ ದೇವೇಶ್ವರೋ ಯಥಾ　　॥ ೩೮ ॥

ರೂಪಧಾರಿಯಾದ ಮಹಾವಿಷ್ಣುವನ್ನು ಪ್ರಾರ್ಥಿಸುತ್ತಾ, ಬ್ರಾಹ್ಮಣರು ಸ್ವಸ್ತಿವಾಚನ ಮಾಡುತ್ತಿರಲು ಅವರಿಗೆ ಗೋದಾನ, ವಸ್ತ್ರದಾನ, ಹಿರಣ್ಯದಾನ, ಭೂರಿ ದಕ್ಷಿಣೆಗಳ ನ್ನಿತ್ತು ಷೋಡಶೋಪಚಾರಗಳಿಂದ ಗಂಗಾ ಪೂಜೆಯನ್ನು ಮಾಡಿ, ರತ್ನಕಂಬಳಿ ಗಳನ್ನು ಹಾಸಿದ್ದ ಕಿರುಗಂಟೆಗಳಿಂದಲಂಕೃತವಾದ, ಹಾರಾಡುತ್ತಿರುವ ಬಾವುಟಗಳಿಂದ ಶೋಭಿಸುತ್ತಿರುವ ಸುಂದರವಾದ ನೌಕೆಯನ್ನು ಹತ್ತಿ ಕುಳಿತನು ಭರತನು ಕುಳಿ ತೊಡನೆ ಕರ್ಣಧಾರನು (ನಾವಿಕ) ಜಲದೊಳಗೆ ಜಳವೆಯನ್ನು ಹಾಕಿ ಜಲರಥವಂ ನಡೆಯಿಸಲಾರಂಭಿಸಿದನು

೩೮ ಆಕಾಶವಿಮಾನವನ್ನು ಹೋಲುತ್ತಿದ್ದ ಆ ನಾವೆಯು ಸ್ವಲ್ಪ ಹೊತ್ತಿ ನೊಳಗಾಗಿ ಆಚೆಯ ದಡವನ್ನು ಸೇರಿತು ಭರತನೂ ಭರತನ ಸಕಲ ಸೈನಿಕರೂ, ಪರಿಜನರೆಲ್ಲರೂ ಗಂಗೆಯನ್ನು ದಾಟಿದಂತಾಯಿತು ಆ ರೀತಿ ಎಲ್ಲರೂ ನದಿಯನ್ನು ದಾಟಿದೊಡನೆಯೇ ಭರತನು, ಸ್ವರ್ಗದಲ್ಲಿ ಇಂದ್ರನು ಪ್ರಕಾಶಿಸುವಂತೆ ಪ್ರಕಾಶಿಸುತ್ತಾ ಆ ನದೀತೀರದಲ್ಲಿ ಆ ರಾತ್ರಿಯನ್ನು ಕಳೆದನು

ದೇವೀಂ ಮಹಾದೇವಜಟಾತಟಸ್ಥಾಂ
ಶಶಾಂಕಸಂಸರ್ಗವಿವೃದ್ಧಶೀತಾಂ ।
ಉತ್ತೀರ್ಯ ರಾಜಾ ಭರತಃ ಸ ಚೈನಾಂ
ನಿನ್ಯೇ ಕ್ಷಯಂ ಶಕ್ರಸಮಪ್ರಭಾವಃ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಗಾವತರಣವರ್ಣನೋನಾಮ
ಷಡುತ್ತರ ದ್ವಿಶತತಮೋಽಧ್ಯಾಯಃ

೩೯ ಇಂದ್ರನಿಗೆ ಸರಿಸಮನಾದ ಪರಾಕ್ರಮವುಳ್ಳ ಭರತ ಮಹಾರಾಜನು ಮಹಾದೇವನ ಜಟಾಜೂಟದಿಂದಿಳಿದು ಭೂಮಿಗೆ ಬಂದ, ಚಂದ್ರನ ಬೆಳ್ದಿಂಗಳೊಡನೆ ಸೇರಿ ಬಹು ಶೀತಲವಾದ ನೀರನ್ನುಳ್ಳ ಗಂಗಾನದಿಯನ್ನು ದಾಟಿ ಆ ರಾತ್ರಿಯನ್ನು ಗಂಗಾತೀರದಲ್ಲಿಯೇ ಕಳೆದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಗಂಗೆಯನ್ನು ದಾಟುವ ವರ್ಣನೆಯೆಂಬ
ಹೆಸರಿನ ಇನ್ನೂರಾರನೆಯ ಅಧ್ಯಾಯವು
ಮುಗಿದುದು



ಶ್ರೀಃ

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತೋತ್ತರದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಭರತೇ ತು ಸಮುತ್ತೀರ್ಣೇ ಗಂಗಾಂ ಗಗನಮೇಖಲಾಂ ।
ವಿವೇಶ ಕಟಕಂ ತಸ್ಯ ತಮನ್ಯಃ ಕೌರವೋ ನೃಪ ॥ ೧ ॥

ಬಲೇನ ಚತುರಂಗೇಣ ಸಮುದ್ರಾಭೇನ ಸಂಯುತಃ ।
ಈಶ್ವರಶ್ಚ ಕಿರಾತಾನಾಂ ದಮನೋ ನಾಮ ಪಾರ್ಥಿವಃ ॥ ೨ ॥

ಹಸ್ತಿನಾಂ ಬಹುಸಾಹಸ್ರೈರ್ಬಲೈರ್ಯುಕ್ತೋ ವ್ಯದೃಶ್ಯತ ।
ಯಥಾರ್ಹಂ ಪೂಜಯಿತ್ವಾ ತಂ ಭರತೋ ಧರ್ಮವತ್ಸಲಃ ॥ ೩ ॥

---

### ಇನ್ನೂರೇಳನೆಯ ಅಧ್ಯಾಯವು.

೧-೨ ಮಾರ್ಕಂಡೇಯನು ಹೇಳುತ್ತಾನೆ —ಆಕಾಶವೆಂಬ ಡಾಬಿನಿಂದ ಅಲಂಕೃತಳಾದ ಗಂಗಾದೇವಿ (ನದಿ) ಯನ್ನು ಭರತನು ಸಪರಿವಾರನಾಗಿ ದಾಟಿದೊಡನೆಯೇ ಕುರುದೇಶದ ರಾಜನೂ ಕಿರಾತರೊಡನೆಯೂ ಆದ ದಮನನೆಂಬ ಸಾಮಂತ ರಾಜನು ಸಮುದ್ರದಂತೆ ಅಪಾರವಾದ ಚತುರಂಗ ಬಲದಿಂದಲೂ, ಸಹಸ್ರಾವಧಿ ಗಜ ಬಲದಿಂದಲೂ ಕೂಡಿದವನಾಗಿ ಭರತನ ಪಡೆಯೊಡನೆ ಸೇರಿಕೊಂಡನು

೩-೪ ದಮನನು ಸಸೈನ್ಯನಾಗಿ ಸಮೀಪಕ್ಕೆ ಬಂದುದನ್ನು ನೋಡಿ ಭರತನು ಪರಮಸಂತೋಷಭರಿತನಾಗಿ ಆ ರಾಜನನ್ನು ಯಥಾಯೋಗ್ಯವಾಗಿ ಪುಜೋಪಕರಣ

ಆಸಸಾದಾರ್ಕತನಯಾಂ ಯಮುನಾಂ ಪಾಪನಾಶಿನೀಂ ।
ಯಮಸ್ಯ ಭಗಿನೀಂ ಪುಣ್ಯಾಂ ನೀಲಮಾಲಾಂ ಮನೋಹರಾಂ ॥ ೪ ॥

ಯತ್ರ ಕ್ವಚನ ನದ್ಯಾಂ ಹಿ ಕೃತ್ವಾ ಶ್ರಾದ್ಧಂನರಾಧಿಪ ।
ಅಕ್ಷಯಂ ಫಲಮಾಪ್ನೋತಿ ನಾಕಪೃಷ್ಠೇ ಚ ಮೋದತೇ ॥ ೫ ॥

ಯತ್ರ ಕೃಷ್ಣಚತುರ್ದಶ್ಯಾಂ ಸ್ನಾತಃ ಸಂಪೂಜ್ಯ ಭಾನುಜಾಂ ।
ಮುಚ್ಯತೇ ಪಾತಕೈಃ ಸರ್ವೈರ್ನಾಕಲೋಕಂ ಸ ಗಚ್ಛತಿ ॥ ೬ ॥

ಅನರ್ಕಾಭ್ಯುದಿತೇ ಕಾಲೇ ಮಾಘಕೃಷ್ಣಚತುರ್ದಶೀಂ ।
ಯಸ್ಯಾಂ ಸ್ನಾತಸ್ತು ಸಂಪೂಜ್ಯ ಧರ್ಮರಾಜಂ ತಿಲಾಂಭಸಾ ॥ ೭ ॥

ಗಳಿಂದಾರಾಧಿಸಿ, ಅವನನ್ನೂ ಅವನ ಸೈನ್ಯವನ್ನೂ ಜತೆಯಲ್ಲಿ ತನ್ನ ಸೈನ್ಯದೊಡನೆ ಕೂಡಿಸಿಕೊಂಡವನಾಗಿ ಪಾಪವಿನಾಶಿನಿಯಾದ ಶಮನನ (ಯಮನ) ತಂಗಿಯಾದ ಯಮುನಾದೇವಿಯ (ನದಿ) ತೀರಕ್ಕೆ ಬಂದನು.

೫ ಆ ಯಮುನೆಯು ನೀರು ಬಹು ಕಪ್ಪಾಗಿ ಧಾರೆಧಾರೆಯಾಗಿ ಹರಿದು ಹೋಗುತ್ತಲಿರುವುದು. ಈ ಮಹಾನದಿಯಲ್ಲಿ ಯಾರು ಸ್ನಾನ, ದಾನ, ತೀರ್ಥ ಶ್ರಾದ್ಧಾದಿಗಳನ್ನು ಮಾಡುವರೋ ಆ ಪುಣ್ಯಾತ್ಮರೆಲ್ಲರೂ ಅಕ್ಷಯ ಫಲವನ್ನು ಹೊಂದುವರಲ್ಲದ ಸ್ವರ್ಗಸಾಮ್ರಾಜ್ಯವನ್ನು ನೊರೆಗೊಳ್ಳುತ್ತಾರ

೬ ಈ ಯಮುನಾನದಿಯಲ್ಲಿ ಯಾವ ಪುಣ್ಯಾತ್ಮರು ಮಾಘ ಬಹುಳ ಚತುರ್ದಶೀ ದಿವಸ ಸ್ನಾನಮಾಡುವರೋ ಅಂಥವರು ಸಕಲ ಪಾಪಗಳನ್ನೂ ಕಳೆದುಕೊಂಡು ಸ್ವರ್ಗಲೋಕವನ್ನು ಪ್ರವೇಶಿಸುತ್ತಾರೆ

೭ ಈ ಮಾಘ ಕೃಷ್ಣ ಚತುರ್ದಶೀ ದಿವಸ ಸೂರ್ಯನು ಹುಟ್ಟುವುದಕ್ಕಿಂತ ಮುಂಚೆ ಸೂರ್ಯನ ಮಗಳಾದ ಯಮುನೆಯಲ್ಲಿ ಸ್ನಾನಮಾಡಿದವರಾಗಿ ಯಾರು ಈಕೆಯ ಅಣ್ಣನಾದ ಯಮಧರ್ಮರಾಯನನ್ನು ಪೂಜೆಮಾಡಿ ತಿಲತರ್ಪಣವನ್ನು ಮಾಡುತ್ತಾರೋ ಅವರಿಗೆ ನರಕಪ್ರವೇಶವಿಲ್ಲವೇ ಇಲ್ಲ

ನ ದುರ್ಗತಿಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ।
ಯತ್ರ ಕ್ವಚನ ನದ್ಯಾಂ ಹಿ ಮಾಘಕೃಷ್ಣಚತುರ್ದಶೀಂ ॥ ೮ ॥

ನಾದೇಯಾಂಭಸಿ ಸರ್ವಸ್ಮಿನ್ ಸ್ನಾತಃ ಪಾಪೈರ್ವಿಮುಚ್ಯತೇ ।
ಯಮುನಾ ತು ವಿಶೇಷೇಣ ಯಮಸ್ಯ ಭಗಿನೀತಿ ಸಾ ॥ ೯ ॥

ಸ್ನಾತಶ್ಚ ಯಾಮುನೇ ತೋಯೇ ಸಂತರ್ಪ್ಯ ಪಿತೃದೇವತಾಃ ।
ನ ದುರ್ಗತಿಮವಾಪ್ನೋತಿ ನಾಕಲೋಕಂ ಚ ಗಚ್ಛತಿ ॥ ೧೦ ॥

ತಾಂ ಸಮಾಸಾದ್ಯ ಯಮುನಾಂ ಯಥಾ ಗಂಗಾಜಲಂ ತಥಾ ।
ವಿಹೃತ್ಯ ಭರತಸ್ತದ್ವದುತ್ತತಾರ ಮಹಾನದೀಂ ॥ ೧೧ ॥

ಸಮುತ್ತೀರ್ಣಸ್ಯ ಯಮುನಾಂ ಭರತಸ್ಯ ಮಹಾತ್ಮನಃ ।
ವಿವೇಶ ಕಟಕಂ ರಾಜಾ ಮತ್ಸ್ಯಾನಾಂ ಸುರಥಸ್ತಥಾ ॥ ೧೨ ॥

ಗೌರಸೇನಶ್ಚ ಸಾಲ್ವಾನಾಂ ಶಿಬೀನಾಂ ಚ ಪ್ರಭದ್ರಕಃ ।
ಸ ತೈರ್ನೃಪತಿಭಿಃ ಸಾರ್ಧಂ ಕುರುಕ್ಷೇತ್ರಮುಪಾಯಯೌ ॥ ೧೩ ॥

---

೮-೯ ಅವರಿಗೆ ದುರ್ಗತಿಯೂ ಇಲ್ಲ ಅಂಥವರು ತಮ್ಮ ಕುಲವನ್ನೇ ಉದ್ಧರಿಸುತ್ತಾರೆ ಯಮುನಾನದಿ ಹರಿಯುವ ಯಾವ ಸ್ಥಳದಲ್ಲಿಯೇ ಆಗಲಿ ಯಮನ ಸಹೋದರಿಯಾದ ಈ ನದಿಯಲ್ಲಿ ಮಾಘ ಬಹುಳ ಚತುರ್ದಶಿಯ ದಿವಸ ಸ್ನಾನಮಾಡಿದವರು ಸಕಲ ಪಾಪಗಳನ್ನೂ ಕಳೆದುಕೊಳ್ಳುತ್ತಾರೆ.

೧೦-೧೩ ಯಮುನಾನದೀ ಸ್ನಾನದಿಂದಲೂ, ಆದರ ತೀರದಲ್ಲಿ ಮಾಡಿದ ಪಿತೃಶ್ರಾದ್ಧದಿಂದಲೂ ಸ್ವರ್ಗಲೋಕವು ಪ್ರಾಪ್ತಿಯಾಗುವುದು ಇಂತಹ ಮಹಾ ಮಹಿಮೆಯುಳ್ಳ ನದಿಯನ್ನು ಭರತನೂ ಅವನ ಸೈನಿಕರೂ ಗಂಗಾನದಿಯನ್ನು ದಾಟಿದಂತೆಯೇ ದಾಟಿಕೊಂಡು ದಡಕ್ಕೆ ಬಂದು ಸೇರಿದರು ಯಮುನಾನದಿಯನ್ನು ದಾಟಿದೊಡನೆಯೇ ಭರತನ ಸೈನ್ಯದ ಜತೆಗೆ ಮತ್ಸ್ಯದೇಶದ ರಾಜನಾದ ಸುರಥನೂ, ಸಾಲ್ವ ರಾಜನಾದ ಗೌರಸೇನನೂ, ಶೈಬ್ಯದೇಶದ ರಾಜನಾದ ಪ್ರಭದ್ರಕನೂ ಭರತನ ಸೈನ್ಯದೊಡನೆ ಕೂಡಿಕೊಂಡು ಕುರುಕ್ಷೇತ್ರವನ್ನು ಪ್ರವೇಶಿಸಿದರು.

ಯದರ್ಥಮೇಷಾ ಚರತಿ ಲೋಕೇ ಗಾಥಾ ಪುರಾತನೀ ।
ಪಾಂಸವೋಽಪಿ ಕುರುಕ್ಷೇತ್ರೇ ವಾಯುನಾ ಸಮುದೀರಿತಾಃ ॥ ೧೪ ॥

ಅಪಿ ದುಷ್ಕೃತಕರ್ಮಾಣೋ ನಯಂತಿ ಪರಮಾಂ ಗತಿಂ ।
ಸಮಂತಪಂಚಕೇ ಪುಣ್ಯೇ ಯೇ ಮೃತಾ ಮನುಜೇಶ್ವರ ॥ ೧೫ ॥

ತೇ ಸರ್ವೇ ನಾಕಮಾಸಾದ್ಯ ರಾಜಂತೇ ದಿವಿ ದೇವವತ್ ।
ಸಂನೀತಿರ್ಯಸ್ಯ ರಾಜೇಂದ್ರ ತೀರ್ಥಂ ತ್ರೈಲೋಕ್ಯವಿಶ್ರುತಂ ॥ ೧೬ ॥

ತೀರ್ಥಸನ್ನಯನಾದೇವ ಸಂನೀತಿರಿತಿ ವಿಶ್ರುತಂ ।
ಪೃಥಿವ್ಯಾಂ ಯಾನಿ ತೀರ್ಥಾನಿ ಆಸಮುದ್ರಸರಾಂಸಿ ಚ ॥ ೧೭ ॥

ಮಾಸಾಂತೇ ಸತತಂ ತತ್ರ ನಿತ್ಯಮಾಯಾಂತಿ ಯಾದವ ।
ತತ್ರ ಶ್ರಾದ್ಧಂ ತು ಯಃ ಕುರ್ಯಾದ್ರಾಹುಗ್ರಸ್ತೇ ದಿವಾಕರೇ ॥ ೧೮ ॥

ಅಶ್ವಮೇಧಶತಸ್ಯಾಗ್ರ್ಯಂ ಫಲಂ ವಿಂದತಿ ಮಾನವಃ ।
ಭರತಸ್ತು ಸಮಾಸಾದ್ಯ ತತ್ರೋವಾಸ ಸುಖೀ ತದಾ ॥ ೧೯ ॥

---

೧೪-೨೦. ಇದಕ್ಕಾಗಿಯೇ ಲೋಕದಲ್ಲಿ ಒಂದು ಗಾದೆ ಹುಟ್ಟಿದೆ ಕುರುಕ್ಷೇತ್ರದ ಧೂಳು ಯಾರ ದೇಹದ ಮೇಲೆ ಬೀಳುವುದೋ ಅಂತಹ ಮನುಷ್ಯನು ಎಂತಹ ಪಾಪಿಯೇ ಆಗಿರಲಿ, ಅವನು ಪುಣ್ಯಲೋಕವನ್ನು ಹೊಂದುತ್ತಾನೆ ಕಾಶಿ, ಗಯ, ಪ್ರಯಾಗ, ಅಯೋಧ್ಯ, ಕುರುಕ್ಷೇತ್ರಗಳೆಂದು ಪ್ರಸಿದ್ಧವಾದ ಈ ಐದು ಪುಣ್ಯಭೂಮಿಗಳಲ್ಲಿ ಯಾರು ದೇಹತ್ಯಾಗಮಾಡುವರೋ ಅವರಲ್ಲರೂ ಮಹಾಪುಣ್ಯ ಲೋಕಗಳಿಗೆ ಪ್ರವೇಶಿಸುವರು

ಮೂರು ಲೋಕದಲ್ಲಿಯೂ ಪ್ರಸಿದ್ಧಹೊಂದಿದ ಸನ್ನೀತಿಯೆಂಬ ತೀರ್ಥವು ಈ ಕುರುಕ್ಷೇತ್ರದಲ್ಲಿದೆ ಎಲ್ಲ ತೀರ್ಥಗಳೂ ಆನಯನ (ತರೋಣ) ಮಾಡಲ್ಪಡುವುದರಿಂದ ಸನ್ನೀತಿಯೆಂಬ ಹೆಸರು ಬಂದಿದೆ. ಭೂಲೋಕದಲ್ಲಿ ಆ ಸಮುದ್ರಪರ್ಯಂತವಾಗಿ ಎಷ್ಟೆಷ್ಟು ಪವಿತ್ರ ಪುಣ್ಯ ತೀರ್ಥಗಳಿವೆಯೋ ಆಪರಮಪಾವನವಾದ ತೀರ್ಥಗಳೆಲ್ಲವೂ ಪ್ರತಿ ತಿಂಗಳ ಕೊನೆಯಲ್ಲೂ ಇಲ್ಲಿಗೆ ಬಂದು ಸೇರಿಕೊಳ್ಳುತ್ತವೆ ಸೂರ್ಯೋಪರಾಗ (ಸೂರ್ಯಗ್ರಹಣ) ಪುಣ್ಯಕಾಲದಲ್ಲಿ ಈ ಕುರುಕ್ಷೇತ್ರದಲ್ಲಿ ಯಾರು ಶ್ರಾದ್ಧವನ್ನು ಮಾಡುವರೋ ಅವರು ಒಂದು ನೂರು ಅಶ್ವಮೇಧಯಾಗ ಮಾಡಿದ ಫಲವನ್ನು

ಪಪ್ರಚ್ಛ ಬ್ರಾಹ್ಮಣಾಂಸ್ತತ್ರ ತೀರ್ಥಸನ್ನೀತಿಕಾರಣಂ ।
ಪೃಷ್ಟಸ್ತು ಭರತೇನಾಥ ಬ್ರಾಹ್ಮಣಸ್ತು ಘಟೋದರಃ ॥ ೨೦ ॥

ಉವಾಚ ಭರತಂ ತತ್ರ ಕಥಾಂ ಪಾಪಪ್ರಣಾಶಿನೀಂ ।

॥ ಘಟೋದರ ಉವಾಚ ॥

ಶಕ್ರೇ ವೃತ್ರವಧಾಕ್ರಾಂತೇ ತ್ರೈಲೋಕ್ಯೇ ದೈತ್ಯಸಾದ್ಗತೇ ॥ ೨೧ ॥

ಸಬ್ರಹ್ಮಕಾಃ ಸುರಾಃ ಸರ್ವೇ ವಿಷ್ಣುಂ ಶರಣಮಾಯಯುಃ ।
ತಾನುವಾಚ ಹರಿರ್ದೇವಶ್ಚ್ಯವನಸ್ಯಾತ್ಮಸಂಭವಃ ॥ ೨೨ ॥

ಭಾರ್ಗವೋ ಬ್ರಾಹ್ಮಣಃ ಶ್ರೀಮಾನ್ ದಧೀಚ ಇತಿ ವಿಶ್ರುತಃ ।
ಅಸ್ಥಿಭಿಃ ಕ್ರಿಯತಾಂ ತಸ್ಯ ದೇವೇಂದ್ರಸ್ಯ ವರಾಯುಧಂ ॥ ೨೩ ॥

ಪ್ರವಿಶ್ಯ ದೇವಾಂಸ್ತತ್ರಾಹಂ ಹಂತಾ ವೃತ್ರಮಸಂಶಯಂ ।
ಏವಮುಕ್ತಾಃ ಸುರಾಃ ಸರ್ವೇ ದಧೀಚಸ್ಯಾಶ್ರಮಂ ಯಯುಃ ॥ ೨೪ ॥

ಹೋದುತ್ತಾರೆ. ಇಂತಹ ಮಹಾಪುಣ್ಯಕ್ಷೇತ್ರವಾದ ಕುರುಕ್ಷೇತ್ರಕ್ಕೆ ಭರತನು ಸಂಚಾರನಾಗಿ ಬಂದು ಒಂದು ದಿನ ಅಲ್ಲಿ ಉಳಿದುಕೊಂಡು ವಿಶ್ರಾಂತಿಯನ್ನು ಹೊಂದಿದನು.

ಕುರುಕ್ಷೇತ್ರದಲ್ಲಿ ತಂಗಿದ್ದ ಸಮಯದಲ್ಲಿ ಅಲ್ಲಿಯ ತೀರ್ಥಕ್ಷೇತ್ರವಾಸಿಗಳನ್ನು ಕುರಿತು ಭರತನು ಈ ಕುರುಕ್ಷೇತ್ರದ ಮಹಿಮೆಯೇನೆಂದು ಕೇಳಲು ಘಟೋದರನೆಂಬ ಕ್ಷೇತ್ರವಾಸೀ ಬ್ರಾಹ್ಮಣನು ಕುರುಕ್ಷೇತ್ರದ ವಿಚಾರವಾಗಿ ಬಹು ಕಾಲದಿಂದ ಜನರು ಹೇಳುತ್ತಿರುವ ಒಂದು ಪುಣ್ಯಕರವಾದ ಕಥೆಯನ್ನು ಹೇಳಿದನು

೨೧-೨೪ ಘಟೋದರನು ಹೇಳಿದ ಕಥೆಯೇನೆಂದರೆ --ಇಂದ್ರನು ವೃತ್ರಾಸುರವಧಾನುಸಂಧಾನದಲ್ಲಿರುವಾಗ, ತ್ರಿಲೋಕವೂ ರಾಕ್ಷಸರ ಅಧೀನವಲ್ಲಿದ್ದಾಗ, ಬ್ರಹ್ಮಾದಿದೇವತೆಗಳೆಲ್ಲರೂ ಮಹಾವಿಷ್ಣುವನ್ನು ಮರೆಹೊಕ್ಕರು ಆಗ ಬ್ರಹ್ಮಾದಿಗಳನ್ನು ಕುರಿತು ಮಹಾವಿಷ್ಣುವು ಇಂತೆಂದನು —ಎಲೈ ದೇವತೆಗಳಿರಾ! ಭೃಗುವಂಶೋತ್ಪನ್ನನಾದ ಚ್ಯವನನ ಮಗ ದಧೀಚನೆಂಬ ಪ್ರಸಿದ್ಧನಾದ ಮಹಾತಪಸ್ವಿಯಾದ ಬ್ರಾಹ್ಮಣನೊಬ್ಬನಿದ್ದಾನೆ ಅವನ ಮೂಳೆಗಳಿಂದ ವಜ್ರಾಯುಧವನ್ನು ಮಾಡಿ ದೇವೇಂದ್ರನಿಗೆ ಕೊಟ್ಟು ಅದರಿಂದ ಈ ವೃತ್ರನನ್ನು ಕೊಲ್ಲಬೇಕೇ ಹೊರತು ಬೇರೆ

ದದೃಶುಶ್ಚ ಮಹಾಭಾಗಂ ದಧೀಚಂ ತಪಸಾಂ ನಿಧಿಂ ।
ಪೂಜಯಿತ್ವಾ ಮಹಾಭಾಗಂ ತಮೂಚುಃ ಸಂಹತಾಃ ಸುರಾಃ ॥ ೨೫ ॥

ತ್ವದಸ್ಥಿಭಿಃ ಕರಿಷ್ಯಾಮೋ ವಜ್ರಂ ದೈತ್ಯನಿಬರ್ಹಣಂ ।
ಅನ್ಯಾನಿ ಚ ತಥಾಽಸ್ತ್ರಾಣಿ ಸುರಕಾರ್ಯಾರ್ಥಸಿದ್ಧಯೇ ॥ ೨೬ ॥

ತತ್ರ ತ್ವಂ ದೇವಕಾರ್ಯಾರ್ಥಂ ಸನ್ನ್ಯಾಸಂ ದ್ವಿಜರೋಚಯ ।
ಏವಮುಕ್ತೋ ದಧೀಚಸ್ತು ಪ್ರತ್ಯುವಾಚ ಸ ತಾನ್ಸುರಾನ್ ॥ ೨೭ ॥

ತೀರ್ಥಯಾತ್ರಾ ಪ್ರತಿಜ್ಞಾತಾ ಸರ್ವತೀರ್ಥೇಷು ವೈ ಮಯಾ ।
ತಾಂ ತು ಕೃತ್ವಾ ಕರಿಷ್ಯಾಮಿ ದೇಹನ್ಯಾಸಂ ಸುರೋತ್ತಮಾಃ ॥ ೨೮ ॥

॥ ದೇವಾ ಊಚುಃ ॥

ಶಕ್ತಸ್ತ್ವಂ ಸರ್ವತೀರ್ಥಾನಾಮಾಹ್ವಾನೇ ದ್ವಿಜಪುಂಗವ ।
ಇಹಾದ್ಯೈವ ಸಮಾಯಾಂತು ಸರ್ವತೀರ್ಥಾನಿ ತೇಽನಘ ॥ ೨೯ ॥

---

ವಿಧದಿಂದ ಇವನು ಸಾಯುವುದಿಲ್ಲ ಆದುದರಿಂದ ನೀವೆಲ್ಲರೂ ದಧೀಚಿಋಷಿಯ ಆಶ್ರಮಕ್ಕೆ ಈಗಲೇ ಹೋಗಿರೆನಲು, ಭಗವಂತನ ಮಾತಿನಂತೆ ದೇವತೆಗಳೆಲ್ಲರೂ ದಧೀಚರ ಆಶ್ರಮದ ಬಳಿಗೆ ಬಂದರು

೨೫-೨೮ ಆ ಆಶ್ರಮದಲ್ಲಿ ತಪಸ್ಸಿನಲ್ಲಿದ್ದ ದಧೀಚಿಋಷಿಯನ್ನು ಕಂಡು ಪೂಜಿಸಿ ಸಕಲ ದೇವತೆಗಳೂ ಇಂತು ಪ್ರಾರ್ಥಿಸಿದರು.— ಸ್ವಾಮಿ, ವಜ್ರದಂತೆ ದೃಢವಾದ ನಿಮ್ಮ ಶರೀರದ ಮೂಳೆಗಳಿಂದ ವೃತ್ರಾಸುರ ಸಂಹಾರಕ್ಕಾಗಿ ಆಯುಧಗಳನ್ನು ಮಾಡಿ ಆ ವೃತ್ರನನ್ನು ಕೊಲ್ಲಬೇಕೇ ಹೊರತು ಅನ್ಯಥಾ ವೃತ್ರನು ಸಾಯುವಂತಿಲ್ಲವಾದುದರಿಂದ ನೀವು ದೇವತಾಕಾರ್ಯಕ್ಕಾಗಿ ನಿಮ್ಮ ದೇಹವನ್ನು ತ್ಯಾಗಮಾಡಿ ಅದನ್ನು ನಮಗೆ ಕೊಡಬೇಕೆಂದು ಪ್ರಾರ್ಥಿಸಲು, ದಧೀಚರಿಂತೆಂದರು ,—ಎಲೈ ದೇವತೆಗಳಿರಾ, ನಾನು ಸಕಲ ತೀರ್ಥಗಳಿಗೂ ಹೋಗಿ ಯಾತ್ರೆಮಾಡಿಕೊಂಡು ಬರಬೇಕೆಂದು ಸಂಕಲ್ಪಿಸಿದ್ದೇನೆಯಾದುದರಿಂದ, ಸಕಲ ತೀರ್ಥಯಾತ್ರೆಗಳನ್ನೂ ಮಾಡಿಕೊಂಡು ಬಂದನಂತರ ಈ ದೇಹವನ್ನು ತ್ಯಾಗಮಾಡಿ ನಿಮಗೆ ಕೊಡುತ್ತೇನೆಂದು ಹೇಳಿದನು

೨೯ ದೇವತೆಗಳು ದಧೀಚರೊಡನೆ ಹೇಳಿದರು —ಎಲೈ ಋಷಿಪ್ರವರನೇ !

ತೇಜಸಾ ಚ ತ್ವದೀಯೇನ ತಥಾಽಸ್ಮಾಕಂ ಚ ಭಾರ್ಗವ ।

॥ ಘಟೋದರ ಉವಾಚ ॥

ಏವಮುಕ್ತಃ ಸುರೈಃ ಸರ್ವೈಸ್ತೀರ್ಥಾನಿ ಸರಿತಸ್ತಥಾ ॥ ೩೦ ॥

ಸರಾಂಸಿ ಚ ಸಮುದ್ರಾಶ್ಚ ತತ್ರಾಜಗ್ಮುರ್ನರಾಧಿಪ ।

ಕಾಮ್ಯೇನ ಮಹತಾ ರಾಜನ್ಯೋಗೇನ ಪರಮೇಣ ಚ ॥ ೩೧ ॥

ಜ್ಞಾತ್ವಾ ಚ ತೇಷಾಂ ಸಾನ್ನಿಧ್ಯಂ ತತ್ರ ಸ್ನಾತೋ ದ್ವಿಜೋತ್ತಮಃ ।

ತರ್ಪಣಂ ಚ ತಥಾ ಕೃತ್ವಾ ಸುರಾಣಾಂ ಪಿತೃಭಿಃ ಸಹ ॥ ೩೨ ॥

ಉವಾಚ ದೇವಾಂಸ್ತತ್ರಸ್ಥಾನಿದಂ ವಚನಮುಬ್ರವೀತ್ ।

॥ ದಧೀಚ ಉವಾಚ ॥

ಅದ್ಯ ಪ್ರಭೃತಿ ಮಾಸಾಂತೇ ಭವದ್ಭಿಃ ಸತತಂ ಸುರಾಃ ॥ ೩೩ ॥

---

ಸಕಲ ಭೂಮಂಡಲದಲ್ಲಿರುವ ತೀರ್ಥಗಳನ್ನೆಲ್ಲಾ ಇಲ್ಲಿಗೇ ಬರಮಾಡಿಕೊಳ್ಳಲು ನಿನಗೆ ಶಕ್ತಿಯಿದೆ. ಆದ್ದರಿಂದ ನಿನ್ನ ತೇಜಃಪುಂಜವಾದ ತಪೋಬಲದಿಂದಲೂ ನಮ್ಮ ತೇಜೋಬಲದಿಂದಲೂ ಸಕಲ ತೀರ್ಥಗಳೂ ನಾವಿದ್ದಲ್ಲಿಗೇ ಒರುವುವೆಂದು ಹೇಳಿದರು.

೩೦ ಘಟೋದರನು ಭರತನಿಗೆ ಹೇಳುತ್ತಾನೆ —ಸಕಲ ದೇವತೆಗಳ ಮಹಿಮೆಯಿಂದಲೂ ದಧೀಚಿಋಷಿಗಳ ತಪೋಬಲದಿಂದಲೂ ಆವಾಹಿತರಾದ ಸಕಲ ತೀರ್ಥರಾಜರೂ ಕುರುಕ್ಷೇತ್ರಕ್ಕೆ ಬಂದು ಸನ್ನಿಹಿತರಾದರು. ಈ ವೃತ್ತಾಂತವು ಜ್ಞಾನದೃಷ್ಟಿಯಿಂದ ದಧೀಚರಿಗೆ ಗೋಚರವಾಗಲು ಆ ಕೂಡಲೆ ಅವರು ಆ ಸಕಲ ತೀರ್ಥವಾದ ಆ ಸನ್ನೀತಿಸರಸ್ಸಿನಲ್ಲಿ ಮಿಂದು ದೇವಋಷಿಪಿತೃಗಳಿಗೆ ತರ್ಪಣಗಳನ್ನು ಕೊಟ್ಟು ಕೃತಾರ್ಥರಾದರು. ಆ ಬಳಿಕ ದಧೀಚರು ಅಲ್ಲಿ ಸನ್ನಿಹಿತರಾಗಿ, ಇಂದ್ರನ ಕಾರ್ಯಕ್ಕಾಗಿ ಸೊಂಟ ಕಟ್ಟಿನಿಂತಿದ್ದ ಸಕಲ ದೇವತೆಗಳನ್ನೂ ಕುರಿತಿಂತು ಹೇಳಿದರು —

೩೩. ದಧೀಚರು ಹೇಳಿದುದೇನೆಂದರೆ —ಎಲೈ ದೇವತೆಗಳಿರಾ! ಇನ್ನು ಮುಂದೆ ನೀವೆಲ್ಲರೂ (ಸಕಲ ದೇವತೆಗಳೂ) ಪ್ರತಿ ತಿಂಗಳ ಕಡೇ ಭಾಗದಲ್ಲಿ ಈ ಕ್ಷೇತ್ರಕ್ಕೆ ಬಂದು ಈ ಸನ್ನೀತಿ ತೀರ್ಥದಲ್ಲಿ ಸನ್ನಿಹಿತರಾಗಿ ಸ್ನಾತರಾದ ಸಜ್ಜನರಿಗೆ ಸದ್ಗತಿಯನ್ನೂ, ಶರೀರಾವಸಾನದಲ್ಲಿ ಸರ್ವದಾ ಸ್ವರ್ಗವಾಸವನ್ನೂ ಕೊಡಬೇಕು.

**ಸಾನ್ನಿಧ್ಯಮಿಹ ಕರ್ತವ್ಯಂ ತೀರ್ಥೈಶ್ಚೈವ ಯಥಾಗತೈಃ ।**
**॥ ಘಟೋದರ ಉವಾಚ ॥**
**ಏವಮುಕ್ತೈಸ್ತಥೇತ್ಯುಕ್ತೋ ದೇವೈಸ್ತೀರ್ಥೈಶ್ಚ ಸ ತ್ವಥ ॥ ೩೪ ॥**

**ತ್ಯಕ್ತ್ವಾ ದೇಹಂ ದಿವಂ ಯಾತೋ ದಧೀಚಃ ಸ್ವೇನ ತೇಜಸಾ ।**
**ವಿಶ್ವಕರ್ಮಾ ಚ ತಸ್ಯಾಸ್ಥ್ನಾಂ ಭಾಗೈರ್ವಜ್ರಮಥಾಕರೋತ್ ॥ ೩೫ ॥**

**ಆಯುಧಾನಿ ಚ ದೇವಾನಾಂ ತಥೈವ ಚ ಪೃಥಕ್ಪೃಥಕ್ ।**
**ತೇನ ವಜ್ರೇಣ ಮಹತಾ ವೃತ್ರಂ ಹತ್ವಾ ಮಹಾಸುರಂ ॥ ೩೬ ॥**

**ಜಘಾನ ದೈತ್ಯಮುಖ್ಯಾನಾಂ ನವತಿರ್ನವತಿಸ್ತಥಾ ।**
**ತತಃ ಪ್ರಭೃತಿ ಮಾಸಾಂತೇ ನಿತ್ಯಮೇವ ರಘೂದ್ವಹ ॥ ೩೭ ॥**

೩೪ ಘಟೋದರನು ಭರತನಿಗೆ ಹೇಳುತ್ತಾನೆ --ಎಲೈ ಭರತನೇ, ಈ ಕ್ಷೇತ್ರದ ಮತ್ತು ಈ ತೀರ್ಥದ ಮಹಿಮೆಯನ್ನು ಕೇಳಿದೆಯಾ ? ಈ ಪ್ರಕಾರವಾಗಿ ಹೇಳಿದ ದಧೀಚರ ಮಾತಿನಂತೆ ದೇವತೆಗಳೂ, ತೀರ್ಥರಾಜರೂ ಸಹ ಹಾಗೆಯೇ ಆಗಲೆಂದು ಒಪ್ಪಿಕೊಂಡರು ಇಷ್ಟು ಸಂಗತಿ ಬೆಳೆದ ಮೇಲೆ ದಧೀಚರು ಇಚ್ಛಾ ಮರಣದಿಂದ ಆ ದೇಹವನ್ನು ತ್ಯಾಗಮಾಡಿ ದಿವ್ಯದೇಹವಂ ಧರಿಸಿ ಸ್ವರ್ಗಕ್ಕೆ ಪ್ರಯಾಣ ಬೆಳೆಸಿದರು

೩೫-೩೬ ಆ ಬಳಿಕ ದೇವತೆಗಳು ದೇವಲೋಕದ ಬಡಗಿಯಾದ ವಿಶ್ವಕರ್ಮ ನನ್ನು ಕರೆದು ದಧೀಚಿಋಷಿಗಳ ದೇಹದ ಮೂಳೆಗಳನ್ನೆಲ್ಲಾ ಸರಿಯಾಗಿ ಹದವಾಗಿ ಕೊಯ್ದು ಆಯುಧಗಳನ್ನೂ ವಜ್ರಾಯುಧವನ್ನೂ ಮಾಡಿಕೊಡುವಂತೆ ಕೇಳಿಕೊಂಡರು. ಅದರಂತೆ ಆ ದೇವಶಿಲ್ಪಿಯು ವಜ್ರಾಯುಧವನ್ನೂ ದೇವತೆಗಳ ಇಷ್ಟಾನುಸಾರವಾಗಿ ಬೇರೆಬೇರೆಯಾಗಿ ಅವರಿಗೆ ಬೇಕಾದ ಆಯುಧಗಳನ್ನೂ ಆ ಋಷಿಯ ಎಲುಬಿನಿಂದ ರಚನೆಮಾಡಿದನು ಈ ವಿಧವಾಗಿ ಮಾಡಿದ ವಜ್ರಾಯುಧದಿಂದ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿ ಲೋಕಕ್ಷೇಮವನ್ನುಂಟುಮಾಡಿದನು

೩೭ ಆ ವೃತ್ರನ ಸೈನ್ಯದಲ್ಲಿದ್ದ ಮುಖ್ಯ ಮುಖ್ಯ ಸೇನಾನಾಯಕರಾದ ರಾಕ್ಷಸರನ್ನು ತೊಂಭತ್ತು ತೊಂಭತ್ತು ಜನಗಳಾಗಿ ವಿಂಗಡಿಸಿಕೊಂಡು ಆ ಮಹೇಂದ್ರನು ಆ ಅಸುರಸೈನ್ಯದ ಅಸುವನ್ನೆಲ್ಲಾ ಹೀರಿ ಗತಾಸುಗಳನ್ನಾಗಿಮಾಡಿದನು

ಸಾನ್ನಿಧ್ಯಮಿಹ ತೀರ್ಥಾನಾಂ ದೇವತಾನಾಂ ಚ ಕಲ್ಪಿತಂ ।
॥ ಮಾರ್ಕಂಡೇಯ ಉವಾಚ ॥
ಏತಚ್ಛ್ರುತ್ವಾ ಮಹಾತೇಜಾ ದತ್ವಾ ದಾನಾನಿ ರಾಘವಃ ॥ ೩೮ ॥

ಯಯೌ ಸೈನ್ಯೇನ ಮಹತಾ ಭರತೋಽಮರಕಂಟಕಂ ।
ತತ್ರ ವಿಷ್ಣುಸದಂ ಪ್ರಾಪ್ಯ ಪೂಜಯಿತ್ವಾ ಚ ರಾಘವಃ ॥ ೩೯ ॥

ಆಸಸಾದ ನದೀಂ ಗೌರೀಂ ಪುಣ್ಯಾಂ ಪಾಪಭಯಾಪಹಾಂ ।
ವಿಶ್ವಾಮಿತ್ರಾಜ್ಞಯಾ ರಕ್ಷಃ ಪ್ರವಿವೇಶ ಪುರಾ ನೃಪಂ ॥ ೪೦ ॥

ಕಶಾಹತೇನ ಮಾರ್ಗಸ್ಥಂ ಶಪ್ತಂ ಭೂಪಾಲ ಶಕ್ತಿನಾ ।
ಸೌದಾಸಂ ಸ ಪ್ರವಿಷ್ಟಸ್ತು ಭಕ್ಷಯಾಮಾಸ ಶಕ್ತಿನಂ ॥ ೪೧ ॥

---

೩೮ ಎಲೈ ಭರತನೇ, ಕೇಳು ಆ ವೃತ್ರಸಂಹಾರ ಕಾಲದಿಂದ ಇಂದಿನವ ರೆಗೂ ಇಂದಿಗೂ ಸಹ ಸಕಲ ದೇವತೆಗಳೂ, ತೀರ್ಥಗಳೂ ಪ್ರತಿಮಾಸದ ಅಂತ್ಯಭಾಗ ದಲ್ಲಿ ಈ ಸನ್ನಿಹಿತಿ ತೀರ್ಥಕ್ಕೆ ತಪ್ಪದೆ ಬರುತ್ತಲಿವೆ

೩೯ ಈರೀತಿ ಹೇಳಿದ ಸಹೋದರನ ಮಾತನ್ನು ಕೇಳಿ ರಘುಶ್ರೇಷ್ಠನಾದ ಭರತನು ಆ ತೀರ್ಥದ ಸಮೀಪದಲ್ಲಿ ಯಥೇಚ್ಛವಾಗಿ ದಾನಧರ್ಮಗಳನ್ನು ಮಾಡಿ ಸೈನ್ಯವನ್ನು ಜತೆಯಲ್ಲಿ ಕರೆದುಕೊಂಡು ಹರಿದ್ವಾರದ ಮಾರ್ಗವಾಗಿ ಉತ್ತರಕ್ಕೆ ಹೊರಟು, ಅಲ್ಲಿ ಗೋಚರವಾದ ಪಾಪನಿವಾರಕವಾದ, ಪುಣ್ಯಪ್ರದವಾದ ಗೌರೀನದಿಯ ಸಮೀಪಕ್ಕೆ ಬಂದಿಳಿದನು.

## ವಿಪಾಶಾ (ಗೌರೀ) ನದಿಯ ಇತಿಹಾಸ.

೪೦-೪೭ ಹಿಂದಕ್ಕೆ ವಿಶ್ವಾಮಿತ್ರಋಷಿಗಳು ಇದ್ದರಷ್ಟೆ? ಅವರಿಗೂ ವಸಿಷ್ಠ ರಿಗೂ ಯಾವಾಗಲೂ ಮನಸ್ತಾಪವಿದ್ದೇ ಇತ್ತು, ಇದು ಬಲಿಯುತ್ತಲೇ ಇತ್ತು ಕೊನೆಗೆ ವಿಶ್ವಾಮಿತ್ರರಿಗೆ ವಸಿಷ್ಠರ ಮೇಲೆ ವಿಪರೀತ ಹೊಟ್ಟೆಕಿಚ್ಚು ಹುಟ್ಟಿತು. ಆದರೆ ವಸಿಷ್ಠರನ್ನಲ್ಲಾಡಿಸುವ ಶಕ್ತಿ ಹೊಸದಾಗಿ ಬ್ರಾಹ್ಮಣರಾದ ವಿಶ್ವಾಮಿತ್ರರಿಗೆ ಇರಲಿಲ್ಲ. ಆದರೂ ವಸಿಷ್ಠರ ವಂಶವನ್ನೇ ನಿರ್ಮೂಲಮಾಡಿಬಿಡಬೇಕೆಂಬ ಆಲೋ ಚನೆಯಿಂದ, ಒಬ್ಬ ಬ್ರಹ್ಮರಾಕ್ಷಸನನ್ನು ತಮ್ಮ ಸ್ವಾಧೀನಪಡಿಸಿಕೊಂಡು ಅವನ ಮೂಲಕ ಆ ವಸಿಷ್ಠರ ಮಕ್ಕಳನ್ನು ಸಂಹರಿಸಿಬಿಡಬೇಕೆಂಬ ಆಲೋಚನೆಯಿಂದಲೇ

**ತತಃ ಪುತ್ರಶತಂ ರಾಜನ್ವಸಿಷ್ಠಸ್ಯೈವ ಸತ್ವರಃ ।**
**ಹತೇ ಪುತ್ರಶತೇ ದುಃಖಾದ್ವಸಿಷ್ಠೋ ಭಗವಾನೃಷಿಃ ॥ ೪೨ ॥**

**ವಿವೇಶ ನಿಮ್ನಗಾಂ ಗೌರೀಂ ಪ್ರಾಣತ್ಯಾಗಚಿಕೀರ್ಷಯಾ ।**
**ವಿಪ್ರಸ್ಯ ಭೂಪ ಯಾತಸ್ಯ ವಿದ್ರುತಾ ಸಾ ತದಾ ಭವತ್ ॥ ೪೩ ॥**

**ತತಃ ಪ್ರಭೃತಿ ಲೋಕೇಽಸ್ಮಿಂಚ್ಛತದ್ರುರಿತಿಶಬ್ದಿತಾ ।**
**ಸರ್ವಪಾಪಪ್ರಶಮನೀ ಸರ್ವಕಲ್ಯಾಣಕಾರಿಣೀ ॥ ೪೪ ॥**

**ಸ್ನಾತಾನಾಂ ಚ ತಥಾ ರಾಜನ್ ದಶಥೇಸುಫಲಪ್ರದಾ ।**
**ತಾಂ ಸಮಾಸಾದ್ಯ ತತ್ರಾಽಪಿ ದತ್ವಾ ದಾನಂ ಸ ರಾಘವಃ ॥ ೪೫ ॥**

---

ಇದ್ದರು ಒಂದೆರಡಾವರ್ತಿ ಈ ದುಷ್ಟ ರಾಕ್ಷಸನು ವಸಿಷ್ಠರ ಮಕ್ಕಳಾದ ಶಕ್ತಿ ಮಹರ್ಷಿಗಳ ಮೇಲೆ ಕೈಮಾಡಿ, ಮೇಲೆ ಬಿದ್ದು ಕಡೆಗೆ ತನ್ನ ಆಟವು ಸಾಗದೆ ಅವರಿಂದ ಶಾಪಗ್ರಸ್ತನಾದನು

ಶಾಪಗ್ರಸ್ತನಾದ ಬಳಿಕ ಆ ಬ್ರಹ್ಮರಾಕ್ಷಸನು ಸೌದಾಸನೆಂಬ ರಾಜನ ದೇಹವನ್ನು ಪ್ರವೇಶಿಸಿ ತನ್ನ ಬಲವನ್ನು ಪಾಶಹಸ್ತದಿಂದ ತೋರಿಸುತ್ತ ಬಂದನು ಅಂದರೆ ಒಂದು ಹಗ್ಗವನ್ನು ದಾರಿಗೆ ಅಡ್ಡಲಾಗಿ ಹಿಡಿದು ಆ ದಾರಿಯಲ್ಲಿ ಬರುವವರು ಹಗ್ಗಕ್ಕೆ ಸಿಕ್ಕಿ ಮುಗ್ಗುರಿಸಿಬಿದ್ದರೆ ಅವರನ್ನು ಹಿಡಿದು ತಿನ್ನುವುದು, ಹೀಗೆ ಮಾಡುತ್ತಿದ್ದನು ಹೀಗೆ ಇರುವಲ್ಲಿ ಒಂದು ದಿನ ಶಕ್ತಿಋಷಿಗಳು ಆ ದಾರಿಯಲ್ಲಿ ಬಂದರು ಅದೃಶ್ಯನಾದ ಬ್ರಹ್ಮರಾಕ್ಷಸನು ಸೌದಾಸನನ್ನು ಹಿಡಿದು ತನ್ನ ಹಗ್ಗವನ್ನು ಹಾದಿಗೆ ಅಡ್ಡವಾಗಿ ಹಿಡಿದಿದ್ದನು ಆ ಹಗ್ಗವು ಶಕ್ತಿಗಳಿಗೆ ತೊಡರಿ ಮುಗ್ಗುರಿಸಿಬಿದ್ದರು ಆ ಕ್ಷಣದಲ್ಲಿ ಅವರನ್ನು ಹಿಡಿದು ಈ ದುಷ್ಟರಾಕ್ಷಸನು ತಿಂದುಬಿಟ್ಟನು. ಈ ಅಯೋಗ್ಯನಿಗೆ ಇಷ್ಟಾದರೂ ತೃಪ್ತಿಯಾಗದೆ ವಿಶ್ವಾಮಿತ್ರರ ಆಜ್ಞೆಯಿಂದ ವಸಿಷ್ಠರ ಉಳಿದ ನೂರು ಮಂದಿ ಮಕ್ಕಳನ್ನೂ ಹಿಡಿದು ನುಂಗಿಬಿಟ್ಟನು ಇದನ್ನು ತಿಳಿದು ವಸಿಷ್ಠರು ಬಹಳವಾಗಿ ದುಃಖಪಡುತ್ತಾ, ತನ್ನ ವಂಶವೇ ನಾಶವಾದ ಮೇಲೆ ತಾನಿನ್ನಿರಬಾರದೆಂದು ಮಕ್ಕಳಂತೆಯೂ, ಅಜ್ಞಾನಿಗಳಂತೆಯೂ ಅಳುತ್ತಾ, ಯಾವುದಾದರೂ ಹೊಳೆಯಲ್ಲಿ ಧುಮುಕಿ ಪ್ರಾಣವನ್ನು ಕಳೆದುಕೊಂಡು ಬಿಡಬೇಕೆಂದು ಯೋಚಿಸಿ, ಬಹಳ ಆಳವಾದ ಈ ಗೌರೀನದಿಯ ಒಳಿಗೆ ಓಡಿ ಒಂದು ಗೌರೀಮಡುವಿಗೆ ಧುಮುಕುವುದಕ್ಕೆ

**ಉತ್ತೀರ್ಯ ತಾಂ ಯಯೌ ತತ್ರ ಸಾ ಚಾಂತ್ಯಾ ಯತ್ರ ನಿಮ್ನಗಾ ।**
**ಯಸ್ಯಾಂ ಸ್ನಾತ್ವಾ ವಿಮುಚ್ಯಂತೇ ಸರ್ವಪಾಪಭಯೈರ್ನರಾಃ ॥ ೪೬ ॥**

**ಯಸ್ಯಾಂ ಸ್ನಾನಾದವಾಪ್ನೋತಿ ದಶಗೋದಾನಜಂ ಫಲಂ ।**
**ಆಷಾಢೇ ಚ ತಥಾ ಕೃತ್ವಾ ಗೋಸಹಸ್ರಫಲಂ ಲಭೇತ್ ॥ ೪೭ ॥**

**ಗೌರೀತೋಯಾದ್ವಿನಿರ್ಮುಕ್ತೋ ವಸಿಷ್ಠೋ ಭಗವಾನೃಷಿಃ ।**
**ಪಾಶಬಂಧಭಯೈರ್ಯಸ್ಯಾಂ ಪಪಾತ ಸಹಸಾ ನೃಪ ॥ ೪೮ ॥**

ಪ್ರಯತ್ನಪಟ್ಟರು  ಆ ಗೌರಿಗೆ ಬಹಳ ಹೆದರಿಕೆಯುಂಟಾಗಿ, ಇವರು ತನ್ನಲ್ಲಿ ಬಿದ್ದು ಪ್ರಾಣ ಕಳೆದುಕೊಂಡರೆ ಬ್ರಹ್ಮಹತ್ಯಾ ದೋಷವು ಪ್ರಾಪ್ತವಾಗುವುದೆಂದು ನಿರ್ಧರಿಸಿ, ಮಡುವನ್ನು ಬಿಟ್ಟು ದ್ರುತವಾಗಿ (ಓಡಿ) ಹರಿದುಹೋದಳು. ಈ ಕಾರಣದಿಂದ ಈ ಗೌರೀನದಿಗೆ ವಿದ್ರುತಾನದಿಯೆಂಬ ಮತ್ತೊಂದು ನಾಮಕರಣವುಂಟಾಯಿತು  ಮತ್ತು ವಿದ್ರುತೆಯಾಗಿ ಹೊರಟ ಗೌರಿಯು ದಿಕ್ಕು ತೋಚದೆ ನೂರಾರು ದಾರಿಗಳಲ್ಲಿ ನುಗ್ಗಿ ಮೊರಟು ಹೋದುದರಿಂದ ಶತದ್ರುವೆಂಬ ಹೆಸರನ್ನೂ ಸಹ ಹೊಂದಿದಳು (ಈ ನದಿಯ ಹೆಸರನ್ನು ಹೇಳುವ ಸಂದರ್ಭದಲ್ಲಿ ಅಮರಸಿಂಹನು ಶತದ್ರು, ವಿತದ್ರು, ವಿಪಾಶಾ, ವಿಪಾಟ್ ಎಂದು ಈ ನದಿಯನ್ನು ನಾನಾನಾಮಗಳಿಂದ ವ್ಯವಹರಿಸಿರುವನು ) ಈ ಶತದ್ರೂ ನದಿಯು (ಗೌರೀ) ಸರ್ವ ಪಾಪವನ್ನೂ ಪರಿಹರಿಸಿ ಸಕಲ ಸನ್ಮಂಗಳಗಳನ್ನೂ ಸ್ನಾನಮಾತ್ರದಿಂದಲೇ ಉಂಟುಮಾಡುತ್ತಾ ಸ್ನಾತರಿಗೆ ದಶ ಗೋದಾನ ಫಲವನ್ನು ಕೊಡುತ್ತಾ ಪ್ರವಹಿಸುತ್ತಿರುವುದು  ಇಂತಹ ಮಹಾ ಮಹಿಮೆಯುಳ್ಳ ಮಹಾನದಿಯಲ್ಲಿ ಭರತನು ಸ್ನಾನಮಾಡಿದವನಾಗಿ ಆ ನದೀತೀರದಲ್ಲಿಯೂ ಅನೇಕ ದಾನಧರ್ಮಗಳನ್ನು ಮಾಡಿ ಆ ನದಿಯನ್ನು ದಾಟಿ ಮುಂದಕ್ಕೆ ಹೊರಟನು  ಗೌರೀ ಮಡುವು ಎಲ್ಲಿಗೆ ಕೊನೆಯಾಗುವುದೋ, ಮತ್ತದೆಲ್ಲಿ ಶತದ್ರು (ವಿತದ್ರು) ವು ಉತ್ಪತ್ತಿಯಾಗುವುದೋ ಅಂತಹ ವಸಿಷ್ಠ ಭೀತವಾದ ಪರಮ ಪವಿತ್ರವಾದ ನದಿಯಲ್ಲಿ ಸ್ನಾನ ಮಾಡುವವರು ಸಕಲ ಭಯ (ಪಾಪದೋಷ) ಗಳಿಂದ ಬಿಡಲ್ಪಟ್ಟವರಾಗಿ ದಶ ಗೋದಾನ ಮಾಡಿದ ಫಲವನ್ನು ಹೊಂದುತ್ತಾರ. ಮತ್ತು ಈ ನದಿಯಲ್ಲಿ ಆಷಾಢ ಮಾಸದಲ್ಲಿ ಸ್ನಾನಮಾಡಿದವರು ಒಂದು ಸಾವಿರ ಗೋದಾನಗಳನ್ನು ದಾನಮಾಡಿದ ಫಲವನ್ನು ಹೊಂದುತ್ತಾರೆ

೪೮-೫೦. ಭರತನ ನದೀದಾಟುವ ಪ್ರಸಂಗವನ್ನೆಲ್ಲಾ ಹೇಳುತ್ತಾ ಹೇಳುತ್ತಾ ಹೇಳುತ್ತಾ ಮಾರ್ಕಂಡೇಯ ಮಹಾಮುನಿಗಳು ವಜ್ರರಾಜನನ್ನು ಕುರಿತು,

**ವಿಪಾಶಶ್ಚ ತಥಾ ದೇವ್ಯಾ ಕೃತ್ವಾ ತೀರೇ ವಿಸರ್ಜಿತಃ ।**
**ಶಕ್ತಿಪುತ್ರಂ ತತೋ ದೃಷ್ಟ್ವಾ ವಸಿಷ್ಠೋಽಪಿ ಪರಾಶರಂ ॥ ೪೯ ॥**

---

ಮಹಾರಾಜ! ನಾನು ಹೇಳುತ್ತಿರುವ ಪ್ರಾಚೀನ (ವೇದೋದಿತ) ಚರಿತ್ರೆಗಳನ್ನೆಲ್ಲಾ ಕೇಳುತ್ತಿರುವೆಯಷ್ಟೆ? ಮುಂದ ವಸಿಷ್ಠರು ಮಡುವನ್ನು ಧುಮುಕಿ ಪ್ರಾಣ ಕಳೆದುಕೊಳ್ಳಲು ಹೊರಟು ಗೌರೀ ಮಡುವಿಗ ಓಡಿಹೋದ ಮೇಲೆ ನಡೆದ ಕಥೆಯನ್ನು ಹೇಳುವೆನೆಂದು ಹೇಳುತ್ತಾ ಅದನ್ನು ಮುಂದರಿಸಿದರದಂತೆಂದೊಡೆ —

ಗೌರಿಯು-ಮಡುವು ಮಾಯವಾದ ಮೇಲೆ ವಸಿಷ್ಠರ ಆತ್ಮಹತ್ಯಾ ಸಂಕಲ್ಪವೂ ಮಾಯವಾಗಿ ಹೋಯಿತು. ಇತ್ತ ಕಡ ಸೌದಾಸನನ್ನಾವರಿಸಿ ಪಾಶಹಸ್ತದಿಂದ ಪ್ರಾಣಿಗಳ ಪ್ರಾಣವನ್ನು ಹೀರುತ್ತಿದ್ದ ಬ್ರಹ್ಮರಾಕ್ಷಸನಿಗೆ ಹೆದರಿಕೆಯಾಗಿ ಕೈಯಲ್ಲಿದ್ದ ಹಗ್ಗವನ್ನು ಗೌರೀ ಮಡುವಿನಲ್ಲಿ ಬಿಸಾಡಿ ವಿನಾಶನಾಗಿ ತಾನೂ ವಿಪಾಶೆಯಲ್ಲಿ ಬಿದ್ದು ಸತ್ತನು. ಆಗ ಗೌರೀ ಮಹಾಶಕ್ತಿಯು ರಾಕ್ಷಸನ ಪಾಶದಿಂದಳೆಯಲ್ಪಟ್ಟಿದ್ದ ಶಕ್ತಿಪುತ್ರನಾದ ಪರಾಶರನನ್ನು ನಾಶದಿಂದ ಬಿಡಿಸಿ ವಿಪಾಶಾತೀರದಲ್ಲೇ ಬಿಟ್ಟು ಹೊರಟು ಹೋದಳು

ಶಕ್ತಿಯ ಮಗ (ವಸಿಷ್ಠರ ಮಗ ಶಕ್ತಿ) ಪರಾಶರನು ಬದುಕಿರುವುದನ್ನು ನೋಡಿ, ವಸಿಷ್ಠರಿಗೆ ತನ್ನ ಮೊಮ್ಮಗನೊಬ್ಬನಾದರೂ ಬದುಕಿರುವುದರಿಂದ ತನ್ನ ಸಂತಾನವು ಸಂಪೂರ್ಣವಾಗಿ ನಾಶವಾಗದೆ ನಿಂತಿದ್ದುದಕ್ಕಾಗಿ ಪರಮಾನಂದವಾಯಿತು ಮತ್ತು ತಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಕ್ಕಾಗಿ ಪ್ರಯತ್ನಮಾಡಿದುದನ್ನು ನೆನೆಸಿಕೊಂಡು ಪಶ್ಚಾತ್ತಾಪಪಡುತ್ತಾ, ಗೌರಿಯು ಬ್ರಹ್ಮಹತ್ಯಾಪಾಪಶಾಪಭೀತಿಗಳಿಂದ ಮಡುವನ್ನು ಬಿಟ್ಟು ವಿಪಾಶಳಾಗಿ ಪ್ರವಹಿಸಿದುದಕ್ಕಾಗಿ ಆಶ್ಚರ್ಯಪಡುತ್ತಾ ನಾಶ್ಲೀಲಂ ಕೀರ್ತಯೇತ್ ಎಂಬ ವೇದವಾಕ್ಯವನ್ನು ವಸಿಷ್ಠನು ಸ್ಮರಿಸುತ್ತಾ ಆನಂದಪರವಶನಾಗಿದ್ದನು. ಆ ಗೌರೀನದಿಯ (ಮಡು) ತುದಿಯಿಂದ ಹೊರಟ ಆ ನದಿಗೆ ಈ ಕಾರಣಗಳಿಂದ ವಿಪಾಶಳೆಂಬ ಹೆಸರು ಪ್ರಸಿದ್ಧವಾಯಿತು

ಟಿಪ್ಪಣಿ ಈ ಕಥೆಯನ್ನೋದಿದರೆ ಎಂತಹ ಜ್ಞಾನಿಯೇ ಆಗಿರಲಿ ಎಂತಹ ಸಾತ್ವಿಕನೇ ಆಗಿರಲಿ, ತ್ರಿಲೋಕ್ಯವನ್ನೇ ಜಯಿಸಿರಲಿ, ಮುಕ್ತಿದ್ವಾರದಲ್ಲೇ ನಿಂತಿರಲಿ, ಅಂತೂ ಇಂತೂ ಎಂತಹವನೇ ಆಗಿರಲಿ, ಮನುಷ್ಯನಾಗಿ ಹುಟ್ಟಿದ ಮೇಲೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಅವನ ಮನಸ್ಸನ್ನು ಹೊಕ್ಕು ಎಂತೆಂತಹ ಪ್ರಮಾದಕಾರ್ಯಗಳನ್ನು ಮಾಡಿಸಿಬಿಡುವುವೆಂಬ ಬಹು ನೀತಿ ಗರ್ಭಿತವಾದ

**ಅಸ್ತಿ ಸಂತಾನಮಿತ್ಯುಕ್ತ್ವಾ ಮರಣಾದ್ವಿನಿವರ್ತತ ।**
**ಸಾ ಚಾಂತ್ಯಾ ಚ ತಥಾ ಲೋಕೇ ವಿಪಾಶೇತ್ಯಭಿಧೀಯತೇ ॥ ೫೦ ॥**

**ವಿಪಾಶಾಂ ಚ ಸಮುತ್ತೀರ್ಣೇ ಭರತೇ ಧರ್ಮವತ್ಸಲೇ ।**
**ನಿವೇಶ ಕಟಕಂ ತಸ್ಯ ಕುಣಿದೇಶೋ ಮಹೋದಯಃ ॥ ೫೧ ॥**

**ತ್ರೈಗರ್ತೋ ವಸುಧಾನಶ್ಚ ಕುಲೂತಾಧಿಪತಿರ್ಜಯಃ ।**
**ದಾಶೇರಕಸ್ತಥಾ ರಾಜಾ ಗೋವಾಶನ ಇತಿ ಶ್ರುತಃ ॥ ೫೨ ॥**

**ಇರಾವತೀಂ ಶೀಘ್ರಗಮಾಂ ಭರತೋಽಪಿ ತದಾ ಯಯೌ ।**
**ದಶಧೇನುಫಲಂ ಯತ್ರ ಸ್ನಾತ ಏವ ಸಮಶ್ನುತೇ ॥ ೫೩ ॥**

**ಷಷ್ಟಿತೀರ್ಥಸಹಸ್ರಾಣಿ ವಹತ್ಯೇಕಾ ಇರಾವತೀ ।**
**ಅಷ್ಟಮ್ಯಾಂ ತು ವಿಶೇಷೇಣ ಯತ್ರ ಯುಜ್ಯೇತ ರೇವತೀ ॥ ೫೪ ॥**

ಸಂಗತಿಯು ಈ ವಸಿಷ್ಠ ವಿಶ್ವಾಮಿತ್ರರ ಕಥೆಯಲ್ಲಿ ಚೆನ್ನಾಗಿ ವ್ಯಕ್ತವಾಗುವುದು ಆದ್ದರಿಂದಲೇ ಕಾಮಾದ್ಯರಿ ಷಡ್ವರ್ಗಗಳು ಮಾನವನ ಮಾನವನ್ನು ಮರ್ದಿಸಿ, ದುರಾಗತಗಳಿಗೊಳಗುಮಾಡುವ ಅಂತಶ್ಶತ್ರುಗಳೆಂದು ಸಕಲರೂ ತಿಳಿದು ಸಾತ್ವಿಕರಾಗಿ ವರ್ತಿಸಲೆಂದು ಪ್ರಾರ್ಥಿಸುತ್ತೇವೆ ಮೂಲಕಥೆ ಸೂಕ್ಷ್ಮವಾಗಿದ್ದಾಗ್ಯೂ ಆದನ್ನು ವಿಸ್ತರಿಸಿ ಇಲ್ಲಿ ಬರೆಯಲಾಗಿದೆ. ಅಲಮತಿ ವಿಸ್ತರೇಣ

೫೧-೫೨ ಭರತನು ವಿಪಾಶಾನದಿಯನ್ನು ದಾಟಿದ ಬಳಿಕ ಧರ್ಮವತ್ಸಲನಾದ ಅವನ ಸೈನ್ಯದ ಜತೆಗೆ ತಾವೂ ಯುದ್ಧ ಸಹಾಯಕ್ಕಾಗಿ ಕುಣಿದೇಶದ ರಾಜನಾದ ಮಹೋದಯನೂ, ತ್ರಿಗರ್ತಾಧಿಪತಿಯಾದ ವಸುಧಾನನೂ, ಕುಲೂಕ ದೇಶಾಧಿಪತಿಯಾದ ಜಯರಾಜನೂ, ದಾಶೇರಕಾಧಿಪತಿಯಾದ ಗೋವಾಶನ ಮಹಾರಾಜನೂ ಸಹ ತಮ್ಮ ತಮ್ಮ ಸೈನ್ಯಗಳೊಡನೆ ಬಂದು ಸೇರಿಕೊಂಡರು

೫೩-೫೪ ಹೋಗು ಹೋಗುತ್ತಿದ್ದ ಹಾಗೆಯೇ ದಾರಿಯಲ್ಲಿ ಶೀಘ್ರಗಾಮಿಯಾದ ಇರಾವತೀ ನದಿಯು ಸಿಕ್ಕಿತು. ಈ ಇರಾವತೀ ನದಿಯಲ್ಲಿ ಸ್ನಾನಮಾಡಿದವರು ಹತ್ತು ಹಸುಗಳನ್ನು ದಾನಮಾಡಿದ ಫಲವನ್ನನುಭವಿಸುವರು ಈ ಇರಾವತೀ

**ಯತ್ರ ದತ್ವಾ ಬಹುವಿಧಂ ದಾನಂ ರಘುಕುಲೋದ್ವಹಃ ।**
**ಉತ್ತೀರ್ಯ ತಾಂ ಯಯೌ ಶೀಘ್ರಂ ದೇವಿಕಾಂ ಪಾಪನಾಶಿನೀಂ ॥ ೫೫ ॥**

**ದೃಷ್ಟಮಾತ್ರೈವ ಯಾ ದೇವೀ ಸರ್ವಕಲ್ಮಷನಾಶಿನೀ ।**
**ಶರೀರಬಹುಲಾ ಸಾ ತು ಹರಸ್ಯ ದಯಿತಾ ಉಮಾ ॥ ೫೬ ॥**

**ತತ್ರಾಪಿ ದತ್ವಾ ದಾನಾನಿ ಪೂಜಯಾಮಾಸ ಶಂಕರಂ ।**
**ಭರತೇ ಚಾಥ ತತ್ರಸ್ಥೇ ವಿವಿಶುಃ ಪಂಚ ಪಾರ್ಥಿವಾಃ ॥ ೫೭ ॥**

**ಪಾರ್ವತೀಯಾ ಮಹಾರಾಜ ಪದಾತಿಗಣಸಂಕುಲಾಃ ।**
**ಕುಮಾರಃ ಶ್ರೇಣಿಮಾಂಚ್ಛೂರೋ ಬಲಬಂಧುಃ ಸುಯೋಧನಃ ॥ ೫೮ ॥**

---

ಮಹಾ ನದಿಯಲ್ಲಿ ಅರುವತ್ತು ಸಾವಿರ ತೀರ್ಥಗಳು ಬಂದು ನೆಲೆಸಿವೆ ಅಷ್ಟಮೀ ಯೋಗವಿದ್ದ ಸಮಯದಲ್ಲಿ ರೇವತೀನದಿಯು ಆ ನದಿಯೊಡನೆ ಬಂದು ಸೇರಿಕೊಳ್ಳುತ್ತದೆ ಅಂತಹಪುಣ್ಯನದೀ ತೀರದಲ್ಲಿ ಭರತನು ಬಹು ವಿಧವಾದ ದಾನಗಳನ್ನು ಮಾಡಿ ಆ ನದಿಯನ್ನು ದಾಟಿದವನಾಗಿ ಮುಂದೆ ಪಾಪನಾಶಿನಿಯಾದ ದೇವಿಕಾನದಿಯನ್ನು ನೋಡಿದನು

೫೬. ನೋಡಿದ ಮಾತ್ರದಿಂದಲೇ ಈ ದೇವಿಕಾನದಿಯು ಸಕಲ ವಿಧ ಪಾಪಗಳನ್ನೂ ನಾಶಮಾಡುವ ಶಕ್ತಿಯುಳ್ಳದಾಗಿರುವುದು. ಬಹಳವಾದ ಪಾತ್ರವಿಸ್ತಾರದಿಂದ (ದೊಡ್ಡಶರೀರ) ಕೂಡಿರುವ ಈ ನದಿಯು ಪರಮೇಶ್ವರನ ಪ್ರಿಯತಮಳಾದ ಉಮಾದೇವಿಯೆಂದು ಹೆಸರುಹೊಂದಿದೆ

೫೭ ಇಂತಹ ಉಮಾರೂಪಳಾದ ದೇವಿಕಾನದಿಯು ಸಿಕ್ಕಿದೊಡನೆಯೇ ಭರತನು ಆ ನದಿಯಲ್ಲಿ ಸ್ನಾನಮಾಡಿ, ಪರಮೇಶ್ವರನನ್ನು ಪೂಜಿಸಿ ಬಹು ವಿಧವಾದ ದಾನಗಳನ್ನು ಮಾಡಿದನು ಭರತನು ಆ ನದೀತೀರದಲ್ಲಿ ಬಿಡಾರ ಬಿಟ್ಟಿದ್ದ ಕಾಲದಲ್ಲಿ ಅವನ ಸಂಗ್ರಾಮ ಸಹಾಯಾರ್ಥವಾಗಿ ಮತ್ತೈದು ಮಂದಿ ಮಹಾರಾಜರು ಅವನ ಜತೆಗೆ ಬಂದು ಕೂಡಿಕೊಂಡರು

೫೮-೬೦ ಪರ್ವತ ಪ್ರದೇಶಗಳಲ್ಲಿರುವ ಅಗಣಿತ ಸೈನ್ಯಗಳನ್ನೊಡಗೂಡಿಸಿಕೊಂಡು ಸಾಲುಸಾಲಾಗಿ ಬಿಟ್ಟುಕೊಂಡು ಶೂರನಾದ ಕುಮಾರರಾಜನೂ, ಬಲಬಂಧುವೂ, ಸುಯೋಧನನೂ, ಮದ್ರರಾಜನಾದ ಅಂಶುಮಂತನೂ, ಮಹಾಬಲನೆಂಬ

ಮದ್ರರಾಜೋಂಽಶುಮಾಂಶ್ಚೈವ ತಥೈವ ಚ ಮಹಾಬಲಃ ।
ಪೂಜಿತೋ ಮದ್ರರಾಜೇನ ಶಾಕಲೇನ ನರೋತ್ತಮಃ ॥ ೫೯ ॥

ತ್ರಿರಾತ್ರಮುಷಿತಃ ಶ್ರೀಮಾಂಶ್ಚಂದ್ರಭಾಗಾಂ ನದೀಂ ಯಯೌ ।
ಚಂದ್ರಾಂಶುಶೀತಲಜಲಾಂ ಸರ್ವಪಾಪಪ್ರಣಾಶಿನೀಂ ॥ ೬೦ ॥

ಬಹುತೀರ್ಥಸಮಾಯುಕ್ತಾಂ ಸ್ನಾನಾತ್ಸರ್ವಪ್ರದಾಂ ನೃಣಾಂ ।
ವಿಶೇಷೇಣ ಮಹಾರಾಜ ಮಾಘಪುಷ್ಯತ್ರಯೋದಶೀಂ । ॥ ೬೧ ॥

ಭರತೇ ತಾಂ ಸಮುತ್ತೀರ್ಣೇ ವಿವೇಶ ಕಟಕಂ ತತಃ
ವಿತಚ್ಛ್ರುತಂಜಯಃ ಶ್ರೀಮಾನಭಿಚಾರಃ ಕೃತಂಜಯಃ ॥ ೬೨ ॥

ಕಾಶ್ಮೀರಕಶ್ಚ ಧರ್ಮಾತ್ಮಾ ಸುಬಾಹುರಿತಿ ವಿಶ್ರುತಃ ।
ಆಸಸಾದ ಸ ತೈಃ ಸಾರ್ಧಂ ವಿತಸ್ತಾಂ ತು ಮಹಾನದೀಂ ॥ ೬೩ ॥

---

ಮತ್ತೊರ್ವ ಮಹಾರಾಜನೂ ಈ ಮೇರೆ ಐದು ಮಂದಿ ರಾಜರು ಭರತನ ಪಾಳಯದ ಬಳಿ ಬಂದಿಳಿದರು ಅವರೆಲ್ಲರೂ ಭರತನಿಂದ ಪೂಜಿತರಾಗಿ ಮೂರು ದಿವಸ ಅಲ್ಲಿಯೇ ಇದ್ದುಕೊಂಡು ಮುಂದ ಪ್ರಯಾಣಮಾಡಿ, ಚಂದ್ರಕಿರಣದಂತೆ ತಂಪಾದ ನೀರಿನಿಂ ಮೊಡಗೂಡಿದ ಸರ್ವಪಾಪ ಪರಿಹಾರಕವಾದ ಚಂದ್ರಭಾಗಾ ಮಹಾನದಿಯ ತೀರಕ್ಕೆ ಒಂದರು

೬೧-೬೩. ಅನೇಕ ತೀರ್ಥಗಳಿಂದೊಡಗೂಡಿರುವ ಚಂದ್ರಭಾಗಾ ನದಿಯಲ್ಲಿ ಮಾಘ ಶುದ್ಧ ತ್ರಯೋದಶೀ ದಿನ ಸ್ನಾನಮಾಡಿದರೆ ಸಕಲ ಇಷ್ಟಾರ್ಥವೂ ಕೈಗೂಡುವುದು. ಇಂತಹ ಬಹು ಪ್ರದಳಾದ ಚಂದ್ರಭಾಗೆಯನ್ನು ಭರತನು ದಾಟಿದ ಬಳಿಕ ಅವನ ಸೈನ್ಯದ ಜತೆಗೆ ಶ್ರುತಂಜಯ, ಅಭಿಚಾರ, ಕೃತಂಜಯರೆಂಬ ರಾಜರೂ, ಕಾಶ್ಮೀರರಾಜನಾದ ಸುಬಾಹುವೆಂಬ ಹೆಸರಿನ ಧರ್ಮಾತ್ಮನಾದ ಮಹಾರಾಜನೂ ಸಹ ಒಂದು ಸಸೈನ್ಯರಾಗಿ ಕೂಡಿಕೊಂಡರು ಆ ಬಳಿಕ ಅವರೆಲ್ಲರೂ ಒಟ್ಟುಗೂಡಿ ಪ್ರಯಾಣಬೆಳಸಿದವರಾಗಿ ವಿತಸ್ತಾನದಿಯ ಬಳಿಗೆ ಬಂದು ಸೇರಿಕೊಂಡರು.

ಸ್ವರ್ಗಲೋಕಪ್ರದಾಂ ಸ್ನಾನೇ ಸರ್ವಕಲ್ಮಷನಾಶಿನೀಂ ।
ಪ್ರೋಷ್ಠಪಾದಸ್ಯ ಮಾಸಸ್ಯ ಶುಕ್ಲಪಕ್ಷತ್ರಯೋದಶೀಂ ॥ ೬೪ ॥

ವಿಶೇಷೇಣ ಮಹಾರಾಜ ಪುಣ್ಯಾಂ ಪರಮಪಾವನೀಂ ।
ಭರತಸ್ತಾಂ ಸಮುತ್ತೀರ್ಯ ಸುದಾಮಾಂ ಚೈವ ನಿಮ್ನಗಾಂ ॥ ೬೫ ॥

ಆಸಸಾದ ಮಹಾತೇಜಾಃ ಕೈಕಯಾದ್ಯದುನಂದನ ।
ಬಲೇನ ಚತುರಂಗೇಣ ಯುಧಾಜಿತ್ಕೈಕಯಾಧಿಪಃ ॥ ೬೬ ॥

ನಿರ್ಯಯೌ ಭರತಂ ಪ್ರಾಪ್ತಂ ಶ್ರುತ್ವಾ ಭರತಮಾತುಲಃ ।
ನಾಗರಾಶ್ಚ ತಥಾ ಮುಖ್ಯಾ ರಾಜಗೃಹನಿವಾಸಿನಃ ॥ ೬೭ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಯೇ ಚ ವರ್ಣಪರಾ ಜನಾಃ ।
ಯಾನೈರುಚ್ಚಾವಚೈಃ ಸರ್ವೇ ನಗರಾತ್ತು ವಿನಿರ್ಗತಾಃ ॥ ೬೮ ॥

---

೬೪ ಭಾದ್ರಪದ ಶುದ್ಧ ತ್ರಯೋದಶೀ ದಿವಸ ಸರ್ವಕಲ್ಮಷನಾಶಿನಿಯಾದ ಈ ವಿತಸ್ತಾನದಿಯಲ್ಲಾರು ಸ್ನಾನಮಾಡುವರೋ ಅವರೆಲ್ಲರೂ ನಿಸ್ಸಂದೇಹವಾಗಿ ನಾಕಲೋಕವನ್ನು ಸೇರುವರು.

೬೫-೬೬. ಇಂತಹ ಪರಮಪಾವನವೂ ವಿಶೇಷ ಪುಣ್ಯಪ್ರದವೂ ಆದ ವಿತಸ್ತಾನದಿಯನ್ನು ಭರತನು ದಾಟಿಕೊಂಡು ಸುದಾಮಾ ನದಿಯ ದಡಕ್ಕೆ ಬಂದನು. ಈ ನದಿಯ ದಡವನ್ನು ಭರತನು ಸೇರುವ ಹೊತ್ತಿಗೆ ಸರಿಯಾಗಿ ಆ ಸ್ಥಳಕ್ಕೆ ಕೈಕಯ ದೇಶದ ರಾಜನಾದ ಯುಧಾಜಿನ್ಮಹಾರಾಜನು ಚತುರಂಗ ಬಲಸಮೇತನಾಗಿ ಬಂದು ಭರತನ ಪಡೆಯನ್ನು ಸೇರಿದನು.

೬೭-೬೮ ಈ ಯುಧಾಜಿನ್ಮಹಾರಾಜನು ಭರತನ ಸೋದರಮಾವನೆಂಬ ಸಂಗತಿಯನ್ನು ರಾಮಾಯಣವನ್ನೋದಿದವರೆಲ್ಲರೂ ತಿಳಿದೇ ಇದ್ದಾರೆ. ಇಂತಹ ಯುಧಾಜಿತನು ತನ್ನ ಸೋದರಳಿಯನು ಬಂದಿರುವುದನ್ನು ಕೇಳಿ ಅವನನ್ನು ನೋಡುವುದಕ್ಕಾಗಿ ಭರತನ ಬಳಿ ಹೊರಟನು. ಅವನ ಹಿಂದೆ ಸಕಲ ನಾಗರಿಕರೂ ಅರಮನೆಯಲ್ಲಿ ವಾಸಿಸುವ ಜನರೂ, ಊರಿನಲ್ಲಿರುವ ಬ್ರಾಹ್ಮಣ ಕ್ಷತ್ರಿಯ ವೈಶ್ಯಾದಿಯಾಗಿ ಎಲ್ಲಾ ಕೋಮಿನ ಜನರೂ, ನಾನಾವಿಧವಾದ ವಾಹನಗಳನ್ನೇರಿಕೊಂಡು ಭರತನನ್ನು ನೋಡುವುದಕ್ಕೆ ಓಡಿಯೋಡಿ ಬಂದರು.

ನಾದಿತ್ರಾಸ್ಸುರತಃ ಕೃತ್ವಾ ಗಣಿಕಾಶ್ಚ ವಿನಿರ್ಗತಾಃ ।
ಪ್ರತಿಗ್ರಹನಿಮಿತ್ತಂ ತು ರಾಘವಸ್ಯ ಮಹಾತ್ಮನಃ ॥ ೬೯ ॥

ಭರತೋಽಪಿ ಮಹಾತೇಜಾಃ ಸ ಸಮೇತ್ಯ ಯುಧಾಜಿತಾ ।
ಅಭ್ಯಧಾವತ ತತ್ಪ್ರೀತ್ಯಾ ಮಾತುಲಂ ಕೈಕಯಾಧಿಪಂ ॥ ೭೦ ॥

ಕಂಠೇ ಗೃಹೀತ್ವಾ ಭರತಂ ಮೂರ್ಧ್ನ್ಯಾಘ್ರಾಯ ಚಾಸಕೃತ್ ।
ಭರತೋಽಪಿ ಸಮಾಪಾಯ ರಾಜಗೇಹಮುಪಾಗಮತ್ ॥ ೭೧ ॥

ಸಮೇ ಮನೋರಮೇ ದೇಶೇ ಪ್ರಭೂತಯವಸೇಂಧನೇ ।
ಶಿಬಿರಂ ಭರತಶ್ಚಕ್ರೇ ನಗರಸ್ಯಾವಿದೂರತಃ ॥ ೭೨ ॥

೬೯. ಆಗ ಆ ಜನರ ಗುಂಪಿನ ಮುಂದುಗಡೆ ನಾನಾವಿಧ ವಾದ್ಯಗಳು ಮೊಳಗುತ್ತಿದ್ದುವು. ನಾರಿನಾರಿಯರು ವಿವಿಧ ರಾಗಗಳನ್ನು ಪಾಡುತ್ತಾ ಮೇಳ ದೂಡನೆ ಮುಂದೆ ಮುಂದ ಮಂದಹಾಸದಿಂದ ನಡೆದರು. ಇಂತು ಆ ಕೈಕಯ ನಗರದ ಪ್ರತಿಯೊಂದು ಮನೆಯಿಂದಲೂ ಜನರು ಗುಂಪು ಗುಂಪಾಗಿ ಹೊರಟು ಭರತನನ್ನು ನೋಡುವುದಕ್ಕೆ ಓಡಿದರು

೭೦-೭೧ ತನ್ನ ಸೋದರಮಾವನಾದ ಯುಧಾಜಿದ್ರಾಜನು ಬರುತ್ತಿರುವ ಸಂಗತಿಯನ್ನು ಕೇಳಿದ ಭರತನು ಅವನನ್ನು ನೋಡಲು ಆತುರಪಟ್ಟವನಾಗಿ, ಪ್ರೇಮಭರವನ್ನು ತಡೆಯಲಾರದೆ ನಾಗಾಲೋಟದಿಂದ ಓಡಿ ಮಾವನ ಮುಂದೆ ಬಂದು ನಿಂತನು ಸೋದರಳಿಯನು ತನ್ನ ಬಳಿಗೇ ಓಡಿ ಬಂದುದನ್ನು ನೋಡಿ ಯುಧಾಜಿತನು ಅವನನ್ನು ಕಂಡೊಡನೆಯೇ ಬಲವಾಗಿ ತಬ್ಬಿಕೊಂಡು ತಲೆಯನ್ನು ಮತ್ತೆ ಮತ್ತೆ ಮೂಸಿ ನೋಡುತ್ತಿದ್ದನು ಮತ್ತು ಅವನನ್ನು ಜತೆಯಲ್ಲಿ ಕರೆದುಕೊಂಡು ತನ್ನ ಅರಮನೆಗೆ ಕರೆತಂದನು

೭೨-೭೩ ಆಗ ಭರತನು ತನ್ನ ಸಕಲ ರಾಜಪರಿವೃತವಾದ ಮಹಾಸೈನ್ಯವನ್ನು ಊರಿನ ಹೊರಗೆ ತೃಣಜಲ ಸಮೃದ್ಧಿಯಾದ ಸಮಪ್ರದೇಶದಲ್ಲಿ ಶಿಬಿರಗಳನ್ನು ನಿರ್ಮಾಣಮಾಡಿಸಿ ಅಲ್ಲಿ ಇಳಿಸಿದನು. ಭರತನು ತೋರಿಸಿದ ಸ್ಥಳದಲ್ಲಿ ಬೇರೆ ಬೇರೆ ಗುಡಾರಗಳನ್ನೂ ಸೈನಿಕರಿಗಾಗಿ ನಿರ್ಮಿಸಿ ಅಲ್ಲಿ ಸಕಲ ಸೈನ್ಯಗಳನ್ನೂ ಇಳಿಸಿದರು.

ಪೃಥಕ್‌ಪೃಥಕ್ಕೃತ್ವಾ ಚಕ್ರುಃ ಸ್ಕಂಧಾವಾರನಿವೇಶನಂ ।
ಪುನಃಪ್ರಿಯೇಷು ದೇಶೇಷು ನಾನಾದೇಶ್ಯಾ ನರಾಧಿಪಾಃ ॥ ೭೩ ॥

ಕೃತ್ವಾ ನಿವೇಶಾನ್ಮನುಜೇಶ್ವರಾಣಾ-
ಮಾದಿಶ್ಯ ಭೋಗಾನ್ಸಕಲಾನ್ಸ ತೇಷಾಂ ।
ವಿವೇಶ ನಾಗೇನ ಸ ಮಾತುಲಸ್ಯ
ಪುರಂ ಪ್ರಹೃಷ್ಟೋ ರಘುವಂಶಚಂದ್ರಃ ॥ ೭೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಜಗೃಹಗಮನೋನಾಮ
ಸಪ್ತೋತ್ತರ ದ್ವಿಶತತಮೋಽಧ್ಯಾಯಃ.

---

ನಾನಾದೇಶಗಳಿಂದ ಬಂದು ತನ್ನ ಸೈನ್ಯದೊಡನೆ ಸೇರಿಕೊಂಡು ಸಹಾಯಕ್ಕೆ ಸನ್ನದ್ಧ ರಾಗಿದ್ದ ಸಕಲ ರಾಜರನ್ನೂ ರಾಜಾರ್ಹವಾದ ಬಿಡಾರಗಳಲ್ಲಿ ಇಳಿಸಿ ತಾನು ಮಾತ್ರ ಸೋದರಮಾವನ ಮನೆಗೆ ಭರತನು ಹೊರಟನು

೭೪ ರಘುವಂಶಕ್ಕೆ ಚಂದ್ರಪ್ರಾಯನಾದ ಭರತ ಮಹಾರಾಜನು ನಾನಾ ದೇಶದ ರಾಜರನ್ನೂ, ಸುಖಸಾಮಗ್ರಿಗಳೊಡನೆ ಸಿದ್ಧವಾಗಿದ್ದ ನೂತನ ಗೃಹಗಳಲ್ಲಿಳಿಸಿ ಅವರಿಗೆ ಸಕಲ ಭೋಗ್ಯವಸ್ತುಗಳನ್ನೂ ಸಿದ್ಧಪಡಿಸುವಂತೆ ಹೇಳಿ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು, ಮಾವನೊಡನೆ ಮೆರವಣಿಗೆ ಮಾಡಿಸಿಕೊಳ್ಳುತ್ತ ಮಾತುಲ ಮಂದಿರವನ್ನು ಪ್ರವೇಶಿಸಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಭರತನು ರಾಜಗೃಹಕ್ಕೆ ಬಂದನೆಂಬ
ಹೆಸರಿನ ಇನ್ನೂರೇಳನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟೋತ್ತರದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ತತಃ ಸ್ವಲ್ಪಪರೀವಾರೋ ಭರತೋ ಧರ್ಮವತ್ಸಲಃ ।
ಅಭ್ಯುತ್ಥಾಯ ತತಃ ಪ್ರೀತ್ಯಾ ಮಾತುಲಃ ಕೈಕೆಯಾಧಿಪಃ ॥ ೧ ॥

ಕಂಠೇ ಗೃಹೀತ್ವಾ ಭರತಂ ಮೂರ್ಧ್ನ್ಯುಪಾಘ್ರಾಯ ಚಾಸಕೃತ್ ।
ಭರತೋಽಪಿ ಸಮಾದಾಯ ರಾಜ್ಞಃ ಗೃಹಮುಪಾಗತಂ ॥ ೨ ॥

ಪ್ರವಿವೇಶ ಪುರಂ ಹೃಷ್ಟೋ ಮಾತುಲಸ್ಯ ಯುಧಾಜಿತಃ ।
ಪತಾಕಾಧ್ವಜಸಂಬಾಧಂ ಸಿಕ್ತಂ ಚಂದನವಾರಿಣಾ ॥ ೩ ॥

---

### ಇನ್ನೂರೆಂಟನೆಯ ಅಧ್ಯಾಯವು.

೧-೩ ಮಾರ್ಕಂಡೇಯನು ಹೇಳುತ್ತಾನೆ —ತನ್ನ ಸೈನ್ಯವನ್ನು ಚತುರಂಗ ಬಲದೊಡನೆ ಕೂಡಿಕೊಂಡ, ತನ್ನ ಪ್ರೀತಿಪಾತ್ರನಾದ ಸೋದರಮಾವನು, ಇಲ್ಲೇ ಸಮೀಪದಲ್ಲಿರುವ ತನ್ನ ಊರಿಗೆ ಬಂದು ಹೋಗಬೇಕೆಂದು ಭರತನನ್ನು ಜತೆಯಲ್ಲಿ ಕರೆದುಕೊಂಡು ಮಿತಪರಿವಾರದೊಡನೆ ತನ್ನ ಅರಮನೆಗೆ ಹಿಂದೆ ವಿವರಿಸಿದಂತೆ ಹೊರಟನಷ್ಟೆ? ಆಗ ಭರತನೂ ಸಹ ಮಿತಪರಿವಾರದಿಂದ ಸೋದರಮಾವನ ಜತೆಯಲ್ಲಿ ಹೊರಟಾಗ, ಆ ಯುಧಾಜಿತನಿಗೆ ಸೋದರಳಿಯನಲ್ಲಿ ಅನಿರ್ವಚನೀಯವಾದ ಪ್ರೀತಿಯುಂಟಾಗಿ ಭರತನ ಕತ್ತನ್ನು ತಬ್ಬಿಕೊಂಡೇ, ತಲೆಯನ್ನು ಮತ್ತೆ ಮತ್ತೆ ಮೂಸಿ ನೋಡುತ್ತಾ ತನ್ನ ಜತೆಯಲ್ಲಿ ಕರದುಕೊಂಡು ಆನೆಯ ಮೇಲೆ ಬಂದು ಅರಮನೆಯ ಬಾಗಿಲಿನಲ್ಲಿಳಿದನು ಆ ಅರಮನೆಯ ಆನೇ ಬಾಗಿಲಿನಲ್ಲಿ ಅನೇಕ

ಧೂಪೇನಾಽಗುರುಸಾರಾಣಾಂ ಸಮಂತಾದಾಕುಲೀಕೃತಂ ।
ಕೃತೋಪಹಾರಂ ಸರ್ವತ್ರ ಕುಸುಮೈಃ ಪಂಚವರ್ಣಕೈಃ ॥ ೪ ॥

ಸರ್ವಪಣ್ಯವಿಸಂಯುಕ್ತಂ ಸಮಾಲಂಕೃತಬಾಲಕಂ ।
ಖಮುಲ್ಲಿಖದ್ಭಿಃ ಪ್ರಾಸಾದೈಃ ಶ್ವೇತಮೇಘಗಣೈರ್ಯುತಂ ॥ ೫ ॥

ವಿನ್ಯಸ್ತಬಲಿಪೂಜಂಚ ದೇವತಾಯತನೇಷು ಚ ।
ಮಹಾವಾದಿತ್ರಘೋಷೇಣ ಸಮಂತಾತ್ಕೃತನಿಃಸ್ವನೈಃ ॥ ೬ ॥

ಪೌರೈರ್ದಿದೃಕ್ಷುಭಿಃ ಸರ್ವೈರಾಕೀರ್ಣಪಣವೀಥಿಕಂ ।
ರಾಜಮಾರ್ಗೇ ಮಹಾರಾಜ ಪಿಂಡೀಕೃತಮಹಾಜನಂ ॥ ೭ ॥

---

ತೋರಣಗಳನ್ನು ಕಟ್ಟಿದ್ದರು ಬಾವುಟಗಳು ಚಿತ್ರವಿಚಿತ್ರ ವರ್ಣರಂಜಿತವಾಗಿ ಹಾರಾಡುತ್ತಿದ್ದುವು. ನೆಲದ ಮೇಲೆಲ್ಲೆಲ್ಲಿಯೂ ಪನ್ನೀರುಗಳನ್ನೂ ಗಂಧೋದಕಗಳನ್ನೂ ಚುಮುಕಿಸಿದ್ದರು

೪-೬ ಭರತನು ತನ್ನ ಸೋದರಮಾವನಾದ ಯುಧಾಜಿದ್ರಾಜನ ಅರಮನೆಗೆ ಬಂದಾಗ ನಡೆದ ವೈಭವವನ್ನು ಇಲ್ಲಿ ವರ್ಣಿಸಲಾಗಿದೆ ದಾರಿಯಲ್ಲಿ ಬರುವಾಗ ಇಕ್ಕೆಲದಲ್ಲೂ ನಿಂತಿದ್ದ ಜನರು ಸುಗಂಧಪರಿಪೂರಿತವಾದ ಪಂಚವರ್ಣಗಳಿಂದ ರಂಜಿತ ಪುಷ್ಪಗಳನ್ನರ್ಪಿಸಿದರು ಬೀದಿಯ ಎರಡು ಪಕ್ಕಗಳಲ್ಲೂ ಇರುವ ಅಂಗಡಿಗಳ ಮುಂದೆ ನೋಡುವುದಕ್ಕಾಗಿ ಬಹುಮಂದಿ ಬಾಲಕರು ನಿಬಿಡವಾಗಿ ತುಂಬಿದ್ದರು. ಗಗನವನ್ನು ಮುಟ್ಟುವಂತೆ ಕಟ್ಟಿದ್ದ ಸೌಧಗಳಲ್ಲಿ ನಿಂತಿರುವ ಜನರಾಶಿಯನ್ನು ನೋಡಿದರೆ ಆಕಾಶವು ಬಿಳೀಮೋಡಗಳಿಂದ ನಿಬಿಡವಾಗಿದ್ದಂತೆ ತೋರುತ್ತಿತ್ತು ಭರತನ ಕ್ಷೇಮಾರ್ಥವಾಗಿ ಊರಿನಲ್ಲಿರುವ ಎಲ್ಲಾ ದೇವಸ್ಥಾನಗಳಲ್ಲಿಯೂ ವಿಶೇಷವಾದ ಪೂಜಗಳೂ ಬಲಿಹರಣ ಪೂಜೆಗಳೂ ನಡೆಯುತ್ತಿದ್ದುವು. ಊರಿನ ಬೀದಿಗಳಲ್ಲೆಲ್ಲಿ ನೋಡಿದರೂ ವಿವಿಧ ವಾದ್ಯರವಗಳು ಕೇಳಿಬರುತ್ತಿದ್ದುವು

೭ ಈ ಮನೋಹರವಾದ ನೋಟವನ್ನು ನೋಡುವುದಕ್ಕಾಗಿ ಬೀದಿಬೀದಿಗಳಲ್ಲೂ ಅಂಗಡಿಯಂಗಡಿಗಳಲ್ಲೂ ಜನರ ಗುಂಪು ತುಂಬಿಹೋಗಿದ್ದಿತು. ಗಂಡಸರ ಗುಂಪಿಗಿಂತಲೂ ಹೆಂಗಸರ ತಂಡವು ತಡೆಯಲಾರದಷ್ಟು ತುಂಬಿದ್ದಿತು

ರಾಜಮಾರ್ಗಾದಸಾಕೃಷ್ಟಶೂನ್ಯಸರ್ವನಿವೇಶನಂ ।
ಯೋಷಿದ್ವೃಂದಸಮಾಕ್ರಾಂತರಾಜಮಾರ್ಗಮಹಾಗೃಹಂ ॥ ೮ ॥

ಪ್ರವಿವೇಶ ಪುರಂ ಶ್ರೀಮಾನ್ಭರತೋ ನಾಗಧೂರ್ಗತಃ ।
ತಸ್ಯ ಕಾಮಾಭವಪುಷಃ ಪ್ರವೇಶೇ ಭರತಸ್ಯ ತು ॥ ೯ ॥

ಗೃಹಕಾರ್ಯಾಣಿ ಸಂತ್ಯಜ್ಯ ಯಯುರ್ನಾರ್ಯೋ ಗವಾಕ್ಷಕಾನ್
ಕಾಶ್ಚಿದರ್ಧಾನುಲಿಪ್ತಾಂಗ್ಯಃ ಕಾಶ್ಚಿದೇಕಾಂಜಿತೇಕ್ಷಣಾಃ ॥ ೧೦ ॥

ಕೇಶೈಃ ಸಂಯಮಿತೈಃಕಾರ್ಧ್ಯೈಃಕಾಶ್ಚಿದರ್ಧನಿವೇಶಿತೈಃ ।
ಏಕಸ್ಮಿಂಶ್ಚರಣೇ ಕಾಶ್ಚಿದ್ಗೃಹೀತ್ವಾ ಕಾಷ್ಠಪಾದುಕಾಃ ॥ ೧೧ ॥

೮ ಊರಿನಲ್ಲಿರುವ ಯಾವ ಮನೆಗಳಲ್ಲಿಯೂ ಜನರ ಸಂಖ್ಯೆಯೇ ಕಡಿಮೆಯಾಗಿದ್ದಿತು. ಮನೆಯನ್ನು ಬಿಟ್ಟು ಸಕಲರೂ ನೋಟ ನೋಡುವುದಕ್ಕಾಗಿ ರಾಜಮಾರ್ಗಗಳಿಗೆ ಬಂದು ನಿಬಿಡವಾಗಿ ಸೇರಿಬಿಟ್ಟರು. ಇಂತಹ ಜನಸಂದಣಿಯಿಂದ ತುಂಬಿದ ಊರೊಳಗೆ ಭರತನು ಆನೆಯ ಮೇಲೆ ಕುಳಿತು ಬರುತ್ತಿದ್ದನು.

೯-೧೧ ಮನ್ಮಥನಂತೆ ಸುಂದರನಾದ ಭರತನು ಊರಿಗೆ ಬಂದಿರುವನೆಂಬ ವೃತ್ತಾಂತವನ್ನು ಕೇಳಿದೊಡನೆಯೇ ಮನೆಯೊಳಗೆ ಕೆಲಸಮಾಡುತ್ತಿದ್ದ ಹೆಂಗಸರೆಲ್ಲರೂ ಮಾಡುತ್ತಿದ್ದ ಕೆಲಸಗಳನ್ನು ಹಾಗೆ ಹಾಗಯೇ ಬಿಟ್ಟು ಬಿಟ್ಟು ಬೀದಿಯ ಬಾಗಿಲಿನ ಬಳಿಗೆ ಓಡಿಬಂದು ನಿಂತುಕೊಂಡರು. ಕೆಲವು ಜನ ಹೆಂಗಸರು ಸ್ನಾನಮಾಡುತ್ತಿದ್ದವರು ಅರ್ಧರ್ಧ ನೀರು ಸುರಿದುಕೊಂಡು ಹಾಗೆ ಹಾಗೆಯೇ ಒದ್ದೇ ಬಟ್ಟೆಯಲ್ಲಿಯೇ ನೋಟ ನೋಡುವುದಕ್ಕೆ ಓಡಿಬಂದುಬಿಟ್ಟರು. ಕಣ್ಣಿಗೆ ಕಪ್ಪಿಚ್ಚಿಕೊಳ್ಳುತ್ತಿದ್ದ ಹೆಂಗಸರಲ್ಲಿ ಕೆಲವರು ಒಂದು ಕಣ್ಣಿಗೆ ಕಾಡಿಗೆ ಹಚ್ಚಿಕೊಂಡಿದ್ದವರು, ಇನ್ನೊಂದು ಕಣ್ಣಿಗೆ ಹಚ್ಚಿಕೊಳ್ಳುವುದನ್ನು ಬಿಟ್ಟು ಬಿಟ್ಟು ಭರತನನ್ನು ನೋಡುವುದಕ್ಕಾಗಿ ಬಂದರು. ಮುಂದಲೆ ಬಾಚಿಕೊಳ್ಳುತ್ತಿದ್ದ ಹೆಂಗಸರು ಅರ್ಧ ಬಾಚಿಕೊಂಡು ಅರ್ಧವನ್ನು ಬಾಚಿಕೊಳ್ಳುವುದಕ್ಕೆ ಮುಂಚೆ ನೋಟವೆಲ್ಲಿ ತಪ್ಪೀತೋ ಎಂದು ಅರ್ಧರ್ಧ ತಲೆಬಾಚಿಕೊಂಡೇ ಬಂದುಬಿಟ್ಟರು. ಮೆಟ್ಟನ್ನು (ಜೋಡು) ಮೆಟ್ಟಿಕೊಂಡು ಹೋಗಬೇಕೆಂದು ಕೆಲವರು ಹೆಂಗಸರು ನೋಟಕ್ಕೆ ಹೊರಡುವ ಆತುರದಲ್ಲಿ ಒಂದು ಕಾಲಿಗೆ

ತ್ವರಿತಾಶಾ ಯಯುರ್ನಾರ್ಯೋ ದ್ವಿತೀಯೇ ಚರ್ಮಪಾದುಕಾಃ ।
ತಥಾ ಪರಾಃ ಸಮಾಕ್ಷಿಪ್ಯ ಪೂರ್ವಾಕ್ರಾಂತಗವಾಕ್ಷಕಾಃ ॥ ೧೨ ॥

ವ್ರಜಂತೀಷು ತಥಾನ್ಯಾಸು ಕಾಶ್ಚಿನ್ನಾರ್ಯೋ ಗವಾಕ್ಷಕಾತ್ ।
ವೇಗವತ್ಯೋ ಯಯುಃ ಶೀಘ್ರಂ ಸಂತ್ಯಕ್ತ್ವಾ ಚರ್ಮಪಾದುಕಾಃ ॥ ೧೩ ॥

ನಾರ್ಯಃ ಸ್ವವದನೈಶ್ಚಕ್ರುಃ ಸುಃವಕ್ತ್ರಾಂಸ್ತಾನ್ಗವಾಕ್ಷಕಾನ್ ।
ಅರ್ಧಪ್ರವಿಷ್ಟಸತ್ಕಂಬುಪಾಣಿವಾರಿಜಕುಡ್ಮಲಾಃ ॥ ೧೪ ॥

ದ್ವಿತೀಯಪಾಣಿಸಂದರ್ಶಸಮಾಕ್ರಾಂತ್ಯೈರ್ಯಯುಃ ಕರೈಃ ।
ನೀವೀಬಂಧನವಿಶ್ಲೇಷಸಮಾಕುಲಿತಚೇತನಾಃ ॥ ೧೫ ॥

---

ಮರದ ಜೋಡನ್ನೂ, ಇನ್ನೊಂದು ಕಾಲಿಗೆ ಚರ್ಮದ ಪಾದರಕ್ಷೆಯನ್ನೂ ಮೆಟ್ಟಿ ಕೊಂಡು ಹೊರಟರು ಈ ರೀತಿ ಹೊರಟ ಅವರು ಕಿಟಕಿಯ ಬಳಿಗೆ ಹೋಗಿ ಕುಳಿತು ನೋಡಿದಾಗ ಬೇರೆ ಬೇರೆ ಇಜ್ಜೋಡಿ ಜೋಡುಗಳನ್ನು ಮೆಟ್ಟಿದ್ದುದನ್ನು ಕಂಡು ನಾಚುತ್ತಾ ಆ ಜಾಗದಿಂದ ಮನೆಗೆ ಹೊರಟು ಸರಿಸರಿ ಜೋಡನ್ನು ಮೆಟ್ಟಿ ಕೊಂಡು ಬರಲಿಕ್ಕೆ ಹೊರಟೊಡನೆಯೇ ಅವರು ಕುಳಿತಿದ್ದ ಕಿಟಕಿಯ ಸಮೀಪದ ಜಾಗಗಳನ್ನು ಮತ್ತೆ ಕೆಲವರು ಹೊಸದಾಗಿ ಬಂದು ಆಕ್ರಮಿಸಿಬಿಟ್ಟರು.

೧೩ ಹೀಗೆ ತಾವು ಕುಳಿತಿದ್ದ ಜಾಗವನ್ನು ಬೇರೆ ಹೊಸಬರು ಬಂದು ಆಕ್ರಮಿಸಿದುದನ್ನು ನೋಡಿ ಹಿಂದೆ ಕುಳಿತಿದ್ದ ಹೆಂಗಸರು, ತಮ್ಮ ಜಾಗವೆಲ್ಲಿ ಹೋದೀತೋ ಎಂಬ ಹೆದರಿಕೆಯಿಂದ ತಮ್ಮ ತಮ್ಮ ಕಾಲಿನಲ್ಲಿದ್ದ ಆ ಚರ್ಮ ಮತ್ತು ಮರಗಳ ಇಜ್ಜೋಡೀ ಪಾದರಕ್ಷೆಗಳನ್ನು ಸಹ ಅಲ್ಲಿಯೇ ಬಿಟ್ಟು ಬಿಟ್ಟು ಪುನಃ ಓಡಿ ಬಂದು ಮೊದಲಿದ್ದವರನ್ನು ನೂಕಿ ತಮ್ಮ ತಮ್ಮ ಜಾಗಗಳನ್ನು ಆಕ್ರಮಿಸಿ ಕುಳಿತರು.

೧೪ ಈ ರೀತಿ ಕಿಟಕಿಯ ಬಳಿ ಕುಳಿತ ನೀಲಕುಂತಲೆಯರು ಅರ್ಧ ದೇಹ ವನ್ನು ಕಿಟಕಿಯಲ್ಲಿ ಚಾಚಿ, ಮುಖವನ್ನು ಬೀದಿಯ ಕಡೆ ಮಾಡಿ ಬಗ್ಗಿ ನೋಡು ತ್ತಿದ್ದರು. ಕೆಲವರು ಕತ್ತನ್ನು ಹೊರಗೆ ಚಾಚಿ ಕೈಗಳಿಂದ ಕಿಟಕಿಯ ಸರಳುಗಳನ್ನು ಹಿಡಿದು ಬಗ್ಗಿ ಬಗ್ಗಿ ನೋಡುತ್ತಿದ್ದರು.

೧೫. ಅಲಂಕಾರವಾಗಿ ಉಟ್ಟಿದ್ದ ರೇಷ್ಮೆಯ ಬಹು ಬೆಲೆಯುಳ್ಳ ಸೀರೆಯ ನೆರಿಯು ಎಲ್ಲಿ ಬಿಚ್ಚಿಹೋಗುವುದೋ ಎಂಬ ಹೆದರಿಕೆಯಿಂದ ಒಂದು ಕೈಯಿಂದ

ಯಯುರೇವಾಪರಾಸ್ತತ್ರ ಪಾಣಿಸಂಶ್ಲಿಷ್ಟನೀವಯಃ ।
ಕುಸುಮಪ್ರಕರಂ ಕಾಶ್ಚಿದೂಹಮಾನಾಃ ಶಿರೋಗತೈಃ ॥ ೧೬ ॥

ಯಯುರೇವಾಂಶುಕೈರ್ದೀರ್ಘೈಸ್ತ್ವರಮಾಣಾ ಗವಾಕ್ಷಕಾಃ ।
ಸಿತಾಸಿತೇನ ರಾಮಾಣಾಂ ರಮಣೀಯೇನ ರಾಘವಃ ॥ ೧೭ ॥

ಯಯೌ ದೃಷ್ಟಿನಿಪಾತೇನ ರಜ್ಯಮಾನ ಇವಾಂಶುಮಾನ್ ।
ಸ ಚಕರ್ಷ ತದಾ ತಾಸಾಂ ಪತಿತೈರ್ನೇತ್ರರಶ್ಮಿಭಿಃ ॥ ೧೮ ॥

ಹೃದಯಾನ್ಯಿಗೃಹೀತ್ವೇವ ಗಚ್ಛಮಾನಃ ಸ ರಾಘವಃ ।
ಸ ತು ದೃಗ್ವಿಷಯೋ ಯಾಸಾಂ ಯಾಸಾಂ ತಸ್ಮಾತ್ಪರಾಗತಃ ॥ ೧೯ ॥

---

ಸೀರೆಯ ನೆರಿಯನ್ನೂ, ಮತ್ತೊಂದು ಕೈಯಿಂದ ಹಾರಿ ಹಾರಿ ಹೋಗುತ್ತಿದ್ದ ನೆರಿಗನ್ನೂ ಭದ್ರವಾಗಿ ಸರಿಮಾಡಿಕೊಳ್ಳುತ್ತಾ ಕೆಲವು ಮಂದಿ ಹೆಂಗರಸು ಭರತನನ್ನು ನೋಡಲಿಕ್ಕೆ ಬಂದರು

೧೬ ಇನ್ನು ಕೆಲವು ಮಂದಿ ನಾರಿಯರು ಮುಡಿಯಲ್ಲಿ ಹೂಗಳನ್ನು ಮುಡಿದು ಅವನ್ನು ಬಲಗೈಯಿಂದ ಸವರಿ ಸವರಿ ನೋಡಿಕೊಳ್ಳುತ್ತಾ, ಎಡಗೈಯಿಂದ ಸೀರೆಯ ನರಿಯನ್ನು ಸವರಿಕೊಳ್ಳುತ್ತಾ ನೋಟ ನೋಡಲು ಓಡಿಬಂದರು.

೧೭-೧೯ ಕೆಲವರು ದೊಡ್ಡ ದೊಡ್ಡ ಸೀರೆಗಳನ್ನು ಮೈ ತುಂಬುವಂತೆ ಚೆನ್ನಾಗಿ ಉಟ್ಟುಕೊಂಡು ಬೇಗ ಬೇಗ ಕಿಟಕಿಯ ಪತ್ತಿರಕ್ಕೆ ನೋಟನೋಡಲು ತ್ವರೆಯಾಗಿ ಬರುತ್ತಿದ್ದರು ಸೂರ್ಯನು ತನ್ನ ಸಹಸ್ರಾವಧಿ ಕಿರಣಗಳನ್ನು ಎಲ್ಲೆಲ್ಲೂ ಪ್ರಸರಿಸುವಂತೆ ರಘುವಂಶೋತ್ಪನ್ನನಾದ ಭರತನು ಈ ನೋಟಕರ ಸಡಗರಗಳನ್ನು ಅತ್ತಿತ್ತ ದೃಷ್ಟಿಯಿಟ್ಟು ನೋಡುತ್ತಾ, ಸಕಲರ ಮನಸ್ಸನ್ನೂ ದೃಷ್ಟಿಗಳನ್ನೂ ತನ್ನೆಡೆಗೆ ಸೆಳದುಕೊಳ್ಳುತ್ತಾ, ಯಾರಾದರೂ ಹೆಂಗಸರು ತನ್ನ ಕಡೆಗೆ ನೋಡುತ್ತಿದ್ದಾಗ ತನ್ನ ನೋಟವೂ ಅಕಸ್ಮಾತ್ತಾಗಿ ಅದರೊಡನೆ ಸಂಧಿಸಿಬಿಟ್ಟ ಸಮಯದಲ್ಲಿ ತನ್ನ ನಯನ ಗತಿಯನ್ನು ಥಟ್ಟನೆ ಬೇರೆ ಕಡೆಗೆ ತಿರುಗಿಸುತ್ತಾ ಮುಂದೆ ಮುಂದೆ ಬಂದನು

ನ ತಾ ಬುಬುಧಿರೇ ಕಾಂಚಿತ್ಕ್ರಿಯಾಂ ಚಿತ್ರಗತಾ ಇವ ।
ಭರತೇ ದೂರಯಾತೇಽಪಿ ನಿಶ್ಚೇಷ್ಟಾಃ ಕಾಶ್ಚಿದೇವ ತಾಃ ॥ ೨೦ ॥

ಆಕೃಷ್ಟಾಸ್ತಾ ಯಯುಃ ಕ್ಷೋಣೀಂ ಪ್ರೇರ್ಯಮಾಣೈಃ ಸಖೀಜನೈಃ ।
ಪ್ರದ್ಯುಮ್ನಾಂಶಸಮುತ್ಪನ್ನಃ ಪ್ರದ್ಯುಮ್ನಸಮದರ್ಶನಃ ॥ ೨೧ ॥

ಆದಾಯ ತಾಸಾಂ ಚೇತಾಂಸಿ ಯಯೌ ರಾಜಗೃಹಂ ದ್ರುತಂ ।
ತಸ್ಮಿನ್ರಾಜಗೃಹೇ ರಾಜ್ಞ ರಾಘವೋ ರಾಜಮಂದಿರಂ ॥ ೨೨ ॥

ಆಸಸಾದ ಮಹಾತೇಜಾಃ ಕೈಲಾಸಮಿವ ಚಾಪರಂ ।
ಪ್ರವಿಶ್ಯ ಸ ಗೃಹಂ ಮುಖ್ಯಂ ಪ್ರೇಷಯಾಮಾಸ ಭೂಭುಜಂ ॥ ೨೩ ॥

ಪಾನಭೋಜನವಾಸಾಂಸಿ ಸೈನಿಕಾನಾಂ ಚ ಯಾದವ ।
ಉವಾಸ ಸ ಸುಖಂ ತತ್ರ ಪೂಜಿತಶ್ಚ ಯುಧಾಜಿತಾ ।
ಜಗಾಮ ಚಾಸ್ತಂ ಸವಿತಾ ಜಪಾಪುಷ್ಪೋತ್ಕರಪ್ರಭಃ ॥ ೨೪ ॥

೨೦-೨೨ ಭರತನು ತಮ್ಮ ಕಣ್ಣುಗಳನ್ನು ವಂಚಿಸಿ ಮುಂದಕ್ಕೆ ಹೊರಟು ಹೋದ ಬಳಿಕ ಲಲನೆಯರೆಲ್ಲರೂ ಏನೇನೂ ತೋರದ ಚಿತ್ರದಲ್ಲಿ ಬರೆದ ಬೊಂಬೆಗಳಂತೆ ಸುಮ್ಮನೆ ಕುಳಿತುಬಿಟ್ಟರು. ಭರತನ ಸವಾರಿ ಮುಂದೆ ಹೊರಟುಹೋದನಂತರ ಕೆಲವು ಮಂದಿ ಸುಂದರಿಯರು ನಿಶ್ಚೇಷ್ಟಿತರಾಗಿ ನೆಲದ ಮೇಲೆ ಬಿದ್ದರು. ಸಖಿಯರು ಬಂದು ಎಷ್ಟು ಕೂಗಿ ಎಬ್ಬಿಸಿದರೂ, ಮೇಲಕ್ಕೆ ಎಳೆದರೂ ಅವರು ಏಳಲೇ ಇಲ್ಲ. ಅದೇಕೆಂದರೆ, ಭರತನು ದಾರಿಯಲ್ಲಿ ರಾಜಗೃಹವನ್ನು ಕುರಿತು ಮೆರವಣಿಗೆಯಾಗಿ ಹೋಗುವಾಗಲೇ ಇವರೆಲ್ಲರ ಮನಸ್ಸನ್ನೂ ಎಳೆದುಕೊಂಡು ಹೋಗಿದ್ದನು.

೨೩ ಇತ್ತ ಆ ಮಹಾತೇಜಸ್ವಿಯಾದ ಭರತನು ಕೈಲಾಸಪರ್ವತವನ್ನೇ ಬೇರೆಯೊಂದು ಇಲ್ಲಿ ನಿಂತಿದೆಯೋ ಎಂಬಂತೆ ಬಹಳ ಎತ್ತರದವರೆಗೆ ಕಟ್ಟಲ್ಪಟ್ಟಿದ್ದ, ತನ್ನ ಸೋದರಮಾವನಾದ ಯುಧಾಜಿತರಾಜನ ಅರಮನೆಯನ್ನು ಪ್ರವೇಶಿಸಿ ತನ್ನ ಸಾಮಂತ ರಾಜರಿಗೂ ಹೇಳಿ ಕಳುಹಿಸಿದನು.

೨೪ ತನ್ನ ಜತೆಯಲ್ಲಿ ಬಂದಿದ್ದ ಸಕಲ ಸೈನಿಕರಿಗೂ ಉಚಿತವಾದ ಊಟ ಸ್ನಾನ, ತಿಂಡಿ, ಪಾನಕಗಳನ್ನೂ, ಬಟ್ಟೆಗಳನ್ನೂ ಯಥೇಚ್ಛವಾಗಿ ಕೊಡಿಸಿ ಉಪಚಾರ'

ಜಾಂಬೂನದೇ ರತ್ನಸಹಸ್ರಚಿತ್ರೇ
ಸ ರಾಜಪುತ್ರಃ ಶಯನೇ ವಿಚಿತ್ರೇ ।
ಸುಷ್ವಾಪ ರಾತ್ರೌ ಭವನೇ ವಿಚಿತ್ರೇ
ನಿದಾಘ ರಾತ್ರಿಂ ಪವನೇ ವಿಚಿತ್ರೇ ॥ ೨೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭರತಸ್ಯ ರಾಜಗೃಹಪ್ರವೇಶವರ್ಣನೋ
ನಾಮಾಷ್ಟೋತ್ತರ ದ್ವಿಶತತಮೋಽಧ್ಯಾಯಃ.

---

ಮಾಡಿದನು ಯುಧಾಜಿತ್ರಾಜನೂ ಸಹ ಪರಮ ಸಂತೋಷಪರವಶನಾಗಿ ಅವ
ರೆಲ್ಲರನ್ನೂ ಒಂದು ದಿವಸ ತನ್ನ ಅರಮನೆಯಲ್ಲಿ ತಡೆದು ಮನದಣಿಯುವಂತೆ
ಉಪಚಾರಮಾಡಿದನು ಈ ರೀತಿಯಾಗಿ ಆದಿನ ಹಗಲು ಸುಖವಾಗಿ ಕಳೆದು
ಸಾಯಂಕಾಲವಾಯಿತು

೨೫ ಆ ಬೇಸಗೆಯ ಕಾಲದ ರಾತ್ರಿಯಲ್ಲಿ ಮಂದಮಾರುತನು ಮೆಲ್ಲಮೆಲ್ಲಗೆ
ಚಿತ್ರವಿಚಿತ್ರವಾಗಿ ಬೀಸುತ್ತಿರಲು, ಚಿತ್ರವಿಚಿತ್ರವಾಗಿ ಚಿತ್ರಿಸಿದ್ದ ಸುವರ್ಣಮಯವಾದ
ಮಂಚದ ಮೇಲೆ ಹಾಸಿದ್ದ ಮೃದುಸ್ಪರ್ಶವಾದ ಮೆತ್ತನೆಯ ಹಾಸಿಗೆಯ ಮೇಲೆ
ಭರತನು ಮಲಗಿ ನಿದ್ರಿಸಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಭರತನ ರಾಜಗೃಹ ಪ್ರವೇಶದ
ವರ್ಣನೆಯೆಂಬ ಹೆಸರಿನ ಇನ್ನೂರೆಂಟನೆಯ
ಅಧ್ಯಾಯ ಮುಗಿದುದು



ಶ್ರೀಃ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ನವೋತ್ತರದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ತಸ್ಮಿನ್ರಾತ್ರ್ಯವಸಾನೇ ತು ಭೂಮಿಪಾನಾಂ ಪೃಥಕ್ಪೃಥಕ್ ।
ಕಟಕೇಷ್ವಭ್ಯಹನ್ಯಂತ ಸಂಜ್ಞಾತೂರ್ಯಾಣಿ ಯಾದವ ॥ ೧ ॥

ಬಹೂನಾಂ ಬಲಮುಖ್ಯಾನಾಂ ನಾನಾಲಿಂಗಾನಿ ಭಾಗಶಃ ।
ತೇಷಾಂ ಕೋಲಾಹಲಃ ಶಬ್ದೋ ಬಭೂವ ಗಗನಂಗಮಃ ॥ ೨ ॥

ವಿವಿಶುರ್ಭರತಸ್ಯಾಪಿ ತತಃ ಪ್ರಾಬೋಧಿಕಾ ಜನಾಃ ।
ವೈಣಿಕಾ ಗಾಯಕಾ ಮುಖ್ಯಾ ವಂಶವಾದ್ಯವಿದಶ್ಚ ಯೇ ॥ ೩ ॥

### ಇನ್ನೂರೊಂಭತ್ತನೆಯ ಅಧ್ಯಾಯವು.

೧-೨ ಮಾರ್ಕಂಡೇಯನು ಹೇಳಿದನು —ಆ ದಿನ ರಾತ್ರಿ ಕಳೆಯಿತು, ಅರುಣೋದಯ ಸಮಯವು ಸಮೀಪಿಸಿತು ಆ ಬಿಡಾರಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ನಿರ್ಮಿತಗಳಾಗಿದ್ದ ಸೇನಾನಿವೇಶನಗಳಲ್ಲಿ ಮಲಗಿದ್ದ ರಾಜರುಗಳನ್ನೂ, ಅವರ ಪರಿವಾರವನ್ನೂ ಎಬ್ಬಿಸುವುದಕ್ಕಾಗಿ ಪ್ರಬೋಧಸಂಜ್ಞಾಸೂಚಕವಾದ ಮೃದು, ಮಧುರ ವಾದ್ಯ (ನೌಪತ್ತು) ಗಳು ಧ್ವನಿಮಾಡಿದುವು ಮತ್ತು ಸೈನ್ಯಾಧ್ಯಕ್ಷರ ಹೆಸರುಗಳನ್ನೂ ಬೇರೆಬೇರೆಯಾಗಿ ಹೇಳಿ ಎಬ್ಬಿಸುತ್ತಿದ್ದ ಶಬ್ದಗಳೂ ಸಹ ಒಟ್ಟುಗೂಡಿ ಆಕಾಶದವರೆಗೂ ಕೇಳಿಬರುವಂತೆ ಕೋಲಾಹಲವುಂಟಾಯಿತು.

೩-೫. ಭರತನು ಮಲಗಿದ್ದ ಮನೆಯ ಹೊರಭಾಗದಲ್ಲೂ ಸಹ ಇದೇ ರೀತಿ

ಮಾರ್ದಂಗಿಕಾ ಪಾಣವಿಕಾಃ ಶಂಖವಾದನಕಾಶ್ಚ ಯೇ ।
ರಕ್ತಕಂಠಾಃ ಸಮಧುರಾ ಯೇ ಚ ಮಂಗಲಪಾಠಕಾಃ ॥ ೪ ॥

ಸೂತಮಾಗಧಮುಖ್ಯಾಶ್ಚ ವಂದಿನಶ್ಚ ನರಾಧಿಪ ।
ತುಷ್ಟುವುರ್ಭರತಂ ವೀರಂ ಸುಖಸುಪ್ತಂ ಮಹಾಮತಿಂ ॥ ೫ ॥

ಸುಪ್ರಭಾತಂ ಸಮುತ್ತಿಷ್ಠ ಪ್ರಭಾತಾ ರಜನೀ ಶುಭಾ ।
ದಿಕ್ಪ್ರಾಚೀ ರಘುಶಾರ್ದೂಲ ವರ್ತತೇಽರುಣರಂಜಿತಾ ॥ ೬ ॥

ನೂನಮಸ್ಯಾಂ ಹಿ ವೇಲಾಯಾಂ ಮಾತಲಿಸ್ತ್ರಿದಶಾಧಿಪಂ ।
ವಿಬೋಧಯತಿ ರಾಜೇಂದ್ರ ಸುಖಾಯ ಜಗತಾಂ ವಿಭುಂ ॥ ೭ ॥

ತ್ವಯಿ ಸುಪ್ತೇ ಜಗತ್ಸುಪ್ತಂ ವಿಬುದ್ಧೇ ಚ ಸುಖಾನ್ವಿತಂ ।
ತಸ್ಮಾದುತ್ತಿಷ್ಠ ಲೋಕಾನಾಂ ಶಿವಾಯ ರಘುನಂದನ ॥ ೮ ॥

---

ಪ್ರಾಬೋಧಿಕ (ಎಚ್ಚರಗೊಳಿಸುವ) ಜನರು ಸೇರಿ ನಿಂತರು ವೀಣೆ ನುಡಿಸುವವರು, ಸಂಗೀತಗಾರರು, ಕೊಳಲನ್ನೂದುವವರು, ಮೃದಂಗ ಬಾರಿಸುವವರೂ, ಪಟ್ಟರಿ ಬಾರಿಸುವವರೂ, ಶಂಖವನ್ನೂದುವವರೂ, ಮಧುರಕಂಠದವರು, ಮಂಗಳ ಪಾಠಕರು ಹೊಗಳುಭಟರು, ಇವರೆಲ್ಲರೂ ಅಲ್ಲಿ ನೇರಿ ತಮ್ಮ ತಮ್ಮ ವಾದ್ಯಗಳಿಂದಲೂ, ತಮ್ಮ ತಮ್ಮ ಗಾನಗಳಿಂದಲೂ, ಸ್ತುತಿಗಳಿಂದಲೂ, ಸುಖವಾಗಿ ಮಲಗಿದ್ದ ಭರತನಿಗೆ ಎಚ್ಚರ ವಾಗುವಂತೆ ಮಾಡಿದರು

೬-೭ ಭರತ! ರಘುವಂಶತಿಲಕ! ರಾತ್ರಿ ಕಳೆದು ಬೆಳಗಾಯಿತು, ಏಳು. ಮೂಡಲದಿಕ್ಕು ಕೆಂಪಾಯಿತು ಇದೇ ಸಮಯದಲ್ಲಿಯೇ ಇಂದ್ರನ ಸಾರಥಿಯಾದ ಮಾತಲಿಯೂ ಸಹ ತನ್ನೊಡೆಯನಾದ ದೇವೇಂದ್ರನನ್ನು ಸಕಲ ಲೋಕಗಳ ಸೌಖ್ಯಕ್ಕೋಸ್ಕರ ಎಬ್ಬಿಸುತ್ತಲಿದ್ದಾನೆ! ನೀನೂ ಏಳು

೮ ಎಲೈ ಭರತನೇ! ನೀನು ಮಲಗಿದ್ದರೆ ಸಮಸ್ತ ಪ್ರಪಂಚವೂ ಮಲಗಿರುತ್ತದೆ. ನೀನು ಎದ್ದಿದ್ದರೆ ಸಕಲ ಜಗತ್ತೂ ಚಟುವಟಿಕೆಯಿಂದಲೂ ಸುಖವಾಗಿರುತ್ತದೆ ಆದುದರಿಂದ ನೀನು ಲೋಕಕಲ್ಯಾಣಕ್ಕೋಸ್ಕರವಾಗಿ ಮೇಲಕ್ಕೆ ಎದ್ದೇಳು ರಘುನಾಯಕ!

ತ್ವಂ ಹಿ ಸರ್ವಗುಣಾರಾಮೋ ಯಥಾ ರಾಮೋ ಮಹೀಪತಿಃ ।
ಗುಣೈಃ ಶಶಾಂಕರಶ್ಮ್ಯಾಭೈಸ್ತ್ವಯಾ ವೈ ರಂಜಿತಂ ಜಗತ್ ॥ ೯ ॥

ಅತ್ಯಾಶ್ಚರ್ಯಂ ಮಹಾಬಾಹೋ ಯಶಸಾ ಸುಸಿತೇನ ತೇ ।
ಮುಖಾನ್ಯರಾತಿವೃಂದಾನಾಂ ಕ್ರಿಯಂತೇ ಮಲಿನಾನಿ ಯತ್ ॥ ೧೦ ॥

ಕೃಪಾಣಧಾರಪಾನೀಯಂ ದೃಷ್ಟ್ವಾರಾತಿಗಣಸ್ತವ ।
ತೃಷ್ಣಯೈವ ಭವತ್ಯಾಶು ರಂಜಿತಾನಿಲಯೋ ಭಯಾತ್ ॥ ೧೧ ॥

ಅಕ್ಷೋಭ್ಯಶ್ಚಾತಿಗಂಭೀರೋ ಭವಾನ್ರತ್ನಾಕರಸ್ತಥಾ ।
ಆಗ್ರಾಹ್ಯತ್ವಾತ್ಸಮುದ್ರೇಣ ನ ಸಮಃ ಪ್ರತಿಭಾತಿ ನಃ ॥ ೧೨ ॥

---

೯ ನಿನ್ನ ಅಣ್ಣನಾದ ಶ್ರೀರಾಮನು ಅದೆಂತು ಸಕಲ ಗುಣ ಗುಣಾಭಿರಾಮ-ನಾಗಿರುವನೋ ಅದರಂತೆಯೇ ನೀನೂ ಇರುತ್ತೀಯೆ ! ಆಹ್ಲಾದಜನಕನಾದ ಚಂದ್ರನ ಬೆಳ್ದಿಂಗಳಂದದಿ ನೀನು ಸಹ ನಿನ್ನ ಸುಗುಣಗಳೆಂಬ ಬೆಳ್ದಿಂಗಳಿಂದ ಲೋಕವನ್ನೆಲ್ಲಾ ಪ್ರಕಾಶಪಡಿಸುತ್ತಲಿರುವೆ

೧೦. ಯಶಸ್ಸೆಂಬ ನಿನ್ನ ಸ್ವಚ್ಛ ಬೆಳದಿಂಗಳನ್ನು ಕಂಡೊಡನೆಯೇ ನಿನ್ನ ಶತ್ರುಮುಖವೆಂಬ ಕಮಲಪುಷ್ಪಗಳು ಬಾಡಿಹೋಗುತ್ತವೆ ಇದು ಪರಮಾಶ್ಚರ್ಯವೈ ! ಭರತಮಹಾರಾಜ ! ಕೈರವಗಳು ಚಂದ್ರೋದಯವಾದರೆ ಅರಳಬೇಕಷ್ಟೆ ! ಭರತನ ಯಶಶ್ಚಂದ್ರಿಕೆಯು ಶತ್ರುಮುಖರೂಪವಾದ ಕೈರವಗಳನ್ನು ಬಾಡಿಸುವುದೆಂದು ಹೇಳಿರುವುದರಿಂದ, ಇದು ಆಶ್ಚರ್ಯವೆಂದು ಉತ್ಪ್ರೇಕ್ಷಮಾಡಿರುತ್ತಾರೆ.

೧೧ ಬಾಯಾರಿ ಬಳಲಿ ಬಂದ ನಿನ್ನ ಶತ್ರುಗಳ ದಾಹವು ನಿನ್ನ ಕೃಪಾಣ ಧಾರೆ (ಕತ್ತಿಯ ಅಲಗು) ಯಿಂದ ಹೊರಟ ನೀರನ್ನು ಕುಡಿಯಲು ಕುತೂಹಲಪಟ್ಟು, ಇದು ನೀರಲ್ಲ, ಕತ್ತಿಯ ಅಲುಗೆಂದು ತಿಳಿದ ಮೇಲೆ ಹಿಂದಕ್ಕೆ ಓಡಿ ಹೋಗಿ ಅಂಜಿಕೆ ಯಿಂದ ಅಡಗಿ ಹೋಗುತ್ತಿರುವುವು

೧೨ ಭರತನೇ ! ನೀನು ಅಕ್ಷೋಭ್ಯನು (ಕಲಕಲ್ಪಡಲು ಅರ್ಹನಲ್ಲ) ಸಮುದ್ರವಾದರೋ ಕ್ಷೋಭ್ಯವು (ಕಲಕಲ್ಪಡಲು ಯೋಗ್ಯವಾದುದು) ಇದರಂತೆ ನೀನೂ ಸಮುದ್ರನೂ ಸಮಾನನಾದ ಗಾಂಭೀರ್ಯವುಳ್ಳವರಾಗಿರುತ್ತೀರಿ. ಸಮುದ್ರದ

**ಸೌಮ್ಯಃ ಕಲಾವಾನ್ ಲಕ್ಷ್ಮೀವಾನ್ ನಯನಾನಂದಕಾರಕಃ ।**
**ದೋಷಾಕರೇಣ ಕ್ಷಯಿಣಾ ನೌಪಮ್ಯಂ ತೇ ನರಾಧಿಪ ॥ ೧೩ ॥**

**ಬಾಹುಭೋಜ್ಯಾದಿವಿಸ್ತೀರ್ಣಾ ಸರ್ವಾಶ್ರಯವತೀ ದೃಢಾ ।**
**ನೌಪಮ್ಯಂ ಯಾತಿ ತೇ ಸಮ್ಯಕ್ ಕ್ಷೋಣೀ ವಿಂಧ್ಯೇನ ಕಂಪಿನಾ ॥ ೧೪ ॥**

**ಯತ್ತೇಽಸ್ತಿ ತದವಶ್ಯಂ ತ್ವಂ ದದಾಸಿ ರಿಪುಸೂದನ ।**
**ಅವಿದ್ಯಮಾನಾ ಭೀರ್ದತ್ತಾ ಭವತಾರಿಗಣೇ ಕುತಃ ॥ ೧೫ ॥**

**ನಿಮೇಷಮಪಿ ಯೋ ದೃಷ್ಟಸ್ತ್ವಯಾಪಾಂಗನಿರೀಕ್ಷಣೈಃ ।**
**ಸಮಗ್ರದೃಷ್ಟ್ಯಾ ಯಂ ದೃಷ್ಟ್ವಾ ನಿತ್ಯಮೇವೇಕ್ಷಣೈಃ ಶ್ರಿಯಾಃ ॥ ೧೬ ॥**

ಒಳಿಗೆ ಹೋಗಲು ಜನರಿಗೆ ಸಾಧ್ಯವು　ನಿನ್ನ ಬಳಿಗೆ ಬರಲು ಯಾರಿಗೂ ಸಾಧ್ಯವಿಲ್ಲ ವಾದುದರಿಂದ ಸಮುದ್ರವು ಕೂಡ ನಿನ್ನ ಸರಿಸಮ ಬರಲಾರದು

೧೩　ಹದಿನಾರು ಕಲೆಗಳಿಂದ ಕೂಡಿದ ಚಂದ್ರನೂ ಕೂಡ ನಿನ್ನನ್ನು ಸರಿ ಹೋಲಲಾರನು.　ಅದೇಕೆಂದರೆ ಅವನು ಕ್ಷಯಿಸಿ ಹೋಗತಕ್ಕವನು.　ಮತ್ತು ದೋಷಾಕರನಾಗಿರುವನು　ನೀನಾದರೋ ಷೋಡಶಕಲಾ ಪರಿಪೂರ್ಣನಾದವನು, ಮತ್ತು ನಯನಾನಂದಕರನಾಗಿ ಸಂಪದ್ಯುಕ್ತನಾಗಿ ವಿರಾಜಿಸುತ್ತಿರುವವನಾಗಿದ್ದೀಯೆ.

೧೪　ಎಲೈ ಭರತನೇ! ನಿನ್ನ ಭುಜಬಲದಿಂದಾಳಲ್ಪಡುತ್ತಿರುವ, ಸಕಲಕ್ಕೂ ಆಶ್ರಯಸ್ಥಾನವಾದ ಅತ್ಯಂತ ವಿಸ್ತೀರ್ಣವಾದ ಈ ಭೂಮಂಡಲವನ್ನು ವ್ಯಾಪಿಸಿ ನಿಂತಿರುವ ನಿನ್ನನ್ನು ಕಂಡರೆ ವಿಂಧ್ಯಪರ್ವತವೂ ಸಹ ಔನ್ನತ್ಯದಲ್ಲಿ ನಿನ್ನ ಸರಿಸಮ ಬರಲಾರದು.

೧೫　ಎಲೈ ಶತ್ರುಭಯಂಕರನಾದ ಭರತನೇ! ನೀನು ಯಾರಿಗೇನನ್ನು ಕೇಳಿದರೂ ಕೊಟ್ಟುಬಿಡುವ ಸ್ವಭಾವವುಳ್ಳವನಾದಾಗ್ಯೂ ನಿನ್ನನ್ನು ಕಂಡರೆ ನಿನ್ನ ಶತ್ರುಗಳು ಅದೇಕೆ ಇಲ್ಲದೆ ಇಷ್ಟ ಭಯವನ್ನಿಟ್ಟುಕೊಂಡಿರುವರೋ ತಿಳಿಯದು.

೧೬　ಎಲೈ ಭರತನೇ! ನೀನು ಒಂದೇನಿಮಿಷಕಾಲ ಯಾರನ್ನು ಕಡೆಗಣ್ಣಿನಿಂದ ನೋಡುವಿಯೋ ಅಂತಹ ಮನುಷ್ಯನನ್ನು ಮಹಾಲಕ್ಷ್ಮಿಯು ಪ್ರತಿದಿನವೂ ಸಂಪೂರ್ಣದೃಷ್ಟಿಯಿಂದ ನೋಡುತ್ತಾಳೆ　ಅಂದರೆ ರಾಜಾನುಗ್ರಹಕ್ಕೆ ಒಳಗಾದವನಿಗ

ಕ್ಷುರಪರ್ಯಂತಧಾರೇಣ ಚಕ್ರೇಣಾರಿಗಣಸ್ಯ ತೇ ।
ಶಿರಾಂಸ್ಯಪಹರತ್ವಾಜೌ ದೇವದೇವೋ ಜನಾರ್ದನಃ ॥ ೧೭ ॥

ಕಪಾಲಮಾಲೀ ಖಟ್ವಾಂಗೀಶ ಶಾಂಕಕೃತಭೂಷಣಃ ।
ವಾಮಾರ್ಧದಯಿತಾಕಾರಃ ಶಂಕರಃ ಶಂ ಕರೋತು ತೇ ॥ ೧೮ ॥

ಪದ್ಮಾಸನಃ ಪದ್ಮಜನ್ಮಾ ಸರ್ವಲೋಕಪಿತಾಮಹಃ ।
ಬುದ್ಧಿಂ ಮೇಧಾಂ ಧೃತಿಂ ಲಕ್ಷ್ಮೀಂ ಬಲಂ ಚ ವಿದಧಾತು ತೇ ॥ ೧೯ ॥

ನಭಶ್ಚರೋಽಂಬುಜೋ ದೇವೋ ದಿಗ್ವಧೂಕರಪೂರಕಃ ।
ಬ್ರಹ್ಮಾಂಡಮಂಡಪೇ ದೀಪಃ ಸುಪ್ರಭಾತಂ ಕರೋತು ತೇ ॥ ೨೦ ॥

---

ಬಡತನವೆಂಬುವುದು ಕನಸಿನಲ್ಲಿಯೂ ಇರುವುದಿಲ್ಲ ಅವನು ಮಹಾರಾಜನಿಂದ ನಿಜವಾಗಿಯೂ ಶ್ರೀಮಂತಪದವಿಗೇರಿಸಲ್ಪಡುತ್ತಾನೆಂದು ಮುಖ್ಯಾಭಿಪ್ರಾಯ

೧೭ ಎಲೈ ಭರತನೇ ! ಪರಮಾತ್ಮನ ಪರಮಾನುಗ್ರಹಕ್ಕೆ ಪಾತ್ರನಾದ ನಿನ್ನ ಶತ್ರುಗಳು ಬಹು ಹರಿತವಾದ ನಿನ್ನ ಚಕ್ರದ ಅಲಗುಗಳಿಗೆ ಸಿಕ್ಕಿ ತಮ್ಮ ತಮ್ಮ ಕತ್ತುಗಳನ್ನು ಒಲಿ ಕೊಡುತ್ತಿರುವರಯ್ಯ ಮಹಾರಾಜ !

೧೮ ಎಲೈ ಮಹಾನುಭಾವನಾದ ಭರತನೇ ! ಕಪಾಲಮಾಲಿಯೂ, ಖಟ್ವಾಂಗಿಯೂ, ಚಂದ್ರಶೇಖರನೂ, ಅರ್ಧನಾರೀಶ್ವರನೂ ಆದ ಪರಮೇಶ್ವರನು ನಿನಗೆ ಶುಭವನ್ನುಂಟುಮಾಡಲಿ, ಮೇಲಕ್ಕೆ ಏಳಯ್ಯಾ !

೧೯ ಎಲೈ ಪುಣ್ಯಮೂರ್ತಿಯಾದ ಭರತನೇ ! ಪರಮಾತ್ಮನ ನಾಭೀಕಮಲದಲ್ಲಿ ಹುಟ್ಟಿದ ಸಕಲ ಲೋಕಗಳಿಗೂ ಪಿತಾಮಹನೆನಿಸಿದ ಪದ್ಮಾಸನನಾದ ಬ್ರಹ್ಮನು ನಿನಗೆ ಒಳ್ಳೇ ಬುದ್ಧಿಶಕ್ತಿಯನ್ನೂ, ಧೈರ್ಯವನ್ನೂ, ಐಶ್ವರ್ಯವನ್ನೂ, ಬಲವನ್ನೂ ಕೊಟ್ಟು ಕಾಪಾಡಲಿ

೨೦. ಎಲೈ ಧರ್ಮಾನುವರ್ತಿಯಾದ ಭರತನೇ ! ಪ್ರತಿದಿವಸವೂ ಆಕಾಶದಲ್ಲಿ ಸಂಚಾರಮಾಡುತಲಿರುವ, ದಿಗ್ವಧುಗಳ ಕರಗಳಿಂದಾಲಂಗಿತನಾದ ಈಬ್ರಹ್ಮಾಂಡವೆಂಬ ಮಂಟಪದಲ್ಲಿ ಹತ್ತಿಸಿರುವ ದೀಪದಂತೆ ಕಂಗೊಳಿಸುತಲಿರುವ ಭಗವಾನ್ ಸೂರ್ಯನು ನಿನಗೆ ಮಂಗಳಾಕಾಂಕ್ಷೆಯನ್ನು ಕೋರುತ್ತಾ ಉದಯಿಸಿರುವನು, ಮೇಲಕ್ಕೆ ಏಳೈ.

ಕೇಶಯಕ್ಷೇಶದೇವೇಶಪ್ರೇತೇಶ್ವರನಿಶಾಚರಾಃ ।
ಸರ್ವದೇವಗಣೈಃ ಸಾರ್ಧಂ ಸುಪ್ರಭಾತಂ ದಿಶಂತು ತೇ ॥ ೨೧ ॥

ಋಷಯಃ ಸರಿತಃ ಶೈಲಾಃ ಸಾಗರಾಶ್ಚ ದಿಶೋ ದಶ ।
ಕಾಲಸ್ಯಾವಯವಾಶ್ಚೈವ ಸುಪ್ರಭಾತಂ ದಿಶಂತು ತೇ ॥ ೨೨ ॥

ಇತಿ ಶೃಣ್ವನ್ಗಿರಂ ಪುಣ್ಯಾಮೇಷಾಂ ಮಂಗಲವಾದಿನಾಂ ।
ಮಹಾಪುಣ್ಯಾಹಘೋಷೇಣ ತತ್ಯಾಜ ಶಯನಂ ತದಾ ॥ ೨೩ ॥

ಆಯವ್ಯಯಂ ಸ ಶುಶ್ರಾವ ಲೇಖಕೈರ್ಗಣಕೈಃ ಸಹ ।
ವೇಗೋತ್ಸರ್ಗಂ ತತಃ ಕೃತ್ವಾ ಯಯೌ ಸ್ನಾನಗೃಹಂ ಶುಭಂ ॥ ೨೪ ॥

ಸ್ನಾನಾರಂಭಂ ತತಶ್ಚಕ್ರೇ ದಂತಧಾವನಪೂರ್ವಕಂ ।
ಉತ್ಸಾದಿತಃ ಕಷಾಯೇಣ ಬಲವೃದ್ಧಿಕರೈಸ್ತದಾ ॥ ೨೫ ॥

---

೨೧ ಎಲೈ ಭರತಚಕ್ರಾಧಿಪತಿಯೇ ! ದೇವೇಶ್ವರ, ಪ್ರೇತೇಶ್ವರ, ನಿಶಾಚರೇಶ್ವರರೂ ನಿನಗೆ ಸುಪ್ರಭಾತವನ್ನುಂಟುಮಾಡಲಿ

೨೨ ಎಲೈ ಶ್ರೀರಾಮನ ಪ್ರೇಮದ ತಮ್ಮನೇ ! ಋಷಿಗಳೂ, ನದಿಗಳೂ, ಪರ್ವತಗಳೂ, ಸಾಗರಗಳೂ, ಹತ್ತುದಿಕ್ಕುಗಳೂ, ಕಾಲಾವಯವಗಳೂ ಸಹ ನಿನಗೆ ಸುಪ್ರಭಾತವನ್ನುಂಟುಮಾಡಲಿ.

೨೩ ಮೇಲೆ ವಿವರಿಸಿದಂತೆ ನಾನಾವಿಧವಾಗಿ ಮಂಗಳರೂಪವಾದ ಜಯಶಬ್ದಗಳನ್ನು ಮಾಡುತ್ತಾ ಪುಣ್ಯಾಹಧ್ವನಿಗಳಿಂದ ಭರತನ ಪ್ರಬೋಧವನ್ನು ನಿರೀಕ್ಷಿಸುತ್ತಿರುವ ಪ್ರಜೆಗಳ ಮನೋಭಾವವನ್ನರಿತು ಪ್ರಜೇಶ್ವರನಾದ ಭರತನು ಹಾಸಿಗೆಯನ್ನು ಬಿಟ್ಟು ಮೇಲಕ್ಕೆದ್ದು ಕುಳಿತನು.

೨೪-೨೫ ಭರತನು ಎದ್ದಕೂಡಲೇ ಲೇಖಕರೂ, ಗಣಕರೂ ಸಹ ಆಯವ್ಯಯ ಲೆಕ್ಕವನ್ನು ಓದಿದರು ಅದನ್ನು ಕೇಳಿದ ಬಳಿಕ ಭರತನು ನಾವಕಾಶವಾಗಿ ಹೊರಟು ಸ್ನಾನದಮನೆಯನ್ನು ತಲುಪಿದನು ನೀರುಮನೆಯನ್ನು ಹೊಕ್ಕಬಳಿಕ ಚನ್ನಾಗಿ ಹಲ್ಲುಜ್ಜಿಕೊಂಡು ಮುಖಮಜ್ಜನೆ (ಮಾರ್ಜನೆ) ಯನ್ನು ಮಾಡಿ ಬಲು ತೆಳುವಾದ ಒಟ್ಟೆಯನ್ನುಟ್ಟು ಭದ್ರಾಸನದಲ್ಲಿ ಕುಳಿತನು ಆ ಕೂಡಲೆ ಬಲಶಾಲಿಗಳಾದ

ಸುಖಂ ಭದ್ರಾಸನಾಸೀನಃ ಸೂಕ್ಷ್ಮಾಂಬರಧರಃ ಪ್ರಭುಃ ।
ಸಸ್ನೌ ಸ ವಿವಿಧೈಸ್ತೋಯೈರ್ನದೀಸಾಗರಜೈಃ ಶುಭೈಃ ॥ ೨೬ ॥

ಕುಂಭೈಃ ಸುವರ್ಣಮಾಹೇಯೈಸ್ತಾಮ್ರೈ ರೌಪ್ಯಮಯೈಸ್ತಥಾ ।
ಶತಾಧಿಕೈರ್ಮಹಾರಾಜ ಸರ್ವೌಷಧಿ ಸಮನ್ವಿತೈಃ ॥ ೨೭ ॥

ಕ್ಷೀರಪ್ರವಾಹಸಂಯುಕ್ತೈರ್ಮಾಲ್ಯಕಂಠೈಃ ಸುಪೂಜಿತೈಃ ।
ಆವರ್ಜಿತೈರ್ಮಹೀಪಾಲ ಸುಸ್ನಾತಾಲಂಕೃತೈರ್ನರೈಃ ॥ ೨೮ ॥

ಚಂದನಸ್ರಾವಸಂಪೂರ್ಣೈರ್ದ್ವಿಜಮಂತ್ರಾನುಮಂತ್ರಿತೈಃ ।
ಬಭಾರ ವಸನಂ ಚಾರು ಸ್ನಾನತೋಯೌಘಸಂಕುಲಂ ॥ ೨೯ ॥

ಶಶಾಂಕಮಂಡಲಂ ಪೂರ್ಣಂ ತನ್ವಭ್ರೈರಿವ ಸಂವೃತಂ ।
ವಾದ್ಯಪುಣ್ಯಾಹಘೋಷೇಣ ತಥಾ ಗೀತಸ್ವನೇನ ಚ ॥ ೩೦ ॥

---

ಚೆಟ್ಟಿಗಳು ಬಂದು ತಲೆಗೆ ಎಣ್ಣೆಯನ್ನೊತ್ತಿ ಮೈಗೆಲ್ಲಾ ಸುಗಂಧಪರಿಮಳಯುಕ್ತವಾದ ತೈಲಗಳನ್ನು ಸವರಿ ಚೆನ್ನಾಗಿ ಮೈಕೈಗಳನ್ನುತಿಕ್ಕಿ ನೀರಮನೆಯಲ್ಲಿ ಕಾಯಿಸಿದ್ದ ವಿವಿಧ ಕಷಾಯ (ಒಗರಾದ ರಸದ್ರವ್ಯಗಳನ್ನು ಹಾಕಿ ಕಾಯಿಸಿದ ನೀರು) ಗಳಿಂದಲೂ, ನದೀ ಸಾಗರಗಳಿಂದ ತಂದಿಟ್ಟ ಸರ್ವೌಷಧಿ ರಸಗಳಿಂದ ಬೆರೆದ ಬಿಸಿನೀರಿನಿಂದಲೂ ತುಂಬಿದ ಹಂಡೆಯಿಂದ ಚಿನ್ನ, ಬೆಳ್ಳಿ ಮತ್ತು ತಾಮ್ರದ ಕೊಳದಪ್ಪಲೆಗಳಿಂದ ಬಿಸಿನೀರನ್ನು ತುಂಬಿತುಂಬಿ ಅಭ್ಯಂಗನ (ನೀರೆರೆದು) ಸ್ನಾನಮಾಡಿಸಿದರು

೨೮-೨೯ ಆ ಅಭ್ಯಂಗನಸ್ನಾನಕ್ಕಾಗಿ ಸಿದ್ಧವಾಗಿದ್ದ ನೀರು ಸಾಮಾನ್ಯವಾದು ದಲ್ಲ ಕ್ಷೀರಪ್ರವಾಹಗಳಿಂದೊಡಗೂಡಿದ್ದಿತು ನಾನಾವಿಧ ಪರಿಮಳಗಂಧಗಳ ಮಿಲ ನದಿಂದ ಸುವಾಸಿತವಾಗಿದ್ದಿತು ಬ್ರಾಹ್ಮಣರು ವೇದಮಂತ್ರಗಳನ್ನು ಹೇಳಿ ಆ ಜಲ ವನ್ನಭಿಮಂತ್ರಿಸಿದ್ದರು ನೀರು ಕಾಯಿಸುವ ಹಂಡಗಳನ್ನು ಚೆನ್ನಾಗಿ ಶುಭ್ರವಾಗಿ ತೊಳೆದು ಅದರ ಕತ್ತಿಗೆಲ್ಲಾ ಹೂವಿನ ಹಾರಗಳನ್ನು ಅಲಂಕರಿಸಿದ್ದರು ಇಂತಹ ಹಂಡೆ ಗಳಿಂದ ಹದವಾಗಿ ಬಿಸಿಯಾದ ನೀರನ್ನು ತುಂಬಿತುಂಬಿ ಮೊದಲೇ ತಾವು ಸ್ನಾನಮಾಡಿ ಶುಭವಸ್ತ್ರಗಳಂ ಧರಿಸಿದವರಾದ ಪರಿಚಾರಕರು ಭರತನಿಗೆ ಸ್ನಾನಮಾಡಿಸಿದರು

೩೦ ಸ್ನಾನಮಾಡಿದಕೂಡಲೆ ಮನೋಹರವಾದ, ಬೇಗ ನೀರನ್ನು ಹೀರುವ ಶುಭ್ರವಸ್ತ್ರಗಳಿಂದ ಭರತನ ಒದ್ದೆಯಾದ ಮೈಯನ್ನು ಒರೆಸಿದರು. ಆ ಕೂಡಲೇ

ಸ್ನಾತ್ವೋಪಸ್ಪೃಶ್ಯ ವಿಧಿವತ್ಪೂರ್ವಾಂ ಸಂಧ್ಯಾಂ ಸಮಾಹಿತಃ ।
ದದರ್ಶ ವದನಂ ಚಾರು ದರ್ಪಣೇ ಚಾಥ ಸರ್ಪಿಷಿ ॥ ೩೧ ॥

ಸ ಸುವರ್ಣೇ ಮಹಾರಾಜ ದೈವಜ್ಞೇನಾಭಿಮಂತ್ರಿತೇ ।
ದಿನೇಶಂ ತಿಥಿನಕ್ಷತ್ರಂ ತತಃ ಶುಶ್ರಾವ ರಾಘವಃ ॥ ೩೨ ॥

ಸಾಂವತ್ಸರಮುಖೋದ್ಗೀರ್ಣಂ ಕಲಿದುಃಸ್ವಪ್ನನಾಶನಂ ।
ಚಕಾರಾಭ್ಯರ್ಚನಂ ಚಾಥ ದೇವದೇವಸ್ಯ ಚಕ್ರಿಣಃ ॥ ೩೩ ॥

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ಸ್ತವೈರ್ಬಲಿಪ್ರದಾನೈಶ್ಚ ಗೀತವಾದ್ಯಸ್ವನೇನ ಚ ॥ ೩೪ ॥

---

ಭರತನು ಮಡಿಯಾಗಿದ್ದ ತೆಳುವಾದ ರೇಷ್ಮೆಯುಗುಟವನ್ನುಟ್ಟುಕೊಂಡನು ಆಗ ಆ ದಿವ್ಯವಸ್ತ್ರಾಲಂಕೃತನಾದ ಭರತನನ್ನು ನೋಡಿದರೆ ಚಂದ್ರಮಂಡಲದ ಸುತ್ತಲೂ ಸಣ್ಣಸಣ್ಣ ಬಿಳೀಮೋಡಗಳು ಸುತ್ತಿಕೊಂಡು ಪ್ರಕಾಶಿಸುವಂತೆ ತೋರುತ್ತಲಿದ್ದಿತು ಈ ರೀತಿ ಶುಚಿರ್ಭೂತನಾಗಿ ಭರತನು ಆಹ್ನಿಕದ ಮನೆಗೆ ಬಂದು ಭದ್ರಾಸನದಮೇಲೆ ಪದ್ಮಾಸನವನ್ನು ಹಾಕಿ ಕುಳಿತನು ಆ ಸಮಯದಲ್ಲಿ ನಾನಾವಿಧ ಮಂಗಳವಾದ್ಯಗಳು ಸಣ್ಣಸ್ವರದಿಂದ ಸದ್ದುಮಾಡುತ್ತಿದ್ದವು ವೈದಿಕರು ಪುಣ್ಯಾಹಮಂತ್ರಗಳನ್ನು ಹೇಳುತ್ತಿದ್ದರು

೩೧ ಭರತನು ನೀರದಲ್ಲಿ ಕುಳಿತೊಡನೆಯೇ ಮೊದಲು ಆಚಮನಮಾಡಿ ಪ್ರಾತಃಸಂಧ್ಯಾವಂದನೆಯನ್ನು ಮಂತ್ರತಂತ್ರಲೋಪವಿಲ್ಲದೆ ವಿಧಿವತ್ತಾಗಿ ಮಾಡಿದನು. ಸಂಧ್ಯಾವಂದನೆಯಾದೊಡನೆಯೇ ತನ್ನ ಮುಖವನ್ನು ಕನ್ನಡಿಯಲ್ಲಿಯೂ ಚಿನ್ನದ ಪಾತ್ರೆಯಲ್ಲಿ ತುಂಬಿದ್ದ ಕಾಸಿದ ತುಪ್ಪದಲ್ಲಿಯೂ ನೋಡಿಕೊಂಡನು

೩೨-೩೩. ಅಷ್ಟರೊಳಗಾಗಿ ಅಲ್ಲಿ ಸಿದ್ಧರಾಗಿ ನಿಂತಿದ್ದ ಜೋಯಿಸರುಗಳು ಆ ದಿನದ ಪಂಚಾಂಗಶುದ್ಧಿ (ತಿಥಿ-ನಕ್ಷತ್ರ-ವಾರ-ಯೋಗ-ಕರಣಗಳು) ಯನ್ನೋದಿದರು. ಜ್ಯೋತಿಷ್ಕರ ಮುಖದಿಂದ ಹೊರಟ ಸಕಲ ದುಸ್ವಪ್ನದೋಷಪರಿಹಾರಕವಾದ ದಿನಶುದ್ಧಿಯನ್ನು ಭರತನು ಕೇಳಿದೊಡನೆಯೇ ಆಯಾ ಹೆಸರುಗಳನ್ನು ಹೇಳಿ ಕ್ರಮವಾಗಿ ಸಂಕಲ್ಪವನ್ನು (ಶುಭಾತಿಥೌ ಶೋಭನೇಮುಹೂರ್ತೆ) ಮಾಡಿ ದೇವತಾರ್ಚನೆಯನ್ನು ನೆರವೇರಿಸಿದನು

೩೪. ಸಕಲ ಲೋಕನಾಯಕನಾದ ಭಗವಂತನನ್ನು ಗಂಧಪುಷ್ಪನಮಸ್ಕಾರ

ಸಂಪೂಜ್ಯ ದೇವದೇವೇಶಂ ನಿವೇಶಾಗ್ನಿಗೃಹಂ ಶುಭಂ ।
ತತ್ರಾಗ್ನಿಂ ಸಮುಪಸ್ಥಾಯ ಹುತಂ ಪೂರ್ವಂ ಪುರೋಧಸಾ ॥ ೩೫ ॥

ದುಃಸ್ವಪ್ನನಾಶನಂ ಕರ್ಮ ಸಿದ್ಧಿವೃದ್ಧಿಜಯಪ್ರದಂ ।
ಪ್ರಾಗೇವ ತಸ್ಯ ಕೃತವಾನ್ವಿದ್ವಾನ್ ನೃಪಪುರೋಹಿತಃ ॥ ೩೬ ॥

ಧೂಪದೀಪನೈವೇದ್ಯವೇ ಮುಂತಾದ ಸಂಪತ್ಸಮೃದ್ಧಿಗಳಿಂದಲೂ, ನಾನಾವಿಧ ಸ್ತೋತ್ರಗಳಿಂದಲೂ, ಗೀತವಾದ್ಯಸ್ವನರೂಪವಾದ ಸೇವೆಯಿಂದಲೂ ಮನಃಪೂರ್ವಕವಾಗಿ ಆರಾಧಿಸಿದ ಬಳಿಕ ಸನಕಾದಿ ದೇವತೆಗಳಿಗೆ ಬಲಿಹರಣವನ್ನು ಹಾಕಿ ಪೂಜೆಯನ್ನು ಮುಗಿಸಿದನು

ಟಿಪ್ಪಣಿ --ಭಗವಂತನನ್ನು ಪೂಜಿಸಿದ ಬಳಿಕ ಭಗವದ್ಭಕ್ತರಾದ ಭಾಗವತೋತ್ತಮರನ್ನು, ಸ್ವಾಮಿಗೆ ಪೂಜೆಮಾಡಿ ಮಿಕ್ಕ ಹೂವುಗಳಿಂದಲೂ, ಭಗವತ್ಪ್ರಸಾದ ಪುಷ್ಪಗಳಿಂದಲೂ ಪೂಜಿಸಿ, ತೀರ್ಥಜಲದಿಂದಲೇ ಅಭಿಷೇಕಮಾಡಿ, ಸ್ವಾಮಿಗೆ ನಿವೇದಿತವಾದ ನಿವೇದನಾನ್ನದಿಂದಲೇ ಬಲ್ಯಾದಿ ಭಕ್ತರನ್ನು ತೃಪ್ತಿಪಡಿಸಬೇಕೆಂದು ಸನಾತನ ಕಾಲದಿಂದ ಸಂಪ್ರದಾಯವಿದೆ ಭಗವತ್ಪ್ರಸಾದಕ್ಕೆ ಅರ್ಹರಾದ ಭಾಗವತರ ಹಸರನ್ನು ಇಲ್ಲಿ ತಿಳಿಸುತ್ತೇವೆ. ಬಲಿ, ವಿಭೀಷಣ, ಭೀಷ್ಮ, ಕಪಿಲ, ನಾರದ, ಅರ್ಜುನ, ಪ್ರಹ್ಲಾದ, ಅಂಬರೀಷ, ಆಂಜನೇಯ, ಜಾಂಬುವಂತ, ಇವರೆಲ್ಲರೂ ವಿಷ್ಣುಭಕ್ತಾಗ್ರೇಸರರು ಬಾಣಾಸುರ, ರಾವಣ, ಚಂಡಿ, ನಂದಿ, ಭೃಂಗಿರಿಟ, ಇವರು ಪರಶಿವನ ಪರಮಭಕ್ತರು ಇವರೆಲ್ಲರೂ ದೇವರ ನಿರ್ಮಾಲ್ಯ ಗಂಧಕ್ಕೂ ನಿರ್ಮಾಲ್ಯ ಪತ್ರಪುಷ್ಪಗಳಿಗೂ ತೀರ್ಥಕ್ಕೂ ನಿವೇದಿತಾನ್ನಕ್ಕೂ ಮುಖ್ಯರಾದ ಹಕ್ಕುದಾರರು

ಪ್ರತಿದಿನವೂ ತಾನು ಊಟಮಾಡುವುದಕ್ಕಿಂತ ಮೊದಲು ಮೇಲೆ ಬರೆದಂತೆ ದೇವತಾರ್ಚನೆ ಮಾಡಿ ಬಲಿಹರಣಾದಿಗಳನ್ನು ಹಾಕಿ, ತೀರ್ಥವನ್ನು ತೆಗೆದುಕೊಂಡೇ ಊಟಕ್ಕೆ ಕುಳಿತುಕೊಳ್ಳಬೇಕು ಇದರಿಂದ ಸಕಲ ದೇವತೆಗಳೂ ತೃಪ್ತರಾಗುವರು.

೩೫ ದೇವತಾರ್ಚನೆಯು ಮುಗಿದ ಬಳಿಕ ಭರತನು ಔಪಾಸನದ ಮನೆಗೆ ಹೋಗಿ ಪ್ರಜ್ವಲಿತಾಗ್ನಿಯನ್ನು ಪ್ರಾರ್ಥಿಸಿ ಪುರೋಹಿತನು ಮಂತ್ರ ಹೇಳಿಕೊಂಡು ಮೊದಲೇ ಹೋಮಮಾಡಿದ್ದ ಯಜ್ಞೇಶ್ವರನನ್ನು ಪೂಜೆಮಾಡಿದನು.

೩೬-೩೭. ಇದಕ್ಕಿಂತ ಮುಂಚೆ ವಿದ್ವಾಂಸನಾದ ರಾಜಪುರೋಹಿತನು ದುಸ್ವಪ್ನ

**ತತಸ್ತೌಪಸನೋ ವಹ್ನೌ ಭರತಃ ಪ್ರೀತಮಾನಸಃ ।**
**ಶ್ರೀಸೂಕ್ತಂ ಪೌರುಷಂ ಸೂಕ್ತಂ ಜುಹಾವ ಪ್ರಯತಸ್ತದಾ　　॥ ೩೭**

**ಆಜ್ಯೇನ ಮಂತ್ರಪೂತೇನ ವಿಧಿನಾ ಸುಸಮಾಹಿತಃ ।**
**ದತ್ವಾ ಪೂರ್ಣಾಹುತಿಂ ಚಾಗ್ನೌ ಕೃತಜಪ್ಯೋ ಮಹಾಮತಿಃ　　॥ ೩೮ ॥**

ನಾಶಕವೂ, ಸಿದ್ಧಿವೃದ್ಧಿಜಯಪ್ರದವೂ, ಆದ ಕರ್ಮವನ್ನು ತಾನೇ ರಾಜನಿಗೋಸ್ಕರ ಮಾಡಿದ್ದನು

ಭರತನೂ ಸಹ ಅಗ್ನಿಯ ಮುಂದೆ ಕುಳಿತುಕೊಂಡು ಪರಿಶುದ್ಧವಾದ ಭಾವನೆಯಿಂದ ಪುರುಷಸೂಕ್ತ ಶ್ರೀಸೂಕ್ತ ಮಂತ್ರಗಳನ್ನು ಹೇಳಿಕೊಂಡು ಒಂದೊಂದು ಮಂತ್ರದಿಂದಲೂ ಪ್ರತ್ಯೇಕಪ್ರತ್ಯೇಕವಾಗಿ ಅಗ್ನಿಯಲ್ಲಿ ಮಂತ್ರಪೂತವಾದ ಆಜ್ಯಾಹುತಿ (ತುಪ್ಪದ ಹೋಮ) ಯನ್ನರ್ಪಿಸಿದನು. ಕಡೆಗೆ ಪೂರ್ಣಾಹುತಿಯನ್ನು ಮಾಡಿದನು ಈರೀತಿ ಅಗ್ನಿಪೂಜೆಯಾದ ಬಳಿಕ ಮಹಾಮಂತ್ರಜಪಗಳನ್ನು ಮಾಡಿದವನಾಗಿ ಬ್ರಹ್ಮಯಜ್ಞವನ್ನು ಮಾಡಿದನು ಬ್ರಹ್ಮಯಜ್ಞವೆಂದರೆ ದೇವತೆಗಳಿಗೂ ಪಿತೃಗಳಿಗೂ ಜಲಾರ್ಚನೆ (ಜಲತರ್ಪಣ) ಮಾಡುವುದು

ಟಿಪ್ಪಣಿ !—ಇದನ್ನೇ ನಿತ್ಯಾಹ್ನಿಕವೆಂದು ಪೂರ್ವಿಕರು ಹೇಳುತ್ತಿರುವುದು ಇದನ್ನೇ ನಾವೂ ಮಾಡಬೇಕೆಂದು ಸಹ ವಿಧಾಯಕಮಾಡಿರುವರು ಇದನ್ನೇ ಸನಾತನಸಂಪ್ರದಾಯವೆನ್ನುವರು ದೇಶಾಧೀಶ್ವರರೂ ಭೂಮಂಡಲಾಧಿಪತಿಗಳೂ ಇದನ್ನು ಪ್ರಾಚೀನಸಂಪ್ರದಾಯವನ್ನನುಸರಿಸಿ ಮಾಡುತ್ತಿರುವರೆಂದಮೇಲೆ ಇತರ ಸಾಮಾನ್ಯಪ್ರಜಗಳು ಪೂರ್ವಸಂಪ್ರದಾಯವನ್ನು ಬಿಟ್ಟು ನಾಸ್ತಿಕರಾಗುತ್ತಿರುವುದು ದೈವದ್ರೋಹಪರಿಸಿಸುವುದು ರಾಜಕಾಲಸ್ಯಕಾರಣಂ ಎಂದೇ ವಿಧಿವಚನವಿದೆಯಾದುದರಿಂದ ಸನಾತನವರ್ಣಾಶ್ರಮವನ್ನು ಮೀರಿ ನಡೆಯುವವನು ಶಿಕ್ಷಾರ್ಹನಾಗುವನೆಂದು ರಾಜಾಜ್ಞೆಯಾಗುವುದಾದರೆ ಅದನ್ನನುಸರಿಸಿ ಸಕಲಪ್ರಜಗಳೂ ನಡೆದುಕೊಳ್ಳಲೇ ಬೇಕಾಗುವುದು ಇಂತಹ ಸಮೃದ್ಧಿಯುಳ್ಳ ರಾಜ್ಯಕ್ಕೆ ರಾಮರಾಜ್ಯವೆಂಬ ಹೆಸರು ಈಗಲೂ ಪ್ರಸಿದ್ಧವಾಗಿದೆ ಇದನ್ನು ಮೀರುವವರೆಲ್ಲರೂ ಭಗವಂತನಿಂದ ದಂಡಾರ್ಹರಾದವರು ಇವರೆಲ್ಲರೂ ತಮ್ಮ ಪೂರ್ವಿಕರ ಆಚಾರಸಂಪ್ರದಾಯಗಳಂತೆ ನಡೆದುಕೊಳ್ಳುವುದಾದರೆ ರಾಜನಿಗೂ ರಾಜ್ಯಕ್ಕೂ ಒಟ್ಟಿನಮೇಲೆ ದೇಶಕ್ಕೂ ಮಹದುಪಕಾರವಾಗುವುದು

ಉದಕೇನಾರ್ಚನಂ ಚಕ್ರೇ ದೇವಾನಾಂ ಪಿತೃಭಿಃ ಸಹ ।
ತತಃ ಸ ನಿರ್ಯಯೌ ತಸ್ಮಾದ್ಭರತೋ ವಹ್ನಿವೇಶ್ಮನಃ ॥ ೩೯ ॥

ನಿಷ್ಕ್ರಮ್ಯ ಪೂಜಯಾಮಾಸ ಬ್ರಾಹ್ಮಣಾನ್ವಸುನಾ ತದಾ ।
ಗೋಭಿರಶ್ವೈಃ ಸುವರ್ಣೇನ ದಧಿಪುಷ್ಪಫಲಾನ್ವಿತೈಃ ॥ ೪೦ ॥

ಮೋದಕೈಶ್ಚ ತಥಾ ರತ್ನೈರ್ವಸ್ತ್ರೈಶ್ಚ ರಘುನಂದನಃ ।
ಪೂಜಿತಾನಾಂ ದ್ವಿಜೇಂದ್ರಾಣಾಂ ಭರತೇನ ಮಹಾತ್ಮನಾ ॥ ೪೧ ॥

ಪುಣ್ಯಾಹಘೋಷಸ್ತ್ರಿದಿವಂ ಜಗಾಮ ಮಧುರಸ್ವರಃ ।
ಸ ಪೂಜಯಿತ್ವಾ ವಿಪ್ರೇಂದ್ರಾನ್ಪ್ರವಿಶ್ಯ ಚ ತಥಾ ಗೃಹಂ ॥ ೪೨ ॥

ನಿತ್ಯಕರ್ಮ ಚ ಕೃತ್ವೇದಂ ಚಂದನೇನ ಸುಗಂಧಿನಾ ।
ಸೂಕ್ಷ್ಮಶುಕ್ಲಪರೀಧಾನೋ ವರಧೂಪೇನ ಧೂಪಿತಃ ॥ ೪೩ ॥

---

೩೯-೪೧ ಬ್ರಹ್ಮಯಜ್ಞವನ್ನು ನೆರವೇರಿಸಿದ ಒಳಿಕ ಭರತ ಮಹಾರಾಜನು ಯಜ್ಞಶಾಲೆಯನ್ನು ಬಿಟ್ಟು ಹೊರಹೊರಟನು. ಹೊರಗ ಅನೇಕ ಜನ ಬ್ರಾಹ್ಮಣರು ನಿಂತಿದ್ದರು. ಭರತನು ಅವರೆಲ್ಲರಿಗೂ ವಿಶೇಷ ದ್ರವ್ಯವನ್ನು ಕೊಟ್ಟು ಅವರವರ ಕೋರಿಕೆಯನ್ನು ಅವರವರ ಬಾಯಿಯಿಂದಲೇ ಕೇಳಿ ಕೇಳಿ ಪ್ರತಿಯೊಬ್ಬರಿಗೂ ಅವರಿಗೆ ಬೇಕಾದ ಗೋದಾನ, ಅಶ್ವದಾನ, ಸುವರ್ಣದಾನ, ದಧಿಪುಷ್ಪ ಫಲಾನ್ವಿತವಾದ ವಿವಿಧಮೋದಕ (ಭಕ್ಷ್ಯ) ದಾನ, ರತ್ನದಾನ, ವಸ್ತ್ರದಾನಗಳಿಂದ ತೃಪ್ತಿಪಡಿಸಿದನು

೪೨ ಈರೀತಿಯಾಗಿ ಬ್ರಾಹ್ಮಣರನ್ನು ತೃಪ್ತಿಪಡಿಸಿದ ಒಳಿಕ ಭರತನು ಅರಮನೆಗೆ ಹೋದನು ಹೋಗುವಾಗ ರಾಜಸಭೆಗೆ, ಆ ಸ್ಥಳದಲ್ಲಿ ಸೇರಿದ್ದ ಸಕಲ ಬ್ರಾಹ್ಮಣರನ್ನೂ ಜತೆಯಲ್ಲಿ ಕರೆದುಕೊಂಡು ಹೋದನು

೪೩-೪೫. ನಿತ್ಯಕರ್ಮಾನಂತರದಲ್ಲಿ ಭರತನು ಮೈಗೆಲ್ಲಾ ಪರಿಮಳ ಸುಗಂಧಗಳ ಪುಡಿಯನ್ನು ಪೂಸಿದವನಾಗಿ, ಗುಗ್ಗುಲಾಗರು ಮೊದಲಾದ ಧೂಪದ ಹುಡಿಗಳಿಂದ ಧೂಪಿತನಾಗಿ (ಕಾಯಿಸಿಕೊಂಡು) ತೆಳುವಾದ ಬಿಳೀ ಪಂಚೆಯನ್ನುಟ್ಟುಕೊಂಡು ಸಕಲಾವಯವಗಳಿಗೂ ತಕ್ಕ ತಕ್ಕ ಆಸಭ್ಯಾಭರಣಗಳನ್ನು ಧರಿಸಿ, ಮಲ್ಲಿಗೆ ಜಾಜಿ

ಆಭೂಷ್ಯ ಸರ್ವಗಾತ್ರಾಣಾಂ ಭೂಷಣಾನಿ ರಘೂದ್ವಹಃ ।
ಶುಕ್ಲಂ ಸುಗಂಧಿ ಮಾಲ್ಯಂ ಚ ಸ್ರಜಶ್ಚ ವಿವಿಧಾಸ್ತಥಾ ॥ ೪೪ ॥

ಮಂಗಲಾಲಂಭನಂ ಕೃತ್ವಾ ನಿಶ್ಚಕ್ರಾಮ ಸಭಾಗೃಹಂ ।
ಶುಕ್ಲಂ ಶಯ್ಯಾಸನಂ ತತ್ರ ವರರತ್ನವಿಭೂಷಿತಂ ॥ ೪೫ ॥

ಮಹಾರ್ಘತೋರಣೋಪೇತಂ ಸೋತ್ತರಚ್ಛದಮೃದ್ಧಿಮತ್ ।
ವಿತಾನಶ್ಚ ತಥಾ ದತ್ತಂ ತಸ್ಯೋಪರಿ ಮಹರ್ಧಿಮತ್ ॥ ೪೬ ॥

ಆಸೀನಮಾಸನೇ ತಸ್ಮಿನ್ಭರತಂ ಸತ್ಯಸಂಗರಂ ।
ಪ್ರಾಂಶವೋ ಬದ್ಧನಿಸ್ತ್ರಿಂಶಃ ಕವಚೋತ್ತಮಭೂಷಿತಃ ॥ ೪೭ ॥

ರಕ್ತಾಂಬರಧರಾ ವೀರಾ ರರಕ್ಷುಃ ಪೃಷ್ಠಸಂಸ್ಥಿತಾಃ ।
ತಥೈವೋಭಯಪಾರ್ಶ್ವಸ್ಥಾಃ ಪೂರ್ಣಚಂದ್ರನಿಭಾನನಾಃ ॥ ೪೮ ॥

---

ಮುಂತಾದ ಸುವಾಸನಾ ಭರಿತ ಪುಷ್ಪಮಾಲೆಗಳನ್ನು ಕಂಠದೋಳ್ ಧರಿಸಿ, ಅನರ್ಘ್ಯ ರತ್ನಾಹಾರಗಳಿಂದ ವಿರಾಜಿತನಾಗಿ, ಮಂಗಳ ವಾದ್ಯಗಳು ಭೋರ್ಗರೆಯುತ್ತಿರುವಲ್ಲಿ ಸಭಾಮಂದಿರಕ್ಕೆ ಪ್ರವೇಶಿಸಿದನಾದನು. ಅಲ್ಲಿಗೆ ಪ್ರವೇಶಿಸಿದೊಡನೆಯೇ ಸುವರ್ಣದ ರತ್ನಖಚಿತವಾದ ಸಿಂಹಾಸನದ ಮೇಲೆ ಹಾಸಿದ್ದ ಸುಖಶಯ್ಯಾಸನದೋಳ್ ಮಂಡಿಸಿದ (ಕುಳಿತ) ನು.

೪೬-೪೮ ಆ ಸಿಂಹಾಸನದ ಸುತ್ತಲೂ ಬಹು ಬೆಲೆಯುಳ್ಳ ಚಿನ್ನದ ತೋರಣಗಳನ್ನು ಕಟ್ಟಿದ್ದರು. ಆ ಸಿಂಹಾಸನವು ತುಂಬಾ ವಿಸ್ತಾರವಾಗಿತ್ತು. ಅಂತಹ ಅನರ್ಘ್ಯವಾದ ಸಿಂಹಾಸನದ ಮೇಲೆ ಭರತನು ಕುಳಿತೊಡನೆಯೇ, ಉತ್ತಮವಾದ ಕವಚಗಳನ್ನು ಧರಿಸಿ ನಡುಕಟ್ಟು ಕಟ್ಟಿಕೊಂಡು ಕತ್ತಿಗಳನ್ನು ಕೈಯಲ್ಲಿ ಹಿಡಿದುಕೊಂಡು ಉನ್ನತರಾದ, ರಕ್ತವಸ್ತ್ರಗಳನ್ನು ಹೊದ್ದಿದ್ದ ವೀರಪುರುಷರು ಭರತನ ಹಿಂಭಾಗದಲ್ಲಿ ನಿಂತು ಕಾವಲು ಕಾಯುತ್ತಿದ್ದರು. ಅದೇ ರೀತಿ ಇನ್ನು ಕೆಲವು ಅಂಗರಕ್ಷಕರು ಎಡಬಲ ಭಾಗಗಳಲ್ಲಿಯೂ ನಿಂತುಕೊಂಡರು. ಇವರೆಲ್ಲರೂ ಬಹು ಸುಂದರರಾಗಿದ್ದರು.

ವಾರಮುಖ್ಯಾಃ ಸುವೇಷಾಸ್ತ್ವಮುಪಾಸಾಂಚಕ್ರಿರೇ ತದಾ ।
ವಾಲವ್ಯಜನಧಾರಿಣ್ಯಸ್ತಾಲವೃತಂಕರಾಃ ಪರಾಃ ॥ ೪೯ ॥

ತಾಂಬೂಲಭಾಂಡಧಾರಿಣ್ಯೋ ನೀಲನೀರಜಲೋಚನಾಃ ।
ಕುಂಡಲೀ ಬದ್ಧನಿಸ್ತ್ರಿಂಶೋ ದಂಡಪಾಣಿಃ ಸುವೇಶವಾನ್ ॥ ೫೦ ॥

ಉವಾಚ ಭರತಂ ಕ್ಷತ್ತಾ ಭೂಮಿವಿನ್ಯಸ್ತಜಾನುಕಃ ।
ದಿದೃಕ್ಷವಸ್ತೇ ಸಂಪ್ರಾಪ್ತಾ ಬ್ರಾಹ್ಮಣಾಃ ಸಂಶಯಚ್ಛಿದಃ ॥ ೫೧ ॥

ಶ್ರೇಣೀಮಹತ್ತರಾ ಯೇ ಚ ಬಲಮುಖ್ಯಾಸ್ತಥೈವ ಚ ।
ಪ್ರವೇಶಯ್ಯೈನಾನಿತ್ಯುಕ್ತೋ ದ್ವಾಸ್ಥಾಸ್ತ್ವಕ್ತ್ವಾ ತತೋಽಬ್ರವೀತ್ ॥ ೫೨ ॥

ಬ್ರಾಹ್ಮಣಾನ್ಬಲಮುಖ್ಯಾಂಶ್ಚ ಪ್ರವೇಶಯತ ಸತ್ವರಂ ।
ಆಶೀರ್ಭಿರಭಿನಂದ್ಯೈನಂ ಸಂಪ್ರವಿಷ್ಟಾ ದ್ವಿಜೋತ್ತಮಾಃ ॥ ೫೩ ॥

---

೪೯. ಬಳಿಕ ಚೆನ್ನಾಗಿ ಅಲಂಕೃತರಾದ ವಾರನಾರಿಯರು ಬೀಸಣಿಗೆ ಚಾಮರಗಳನ್ನು ಕೈಯಲ್ಲಿ ಹಿಡಿದುಕೊಂಡು ಬೀಸುತ್ತಾ ಉಭಯಪಾರ್ಶ್ವಗಳನ್ನೂ ಅಲಂಕರಿಸಿ ನಿಂತರು.

೫೦-೫೨ ಆ ಬಳಿಕ ಒರೆಯಿಂದ ಕತ್ತಿಯನ್ನೆಳೆದು ಕೈಯಲ್ಲಿ ಹಿಡಿದಿದ್ದ ಚೋಪದಾರನು ಆ ಕತ್ತಿಯನ್ನು ಒರೆಗೆ ಸೇರಿಸಿ ಅದೇ ಕೈಯಲ್ಲಿ ಚಿನ್ನದ ದಂಡವನ್ನು ಹಿಡಿದು ನಿಂತನು ಆ ದಂಡಧಾರಿಯು ಮೊಳಕಾಲು ನೆಲಕ್ಕೆ ನೋಕುವಂತೆ ಬಗ್ಗಿ ಭರತನಿಗೆ ಅಭಿವಂದಿಸಿ, ಮಹಾಪ್ರಭೋ! ನಿಸ್ಸಂಶಯ ಪ್ರಕೃತಿಯುಳ್ಳ ನಿನ್ನನ್ನು ನೋಡಲು ಹೊರಗೆ ಬಹುಮಂದಿ ಬ್ರಾಹ್ಮಣರು ಸಾಲುಗಟ್ಟಿಕೊಂಡು ನಿಂತಿರುತ್ತಾರ ಅವರ ಜತೆಯಲ್ಲಿ ಅನೇಕ ಮಂದಿ ವೀರರೂ ನಿಂತಿರುತ್ತಾರೆನ್ನಲು ಭರತನು ಆ ಸೇವಕನನ್ನು ಕುರಿತು ಹೊರಗೆ ನಿಂತಿರುವ ಅವರೆಲ್ಲರನ್ನೂ ಒಳಕ್ಕೆ ಕರೆದುಕೊಂಡು ಬಂದು ಕುಳ್ಳಿರಿಸೆನ್ನಲು ಅದರಂತೆ ಸಕಲ ಮಂದಿ ಬ್ರಾಹ್ಮಣರೂ ಬಲಶಾಲಿಗಳಾದ ಸೈನಿಕರೂ ಒಳಗೆ ಬಿಡಲ್ಪಟ್ಟರು.

೫೩-೬೦ ಬ್ರಾಹ್ಮಣರು ಮಂತ್ರಾಕ್ಷತೆಗಳನ್ನು ಭರತನ ಶಿರಸ್ಸಿನಲ್ಲಿರಿಸಿ ವೇದ ಮಂತ್ರಗಳಿಂದ ಆಶೀರ್ವಾದಮಾಡಿದರು. ಬಳಿಕ ಆ ಬ್ರಾಹ್ಮಣರೆಲ್ಲರೂ ತಮಗೋಸ್ಕರ ಸಿದ್ಧವಾಗಿದ್ದ ದಂತದಿಂದ ನಿರ್ಮಿತವಾದ ಆಸನಗಳ ಮೇಲೆ ಕುಳಿತರು

ಬ್ಯಸೀಷು ದಂತಪೀಠೇಷು ವಿವಿಶುಶ್ಚ ಯಥಾಸುಖಂ ।
ತತಸ್ತು ಬಲಮುಖ್ಯಾನಾಂ ನಮತಾಂ ಭರತಂ ತದಾ ॥ ೫೪ ॥

ಕ್ಷತ್ತಾ ಜಗ್ರಾಹ ನಾಮಾನಿ ಕಂಠಾರಕ್ತಸ್ವರಾನ್ವಿತಃ ।
ತತಸ್ತೇಷೂಪವಿಷ್ಟೇಷು ದ್ವಾರೇಷು ವಿವೃತೇಷು ಚ ॥ ೫೫ ॥

ಪ್ರವಿವೇಶ ಜನಃ ಸರ್ವೋ ನ ನ್ಯವಾರ್ಯತ ಕಶ್ಚನ ।
ಏತಸ್ಮಿನ್ನೇವ ಕಾಲೇ ತು ಶುಶ್ರುವೇ ತುಮುಲೋ ಧ್ವನಿಃ ॥ ೫೬ ॥

ಭರತಂ ದ್ರಷ್ಟುಕಾಮಾನಾಂ ಭೂಮಿಪಾನಾಂ ಮಹಾತ್ಮನಾಂ ।
ಹ್ರಾದೇನ ಗಜಘಂಟಾನಾಂ ಬೃಂಹಿತೇನ ತಥೈವ ಚ ॥ ೫೭ ॥

ಹ್ರೇಷಿತೇನ ತುರಂಗಾಣಾಂ ರಥನೇಮಿಸ್ವನೇನ ಚ ।
ನಾಮಭಿಃ ಕೀರ್ತ್ಯಮಾನೈಶ್ಚ ವಂದಿಭಿಃ ಪೃಥಿವೀಕ್ಷಿತಾಂ ॥ ೫೮ ॥

ಶಂಖವಾದಿತ್ರಘೋಷೇಣ ಪಟಹಾನಾಂ ಸ್ವನೇನ ಚ ।
ಆಜಗ್ಮುರ್ಭರತಂ ದ್ರಷ್ಟುಂ ನರೇಂದ್ರಾಃ ಪ್ರಿಯದರ್ಶನಾಃ ॥ ೫೯ ॥

ತೋರಣಾದವತೀರ್ಯೈವ ವಾಹನೇಭ್ಯೋ ಮಹೀಕ್ಷಿತಃ ।
ಸರ್ವೇ ಸ್ವಲ್ಪಪರೀವಾರಾ ವಿವಿಶುಸ್ತೇ ಸಭಾಂ ಶುಭಾಂ ॥ ೬೦ ॥

---

ಇದೇ ಮೇರೆ ಹೊರಗೆ ನಿಂತಿದ್ದವರೆಲ್ಲರೂ ರಾಜ ಸಭೆಗೆ ಬಂದು ಕುಳಿತರು ಯಾರನ್ನೂ ದ್ವಾರಪಾಲಕರು ಅಲ್ಲಿ ತಡೆಯಲಿಲ್ಲ. ಇಷ್ಟು ಹೊತ್ತಿಗೆ ಸರಿಯಾಗಿ ಹೊರಗಡೆ ಬಹಳ ಗಲಭೆಯಾಯಿತು ಅದೇನೆಂದು ನೋಡುವಲ್ಲಿ ಭರತನನ್ನು ನೋಡುವುದಕ್ಕಾಗಿ ಗಜಾರೂಢರಾಗಿಯೂ, ತುರುಗಾರೂಢರಾಗಿಯೂ ಅನೇಕ ಮಂದಿ ರಾಜರು ಬರುತ್ತಿದ್ದರು. ಅವರು ಕುಳಿತುಕೊಂಡಿದ್ದ ಆನೆಗಳ ಕತ್ತಿಗೆ ಕಟ್ಟಿದ್ದ ಗಂಟೆಗಳ ಸದ್ದೂ, ಗಜಗಳ ಬೃಂಹಿತವೂ, ಕುದುರೆಗಳ ಹೇಷಾರವವೂ, ರಥಚಕ್ರಗಳ ಧ್ವನಿಯೂ ಆಕಾಶವನ್ನು ಆವರಿಸಿತು ಶಂಖಗಳೂ, ವಿವಿಧ ವಾದ್ಯಧ್ವನಿಗಳೂ ಢಕ್ಕಾ ನಿನಾದವೂ ಸೇರಿ ಕಿವಿಗಳನ್ನು ಕಿವುಡುಮಾಡುತ್ತಿದ್ದುವು ರಾಜಗೃಹದ ಬಾಗಿಲಿಗೆ ಬರುತ್ತಲೂ ಆ ರಾಜರೆಲ್ಲರೂ ವಾಹನಗಳಿಂದ ಕೆಳಗಿಳಿದು ರಾಜಸಭೆಗೆ ಪ್ರವೇಶಿಸಿ ಭರತನಿಗೆ ಮಣಿದು ನಿಂತರು ವಂದಿಮಾಗಧರು ಆ ರಾಜರ ಹಸರುಗಳನ್ನೆಲ್ಲಾ

ಶಿರಃಕಂಪೇನ ಭರತಂ ನಮಸ್ಕೃತ್ಯ ನಿವೇದಿತಾಃ ।
ಪ್ರತೀಹಾರೇಣ ದಕ್ಷೇಣ ತೇನ ಚಕ್ರುರ್ವರಾಸನಂ ॥ ೬೧ ॥

ಸಿಂಹಾಸನಸ್ಥಾ ನೃಪತೀನ್ಭರತಸ್ತ್ವನುರೂಪಯಾ ।
ಗಿರಾ ಪಪ್ರಚ್ಛ ಕುಶಲಂ ಪೂಜಯಾಮಾಸ ಚಾಪ್ಯಥ ॥ ೬೨ ॥

ತುಷ್ಟುವುರ್ವಂದಿನಸ್ತತ್ರ ನಾನಾದೇಶ್ಯಾನ್ನರಾಧಿಪಾನ್ ।
ನಿವೇದಯಂತಃ ಸ್ತುತ್ಯಂತೇ ಭರತಾಯ ಮಹಾತ್ಮನೇ ॥ ೬೩ ॥

ಸ್ತುವತಾಂ ಭರತಂ ತತ್ರ ಬಂದಿನಾಂ ಸ ಮಹಾಸ್ವನಃ ।
ಪ್ರಾಸಾದಭೋಗಸಂರುದ್ಧೋ ವಿಪುಲಃ ಸಮಪದ್ಯತ ॥ ೬೪ ॥

ಕ್ಷ್ಮಾಪಾಲಮೌಲಿಮಾಣಿಕ್ಯಮರೀಚಿವಿಕಟೋಜ್ಜ್ವಲಂ ।
ಬಾಲಾತಪಾಂಶುಚ್ಛುರಿತಂ ಬಭೂವ ಚ ಸಭಾಗೃಹಂ ॥ ೬೫ ॥

---

ಗಟ್ಟಿಯಾಗಿ ಕೂಗಿ ಕೂಗಿ ಹೇಳಿದರು. ಆ ರಾಜರೆಲ್ಲರೂ ಸ್ವಸ್ವರಾಪ ಪರಿವಾರದೊಡನೆ ರಾಜನ ಸಭೆಯನ್ನು ಪ್ರವೇಶಿಸಿದರು

೬೧-೬೨ ಅವರೆಲ್ಲರೂ ತಲೆಯನ್ನು ಬಗ್ಗಿಸಿ ಭರತನಿಗೆ ಅಭಿವಂದಿಸಿ, ಪರಿಕಾರರು ತೋರಿಸಿದ ಆಸನಗಳ ಮೇಲೆ ಕುಳಿತುಕೊಂಡರು ಈರೀತಿ ಸುಖಾಸೀನರಾದ ಸಮಸ್ತ ರಾಜರನ್ನೂ ಭರತನು ಅವರವರಿಗೆ ಅನುರೂಪವಾದ ಮರ್ಯಾದೆಯಿಂದ ಕುಶಲಪ್ರಶ್ನೆಗಳನ್ನು ಮಾಡಿ ಅವರೆಲ್ಲರನ್ನೂ ಗೌರವಿಸಿದನು.

೬೩. ಅಲ್ಲಿ ಕುಳಿತ ಮಹಾರಾಜರ ಹೆಸರುಗಳನ್ನೂ, ಅವರು ಆಳುತ್ತಿರುವ ದೇಶಗಳ ಹಸರನ್ನೂ, ಅವರ ಬಿರುದು ಬಾವಲಿಗಳನ್ನೂ ವಂದಿಮಾಗಧರು ಬೇರೆ ಬೇರೆಯಾಗಿ ವಿವರಿಸಿ ಭರತನಿಗೆ ತಿಳಿಸಿದರು

೬೪-೬೫ ಈ ವೇರೆ ವಂದಿಗಳು ಘಟ್ಟಿಯಾಗಿ ಕೂಗುತ್ತಿದ್ದ ಸದ್ದು ಆ ಪ್ರಾಸಾದದಲ್ಲೆಲ್ಲಾ ಪ್ರತಿಧ್ವನಿಮಾಡುತ್ತಿತ್ತು ಆ ರಾಜರುಗಳು ಶಿರಸ್ಸಿನಲ್ಲಿ ಧರಿಸಿದ್ದ ವಿವಿಧ ವಜ್ರಮಾಣಿಕ್ಯ ರತ್ನ ಖಚಿತವಾದ ಕಿರೀಟಗಳಿಂದ ಹೊರಟ ಅತ್ಯುಜ್ವಲವಾದ ಕಾಂತಿಯು, ಆ ಸಭಾಗೃಹವನ್ನೆಲ್ಲಾ ಸೂರ್ಯನ ಎಳೆಬಿಸಿಲು ಪ್ರಸರಿಸಿದೆಯೋ ಎಂಬಂತೆ ಬಹಳ ಪ್ರಕಾಶಮಾನವನ್ನಾಗಿಮಾಡಿತು

**ತತಃ ಸ ಭರತಃ ಶ್ರೀಮಾನ್ವಿಸಸರ್ಜ ನರಾಧಿಪಾನ್ ।**
**ಸ್ವಹಸ್ತದತ್ತತಾಂಬೂಲಾನ್ಪ್ರತೀಹಾರನಿವೇದಿತಾನ್ ॥ ೧೬ ॥**

**ತತಃ ಸಮುತ್ಥಾಯ ಯಯೌ ದ್ವಿತೀಯಗೃಹಮುತ್ತಮಂ ।**
**ತತ್ರ ಚಕ್ರೇ ತದಾ ಮಂತ್ರಂ ಮಾತುಲೇನ ಯುಧಾಜಿತಾ ॥ ೧೭ ॥**

**ಪುರೋಧಸಾ ಚ ಗಾರ್ಗ್ಯೇಣ ಸ್ವೇನ ಕಾಲವಿದಾ ತಥಾ ।**
**॥ ಯುಧಾಜಿದುವಾಚ ॥**
**ಕಾಲೇ ತ್ವಮಿಹ ಸಂಪ್ರಾಪ್ತೋ ಗಂಧರ್ವಾಣಾಂ ವಧೇಚ್ಛಯಾ ॥ ೧೮ ॥**

**ತತ್ರ ಯಾವನ್ನ ಜಾನಂತಿ ಗಂಧರ್ವಾಸ್ತೇ ತ್ವದಾಗಮಂ ।**
**ಅವಸ್ಕಂದೇನ ತಾನದ್ಯ ತಾವದ್ರಾತ್ರೌ ಜಹಿ ಪ್ರಭೋ ॥ ೧೯ ॥**

---

೧೬ ಸ್ವಲ್ಪ ಹೊತ್ತು ಸಭಾಭವನವು ಸಂಪೂರ್ಣ ಕಾಂತಿಯಿಂದ ಶೋಭಿಸಿತು. ತನ್ನ ದರ್ಶನಕ್ಕಾಗಿ ಬಂದಿದ್ದ ರಾಜರುಗಳಿಗೆಲ್ಲಾ ಭರತನು ತನ್ನ ಹಸ್ತದಿಂದಲೇ ತಾಂಬೂಲವನ್ನು ಕೊಟ್ಟು ಸಮಸ್ತ ರಾಜರನ್ನೂ ಬೀಳ್ಕೊಟ್ಟನು. ಆ ರಾಜರೆಲ್ಲರೂ ಯಥಾ ಯಥಾ ಹೊರಟು ಹೋದ ಬಳಿಕ ಭರತನು ಆ ಸಭೆಯ ಎರಡನೆಯ ಅಂತಸ್ತನ್ನು ಪ್ರವೇಶಿಸಿದನು. ಅಲ್ಲಿ ಸಮಾಸೀನನಾಗಿದ್ದ ತನ್ನ ಸೋದರಮಾವ ಯುಧಾಜಿನ್ಮಹಾರಾಜನೊಡನೆಯೂ ಜ್ಯೋತಿಷ್ಕನಾದ ಗಾರ್ಗ್ಯ ಮಹರ್ಷಿಗಳೊಡನೆಯೂ ಮಂತ್ರಾಲೋಚನೆ ಮಾಡಿದನು.

೧೮-೨೦ ಭರತ! ನೀನು ನನ್ನ ಮಾತನ್ನು ಮೀರದೆ ರಾಮಾಜ್ಞೆಯಿಂದ ಇಲ್ಲಿಗೆ ಬಂದಿರುತ್ತೀಯೆ! ಈಗ ಈ ದುಷ್ಟರಾದ ಗಂಧರ್ವರನ್ನೆಲ್ಲಾ ಸಂಹರಿಸಬೇಕಾಗಿದೆ. ಅವರನ್ನು ಸಂಹರಿಸುವುದೆಂದರೆ ಸಾಮಾನ್ಯವಾದ ಕೆಲಸವಲ್ಲ. ಈಗ ನೀನೊಂದು ತಂತ್ರವನ್ನು ಮಾಡಬೇಕು. ಏನೆಂದರೆ, ನೀನು ಬಂದಿರುವ ವೃತ್ತಾಂತವು ಆ ಗಂಧರ್ವರಿಗೆ ತಿಳಿಯುವುದಕ್ಕೆ ಮುಂಚೆಯೇ ರಾತ್ರಿಯ ಹೊತ್ತಿನಲ್ಲಿ ಆ ಗಂಧರ್ವರ ಮನೆಗಳಿಗೆ ನುಗ್ಗಿ ನಿದ್ದೆಯಿಂದೆಚ್ಚರವಿಲ್ಲದೆ ಬಿದ್ದಿದ್ದಾಗ ಅವರುಗಳ ಕತ್ತನ್ನು ಕತ್ತರಿಸಿ ಬರುವುದು ಒಳ್ಳೆಯದೆಂದೂ, ಹಾಗಲ್ಲದೆ ಬೇರೆ ವಿಧವಾಗಿ ಅವರನ್ನು

ಅವಸ್ಕಂದೇನ ನಿಧನಂ ಸುಖಂ ತೇಷಾಂ ಭವಿಷ್ಯತಿ ।
॥ ಕಾಲವಿದುವಾಚ ॥
ಸುಪ್ತೇ ಪ್ರಮತ್ತೇ ವಿಶ್ವಸ್ತೇ ತಥಾ ರಾಜಂಚ್ಛ್ರಮಾನ್ವಿತೇ ॥ ೨೦ ॥

ಅವತೀರ್ಣೇ ಬಲೇ ಚೈವ ಸರಿತಂ ವಹತೀಂ ತಥಾ ।
ರಾತ್ರೌ ಜಾಗರಣಶ್ರಾಂತೇ ಛದ್ಮಯುದ್ಧಂ ವಿಧೀಯತೇ ॥ ೨೧ ॥

ರಾತ್ರೌ ವಿಹಾರಶೀಲಾಸ್ತೇ ಗಂಧರ್ವಾಃ ಪ್ರಭವಂ ಪ್ರಭೋ ।
ನ ತೇಽವಸ್ಕಂದಮರ್ಹಂತಿ ರಾತ್ರೌ ಕೈಕೆಯನಂದನ ॥ ೨೨ ॥

ವಿಜಯಶ್ಚ ದಿವಾ ಯುದ್ಧೇ ಭರತಸ್ಯ ಪ್ರದೃಶ್ಯತೇ ।
॥ ಗಾರ್ಗ್ಯ ಉವಾಚ ॥
ಅದೌ ದೂತೇನ ವಕ್ತವ್ಯಂ ಗಂಧರ್ವಾಣಾಂ ಪ್ರಯೋಜನಂ ॥ ೨೩ ॥

ಯಥಾ ದೇಶಮಿಮಂ ತ್ಯಕ್ತ್ವಾ ಪ್ರಜಧ್ವಂ ತುಹಿನಾಚಲಂ ।
ಗಂಧರ್ವಾಣಾಂ ನಿವಾಸಸ್ತು ಹಿಮವತ್ಯಚಲೋತ್ತಮೇ ॥ ೨೪ ॥

---

ಕೊಲ್ಲಲು ಸಾಧ್ಯವಿಲ್ಲವೆಂದೂ ನನಗೆ ತೋರುತ್ತದೆ ಈ ಮೋಸದ ಯುದ್ಧದಿಂದಲೇ ಅವರನ್ನು ಕೊಲ್ಲಬೇಕೆಂದನು

೨೧-೨೩. ಕಾಲವಿದನೆಂಬ ವೀರನು ಹೇಳುತ್ತಾನೆ —ಶಹಬಾಸ್! ಶಹಬಾಸ್! ಒಳ್ಳೇ ಉಪಾಯವಲ್ಲವೇ ? (ಹಾಸ್ಯಾರ್ಥದಲ್ಲಿ) ಮತ್ತಾಗಿ ಬಿದ್ದುಕೊಂಡು ಜ್ಞಾನವಿಲ್ಲದೆ ನಿದ್ದೆಮಾಡುತ್ತಿರುವಾಗಲೇ ಹರಿಯುವ ನದೀ ನೀರಿನಂತೆ ನಮ್ಮ ಸೈನ್ಯ ಪ್ರವಾಹವು ಒಮ್ಮೆಯೇ ನುಗ್ಗಿ ಗಂಧರ್ವರ ತಲೆಯನ್ನು ಕೊಚ್ಚಿ, ಮುಚ್ಚುಮರೆಯಾಗಿ ಯುದ್ಧಮಾಡಿ ಗೆಲ್ಲುವುದೇ ಒಳ್ಳೆಯ ಉಪಾಯವೆಂದು ಯುಧಾಜಿದರು ಹೇಳಿದರಲ್ಲವೆ ? ಹಾಗೆ ಮಾಡುವುದು ಯೋಗ್ಯವೂ ಅಲ್ಲ ಈ ಕ್ರಮವು ಧರ್ಮಯುದ್ಧವೆನಿಸುವುದಿಲ್ಲ ಭರತನು ಈ ಯುದ್ಧವನ್ನು ಮಾಡದೆ ಹಗಲಿನಲ್ಲೇ ಗಂಧರ್ವರನ್ನು ದುರಿಸಿ ಯುದ್ಧಮಾಡುವುದು ಯುಕ್ತವಾಗಿದ

೨೪-೨೬. ಗಾರ್ಗ್ಯರು ಹೇಳುತ್ತಾರೆ — ಓಗೆಲ್ಲಾ ಮಾಡುವುದಕ್ಕಿಂತ ಮುಂಚಿತವಾಗಿ ಒಬ್ಬ ದೂತನ ಮೂಲಕವಾಗಿ ಆ ಗಂಧರ್ವರಾಜನಿಗೆ ಒಂದು

ಪೂರ್ವಮೇವ ಕೃತಸ್ತೇನ ಯೇನೇದಂ ನಿರ್ಮಿತಂ ಜಗತ್ ।
ಸ್ಥಾನಮೇತನ್ಮನುಷ್ಯಾಣಾಂ ತ್ಯಕ್ತ್ವಾಮುರ್ಹಥ ಮಾ ಚಿರಂ ॥ ೭೫ ॥

ತೇ ಚ ದೂತವಚಃ ಶ್ರುತ್ವಾ ಸ್ಥಾನಂ ದದ್ಯುರ್ನರಾಧಿಪ ।
ಅಸಂಶಯಮುಪಾರುಹ್ಯ ಚೈತನ್ಮಮ ಮತಂ ಭವೇತ್ ॥ ೭೬ ॥

ರಾಘವಾಃ ಸತ್ಯಸಂಧಾಸ್ತು ಕೂಟಯುದ್ಧಂ ನ ಶಿಕ್ಷಿತಾಃ ।
ತಸ್ಮಾತ್ತೇಷಾಂ ವಧಃ ಕಾರ್ಯಃ ಸುಯುದ್ಧೇನ ಮಯಾ ನೃಪ ॥ ೭೭ ॥

॥ ಭರತ ಉವಾಚ ॥

ಗಾರ್ಗ್ಯವಾಕ್ಯಂ ತಥಾ ಬುದ್ಧ್ವಾ ರೋಚತೇಽತಿಶಯೇನ ಮೇ ।
ಪ್ರಯಾತು ತೇಷಾಂ ದೌತ್ಯೇನ ಗಾರ್ಗ್ಯ ಏವ ಮಹಾಯಶಾಃ ॥ ೭೮ ॥

---

ಮಾತನ್ನು ಹೇಳಿಕಳುಹಿಸೋಣ, ಅದೇನೆನ್ನುವಿರೋ —ಭಗವಂತನು ಭೂಲೋಕವನ್ನು ನಿರ್ಮಾಣಮಾಡಿದ ಸಮಯದಲ್ಲಿ ಈ ಪ್ರಪಂಚದಲ್ಲಿ ಮನುಷ್ಯರು ಮಾತ್ರನೇ ವಾಸಮಾಡಬೇಕೆಂದು ವಿಧಿಸಿರುತ್ತಾನೆ ಈ ರೀತಿ ಮನುಷ್ಯಸಾನಾರ್ಹವಾದ ಈ ಭೂಮಿಯಲ್ಲಿ ನೀವಿರುವುದು ಸರಿಯಲ್ಲ ಈಗಲೂ ಈ ಭೂಮಿಯನ್ನು ಬಿಟ್ಟು ನಿಮ್ಮ ನಿವಾಸಕ್ಕಾಗಿ ಕಾದಿರುವ ಮಂಜಿನ ರಾಜ್ಯಕ್ಕೆ (ಹಿಮಾಲಯ) ಹೋಗಿ ನೀವು ಸುಖವಾಗಿ ವಾಸಮಾಡಿರಿ ಈರೀತಿಯಾಗಿ ಹೇಳಿಕಳುಹಿದ ಮೇಲೆ ಅವರು ಒಪ್ಪೇ ಮಾತಿಗೆ ಬಗ್ಗಿ ಸಾಮೋಪಾಯದಿಂದ ಭೂಮಿಯನ್ನು ಬಿಟ್ಟು ಬಿಡುವುದಾದರೆ ಯುದ್ಧದ ಪ್ರಸಕ್ತಿಯೇ ಇರುವುದಿಲ್ಲ ಇದು ನನ್ನ ಅಭಿಮತವೆಂದು ಗಾರ್ಗ್ಯರು ಹೇಳಿ ಸುಮ್ಮನಾದರು

೭೭ ೭೮ ಭರತನು ಹೇಳುತ್ತಾನೆ —ರಘುವಂಶೋತ್ಪನ್ನರಾದ ರಾಜರಲ್ಲರೂ ಸತ್ಯಸಂಧರೆಂದೂ ವೀರರೆಂದೂ ಬಹುಕಾಲದಿಂದ ಹೆಸರು ಬಂದಿದೆ ಇವರುಗಳು ಯಾವಾಗಲೂ ಕೂಟ (ಮೋಸ) ಯುದ್ಧವನ್ನರಿತವರಲ್ಲವಾದುದರಿಂದ ಕ್ರಮವಾದ ಯುದ್ಧಮಾಡಿಯೇ ಅವರನ್ನು ಗೆಲ್ಲಬೇಕಾದುದು ಧರ್ಮವೆಂದು ನನಗೆ ತೋರುತ್ತದೆ ಯಾದುದರಿಂದ ಗಾರ್ಗ್ಯರ ಮಾತಿನಂತೆ ಮೊದಲು ಆ ಗಂಧರ್ವರ ಬಳಿಗೆ ಒಬ್ಬ ದೂತನನ್ನು ಕಳುಹಿಸಿಕೊಡೋಣ ಅಂತಹ ಯೋಗ್ಯನಾದ ದೂತನಾರೂ ನಮ್ಮಲ್ಲಿಲ್ಲವಾದುದರಿಂದ ಗಾರ್ಗ್ಯರೇ ಆ ಕೆಲಸವನ್ನು ಮಾಡಲಿ

॥ ಯುಧಾಜಿದುವಾಚ ॥

ಗಚ್ಛ ಗಾರ್ಗ್ಯ ಮಹಾಭಾಗ ಗಂಧರ್ವಾಧಿಪತಿಂ ಪ್ರತಿ ।
ತಂ ಚ ಶ್ರಾವಯ ವಾಕ್ಯಾನಿ ತ್ವಯೋಕ್ತಾನೀಹ ಯಾನಿ ಮೇ ॥ ೭೯ ॥

ಅಕ್ರಿಯಾಯಾಂ ತಥಾ ತೇಷಾಂ ಶ್ರಾವಯಾಗ್ರ್ಯಾಣಿ ಮಾ ಚಿರಂ ।
ಅಸ್ಯೈವ ನಾಮ್ನಾ ಧರ್ಮಜ್ಞ ಭರತಸ್ಯ ಮಹಾತ್ಮನಃ ॥ ೮೦ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತಸ್ತ್ವಥೋಕ್ತ್ವೋಽಸೌ ಯಯೌ ಗಾರ್ಗ್ಯೋ ಮಹಾಯಶಾಃ ।
ರಥೇನ ಕಾಂಚನಾಂಗೇನ ಗಂಧರ್ವನಗರಂ ಪ್ರತಿ ॥ ೮೧ ॥

ಗತೇ ಪುರೋಹಿತೇ ಗಾರ್ಗ್ಯೇ ಭರತೋಽಪಿ ಮಹಾಯಶಾಃ ।
ಹಸ್ತಿಪೃಷ್ಠೇ ರಥೇ ಚಾಶ್ವೇ ಶಸ್ತ್ರೇ ಶಾಸ್ತ್ರೇ-ತಥೈವ ಚ ॥ ೮೨ ॥

---

೭೯-೮೦ ಯುಧಾಜಿನ್ಮಹಾರಾಜನು ಹೇಳುತ್ತಾನೆ —ಗಾರ್ಗ್ಯ ! ಈ ಕೆಲಸವನ್ನು ನೀನು ಮಾಡಬೇಕು. ನೀನೇ ಹೊರಡು ಭರತನು ಹೇಳಿದನೆಂದೇ ಹೇಳು ನನ್ನ ಹೆಸರನ್ನು ಹೇಳಬೇಡ. (ಯುಧಾಜಿತನಿಗೆ ಗಂಧರ್ವರನ್ನು ಕಂಡರೆ ಹೆದರಿಕೆ ನಾನಾಡಿದ ಮಾತನ್ನು (ಕೂಟಯುದ್ಧ) ಅಲ್ಲೇನಾದರೂ ಆಡಿಬಿಟ್ಟೀಯೆ ! ಜೋಪಾನ) ಗಂಧರ್ವರಾಜನಾದ ಶೈಲೂಷನನ್ನು ಕುರಿತು ರಾಜ್ಯವನ್ನು ಬಿಟ್ಟುಹೋಗುವಿಯೋ, ಅಥವಾ ಯುದ್ಧಮಾಡುವಿಯೋ ? ಎಂದು ಭರತನು ತಿಳಿಸಿದನೆಂದು ಹೇಳು

೮೧ ಮಾರ್ಕಂಡೇಯ ಋಷಿಗಳು ವಜ್ರನನ್ನು ಕುರಿತು ಹೇಳುತ್ತಾರೆ — ವಜ್ರಮಹಾರಾಜ ! ಕೇಳು ಈ ಮೇರೆ ಕಳುಹಿಸಲ್ಪಟ್ಟ ಗಾರ್ಗ್ಯನು ಆ ಮಾತಿಗೆ ಒಪ್ಪಿಕೊಂಡು ಗಂಧರ್ವರಾಜನ ಬಳಿಗೆ ಸುವರ್ಣ ರಥದ ಮೇಲೆ ಕುಳಿತು ಪ್ರಯಾಣ ಮಾಡಿದನು.

೮೨-೮೪ ಪುರೋಹಿತನಾದ ಗಾರ್ಗ್ಯನು ಹೊರಟು ಹೋದ ಬಳಿಕ ಮಹಾವೀರನಾದ ಭರತನು ಆನೆಯ ಮೇಲೆ, ಕುದುರೆಯ ಮೇಲೆ, ರಥದ ಮೇಲೆ ಹಾಗೂ, ಧನುರ್ವೇದೋಕ್ತವಾದ ಶಸ್ತ್ರಗಳಿಂದ, ಅಸ್ತ್ರಗಳಿಂದ, ಎದುರಾಳಿಗಳಾದ ಶತ್ರುಗಳ ಮೇಲೆ ಹೇಗೆ ಹೇಗೆ ಯುದ್ಧಮಾಡಬೇಕೆಂಬ ಬಾಹುಯುದ್ಧದ ಮಾದರೀ ಸಾರವನ್ನು ಹೇಳಿಕೊಟ್ಟನು ಇಷ್ಟೆಲ್ಲಾ ಆದ ಬಳಿಕ ಸೈನಿಕರಿಗೆ ಹೇಳತಕ್ಕ ಸಂಗತಿಗಳನ್ನೆಲ್ಲಾ ತಿಳಿಸಿ ಅವರನ್ನು ಬೀಳ್ಕೊಟ್ಟನು. ( ನಿಯುದ್ಧಂ ಬಾಹುಯುದ್ಧ, ಇತ್ಯಮರಃ )

ವ್ಯಾಯಾಮಂ ಚ ತಥಾ ಚಕ್ರೇ ನಿಯುದ್ಧೇ ಚ ಯಥೋತ್ತಮಃ ।
ಉತ್ಸಾರಿತಸ್ತಥಾ ಪದ್ಭ್ಯಾಂ ಧಾವದ್ಭಿಃ ಕುಶಲೈರ್ಜನೈಃ ॥ ೮೩ ॥

ಸ್ನಾತೈಃ ಸಂಪೂಜಿತೋ ವಿಷ್ಣುರ್ವಿಧಿವತ್ಸಾತ್ತ್ವವತ್ತಮೈಃ ।
ನಮಸ್ಕೃತ್ಯ ತಥೈವಾಗ್ನಿಂ ಹುತಂ ಸುಷ್ಠು ಪುರೋಧಸಾ ॥ ೮೪ ॥

ತಥಾಭುಕ್ತವತಾಂ ಶ್ರುತ್ವಾ ಪೂಜಿತಾನಾಂ ದ್ವಿಜನ್ಮನಾಂ ।
ಪುಣ್ಯಾಹಘೋಷಂ ವಿತ್ತೇನ ಭೂಮಿಪಾಲಂ ವಿಸರ್ಜ್ಯತಾನ್ ॥ ೮೫ ॥

ಪರಾರ್ಧ್ಯಚಂದನಾಕ್ತಾಂಗಸ್ತನುಚಾರುಸಿತಾಂಬರಃ ।
ಸರ್ವಾಲಂಕಾರಣೋಪೇತಃ ಸ್ರಗ್ವೀ ಧೂಪೇನ ಧೂಪಿತಃ ॥ ೮೬ ॥

ಆಸೀನಸ್ತ್ವಾಸ್ತನೇ ದಿವ್ಯೇ ಬುಭುಜೇ ಸ್ವಜನೈರ್ಯುತಃ ।
ಮಾತುಲಸ್ಯ ಮಹಾರ್ಘಾಣಿ ಶುಚೀನಿ ಗುಣವಂತಿ ಚ ॥ ೮೭ ॥

---

೮೪-೮೬ ಇಷ್ಟಾಗುವ ಹೊತ್ತಿಗೆ ಮಧ್ಯಾಹ್ನವಾಯಿತು ಹಸಿವಿದ್ದ ಸೈನ್ಯವೆಲ್ಲವೂ ಭರತನ ಅಪ್ಪಣೆಯಾದೊಡನೆಯೇ ಕಾಲುನಡಿಗೆಯಿಂದಲೇ ವಾಯುವೇಗದಿಂದ ಹೊರಟು ಬಿಡಾರಗಳನ್ನು ಸೇರಿಕೊಂಡು, ಎಲ್ಲರೂ ಸ್ನಾನಾಹ್ನಿಕ ದೇವತಾರ್ಚನೆಗಳನ್ನೂ ಅಗ್ನಿ ನಮಸ್ಕಾರವನ್ನೂ ಮಾಡಿ ಭೋಜನಮಾಡಿದರು ರಾಜರುಗಳೂ ಸಹ ಇದೇ ಮೇರೆ ಮಾಡಿ ಪುರೋಹಿತರಿಗೆ ದಕ್ಷಿಣೆಕೊಟ್ಟು ಅವರನ್ನು ತೃಪ್ತಿಪಡಿಸಿದ ಒಳಿಕ ವಿಪ್ರರಿಗೆ ಭೋಜನಮಾಡಿಸಿ ಭೋಜನಮಾಡಿದರು ಭರತನು ತಾನು ಶ್ರೇಷ್ಠವಾದ ಪರಿಮಳ ಗಂಧಗಳನ್ನು ಮೈಗೆ ಲೇಪಿಸಿಕೊಂಡು ದಿವ್ಯವಸ್ತ್ರಗಳನ್ನು ಧರಿಸಿದವನಾಗಿ ಹೂವಿನ ಹಾರಗಳನ್ನು ಧರಿಸಿಧೂಪದ ಹೊಗೆಗಳಿಂದ ಮೈಕೈಗಳಂ ಕಾಯಿಸಿಕೊಂಡು ಸುವಾಸನಾಯುಕ್ತನಾಗಿ ಸಕಲಾಭರಣಭೂಷಿತರಾದ ಕೆಲವು ರಾಜರನ್ನೂ, ಕೆಲವು ಆಪ್ತರನ್ನೂ ಭರತನು ತನ್ನ ಮನೆಗೆ ಕರೆಯಿಸಿಕೊಂಡನು.

೮೭-೮೯ ಭರತನೂ ಸಹ ಅಷ್ಟು ಹೊತ್ತಿಗೆ ಸಿದ್ಧನಾಗಿದ್ದನು ಆಸನ ಪಂಕ್ತಿಯಲ್ಲಿ ಮೇಲೆ ಒರೆದಂತೆ ಕೆಲವು ಮಂದಿ ಆಪ್ತರೂ ರಾಜರೂ ಸಹ ಭೋಜನಕ್ಕೆ ಸಿದ್ಧರಾಗಿ ತಮ್ಮ ಆಸನಗಳಲ್ಲಿ ಕುಳಿತರು ಸೋದರಮಾವನಾದ ಯುಧಾಜಿತನು ಅಷ್ಟು ಹೊತ್ತಿಗ ರತ್ನಖಚಿತವಾದ ಚಿನ್ನದ ತಟ್ಟೆಗಳಲ್ಲಿ (ನರಪಕ್ಷಿ ಮೃಗಾದಿಗಳಗೂ ಬೆಂಕಿಗೂ

**ಅಪರೀಕ್ಷಿತಪೂರ್ವಾಣಿ ಪುರುಷೈರಾಪ್ತಕಾರಿಭಿಃ ।**
**ನರಪಕ್ಷಿಮೃಗಾಣಾಂತು ಲಿಂಗೈರ್ವರ್ಹ್ನಾ ತಥೈವ ಚ ॥ ೮೮ ॥**

**ಭಕ್ಷ್ಯಂ ಭೋಜ್ಯಂ ಚ ಲೇಹ್ಯಂ ಚ ಪೇಯಂ ಚೋಷ್ಯಂ ತಥೈವ ಚ ।**
**ಪಾತ್ರೇಷು ರುಕ್ಮರೌಪ್ಯೇಷು ತಥಾ ಮಣಿಮಯೇಷು ಚ ॥ ೮೯ ॥**

**ಭುಕ್ತ್ವಾಽನ್ನಂ ಗೀತಶಬ್ದೇನ ಚಾಪ್ತೈಃ ಕತಿಪಯೈಃ ಸಹ ।**
**ತಥೋಪಸ್ಪೃಶ್ಯ ಧರ್ಮಾತ್ಮಾ ದಂತಧಾವನಪೂರ್ವಕಂ ॥ ೯೦ ॥**

ಹಾಕಿಸಿ, ಆಪ್ತರುಗಳಿಂದ ಪರೀಕ್ಷಿಸಲ್ಪಡದೆ ಇದ್ದ) ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಪೇಯಾದಿಗಳನ್ನು ಬಡಿಸಿದ್ದನು ಭರತಾದಿಯಾಗಿ ಸಕಲರೂ ಆ ಷಡ್ರಸೋಪೇತ ವಾದ ಮೃಷ್ಟಾನ್ನವನ್ನು ಭೋಜನಮಾಡಿದರು ಭೋಜನ ಸಮಯದಲ್ಲಿ ಭಗವ ನ್ನಾಮಗಳನ್ನು ಗಾಯಕರು ವಿವಿಧರಾಗರಂಜಿತರಾಗಿ ಗಾನಮಾಡುತ್ತಿದ್ದರು.

ಟಿಪ್ಪಣಿ —ಆದರೂ ಯಾರ ಮನಸ್ಸು ಹೇಗೋ ತಿಳಿಯಕೂಡದಾದ್ದರಿಂದ ಪ್ರತಿದಿನವೂ ರಾಜನು ಭೋಜನಮಾಡುವ ಅನ್ನವನ್ನೂ ತಿಂಡಿತೀರ್ಥಗಳನ್ನೂ, ಪರಿ ಗ್ರಹಾರ್ಹವೆಂದು ಮೊದಲೇ ವೈದ್ಯರು ಪರೀಕ್ಷಿಸಲೇಬೇಕಾದ ನಿಯಮವುಂಟು. ಏಕೆಂದರೆ ಯಾರಾದರೂ ದುರಾತ್ಮರಿಂದ ಪ್ರಚೋದಿತರಾದ ನೌಕರರು ಅನ್ನಪಾನಾದಿ ಗಳಲ್ಲಿ ವಿಷಮಿಶ್ರಮಾಡಿರುವರೋ ಏನೋ ಎಂಬ ಸಂದೇಹದಿಂದ ಈ ಕ್ರಮವು ಪೂರ್ವ ಕಾಲದಿಂದಲೂ ನಡೆದುಬಂದಿದೆ. ( ದ್ವಿತೀಯ ಖಂಡವನ್ನು ಓದಿರಿ )

ಯುಧಾಜಿತನು ಭರತನಿಗೆ ಸೋದರಮಾವನಾದ್ದರಿಂದ ಆವನಮನೆಯಲ್ಲಿ ಸಿದ್ಧವಾಗಿದ್ದ ಔತನದ ಅಡಿಗೆಯನ್ನು ಪರೀಕ್ಷಮಾಡಿಸದೇ ಭರತನ ಪರಿವಾರವೂ, ಭರತನೂ ಊಟ ಮಾಡಿದರೆಂಬ ವಿಚಾರವನ್ನು ಇಲ್ಲಿ ವ್ಯಾಸರು ಕಂಠೋಕ್ತವಾಗಿ ಬಿಡಿಸಿ ಹೇಳಿರುವುದೇ ನೆಂದರೆ, ಸೋದರಮಾವಂದಿರಿಗೆ ತಮ್ಮ ತಮ್ಮ ಸೋದರಳಿಯಂದಿರ ವಿಷಯದಲ್ಲಿ ಅಪಾರವಾದ ನಿಸರ್ಗಪ್ರೇಮವಿರುವುದೆಂಬ ದೃಷ್ಟಾಂತವನ್ನು ತೋರಿಸುವುದಕ್ಕಾಗಿಯೇ ವ್ಯಾಸರು ಇದನ್ನು ಪ್ರಸ್ತಾಪಿಸಿರುತ್ತಾರೆ ಆದ್ದರಿಂದ ಸೋದರಮಾವನ ಮನೆಯ ಅಡಿಗೆಯನ್ನು ಪರೀಕ್ಷೆಮಾಡದೆಯೇ ಸಕಲರೂ ಭೋಜನಮಾಡಿ ಸಂತೃಪ್ತರಾದರೆಂದು ಭಾವಿಸಬೇಕು ಅಲಮತಿ ವಿಸ್ತರೇಣ

೯೦ ೯೩ ಭೋಜನವಾದ ಬಳಿಕ ಭರತನು ದಂತಧಾವನ ಪೂರ್ವಕವಾಗಿ

ಚಕ್ರಸ್ಯ ಶಯನಂ ಭೇಜೇ ವಾಮಪಾರ್ಶ್ವೇನ ಶತ್ರುಹಾ ।
ಇತಿಹಾಸಂ ಸ ಶುಶ್ರಾವ ತತ್ರಸ್ಥಃ ಪುರುಷೋತ್ತಮಃ ॥ ೯೧ ॥

ತತಃ ಸ ಶಯನಂ ತ್ಯಕ್ತ್ವಾ ಶಾಸ್ತ್ರಾಭ್ಯಾಸಂ ಮಹಾಯಶಾಃ ।
ಚಕಾರ ರಘುಶಾರ್ದೂಲಃ ಸತಾಂ ಮಾರ್ಗಮನುವ್ರಜನ್ ॥ ೯೨ ॥

ಏತಸ್ಮಿನ್ನೇವ ಕಾಲೇ ತು ಸಹ ಗಾರ್ಗ್ಯೇಣ ಯುಧಾಜಿತಾ ।
ವಿವೇಶ ಭರತಂ ದ್ರಷ್ಟುಂ ರಥರೇಣುಪರಿಪ್ಲುತಃ ॥ ೯೩ ॥

ಸುಖಾಸೀನಸ್ತು ಭರತಂ ವಾಕ್ಯಮೇತತ್ತತೋಽಬ್ರವೀತ್ ।

॥ ಗಾರ್ಗ್ಯ ಉವಾಚ ॥

ತತೋ ವಾಕ್ಯಾನಿ ಸರ್ವಾಣಿ ಶೈಲೂಷಃ ಶ್ರಾವಿತೋ ಮಯಾ ॥ ೯೪ ॥

---

ಕೈತೊಳೆದುಕೊಂಡು ಆಚಮನಮಾಡಿದನು ಸ್ವಲ್ಪ ಹೊತ್ತು ತನ್ನ ಬಿಡಾರದಲ್ಲಿ ಸುತ್ತಾಡಿ ಸುಸಜ್ಜಿತವಾದ ಹಾಸಿಗೆಯಲ್ಲಿ ಎಡಮಗ್ಗುಲಾಗಿ ಸ್ವಲ್ಪಹೊತ್ತು ಮಲಗಿ ಕೊಂಡು, ಅಲ್ಲಿ ನಿಂತಿದ್ದ ಒಬ್ಬ ಇತಿಹಾಸಜ್ಞನಾದ ಒಬ್ಬ ಪಂಡಿತನು ಹೇಳಿದ ಇತಿಹಾಸ (ಚರಿತ್ರೆ) ಗಳನ್ನು ಕೇಳುತ್ತಾ ಇದ್ದು ಸ್ವಲ್ಪ ಹೊತ್ತಿನಲ್ಲಿಯೇ ಮೇಲು ಕ್ಕೆದ್ದು ಬಿಟ್ಟನು ಎದ್ದು ಕುಳಿತ ಒಳಿಕ ಸ್ವಲ್ಪ ಸಮಯದವರೆಗೆ ಪೂರ್ವಿಕರಾದ ಸಜ್ಜನರ ಮಾರ್ಗವನ್ನನುಸರಿಸಿ ಶಾಸ್ತ್ರ ಪುರಾಣಗಳನ್ನು ಓದಿಸಿ ಕೇಳಿದನು

೯೩ ೯೪. ಇಷ್ಟು ಹೊತ್ತಿಗೆ ಸರಿಯಾಗಿ ಶೈಲೂಷರಾಜನ ಬಳಿಗೆ ಹೋಗಿದ್ದ ಗಾರ್ಗ್ಯನು ರಥದ ಮೇಲೆಯೇ ಜಾಗ್ರತೆಯಾಗಿ ಹೊರಟು ಹಿಂತಿರುಗಿ ಬಂದು ಭರತ ನನ್ನು ಕಂಡು, ಆವನಾಜ್ಞೆಯ ಪ್ರಕಾರ ಕುಳಿತುಕೊಂಡವನಾಗಿ ಶತ್ರುವಾದ ಶೈಲೂಷ ಗಂಧರ್ವನು ಹೇಳಿದ ಮಾತನ್ನು ಇಂತು ತಿಳಿಸಿದನು.

ಗಾರ್ಗ್ಯನು ಹೇಳಿದುದೇನೆಂದರೆ —

ಸ್ವಾಮಿ ! ನೀವು ಹೇಳಿದ ಮಾತನ್ನೆಲ್ಲಾ ಸ್ವಲ್ಪವೂ ಬಿಡದ ನಾನು ಶೈಲೂಷನ ಮುಂದೆ ಹೇಳಿದೆನು ಆವನು ಅದಕ್ಕೆ,—ನಾನು ಇದೊಂದಕ್ಕೂ ಒಪ್ಪುವುದಿಲ್ಲ ವೆಂದೂ, ನನ್ನ ಸಂಗಡ ಯುದ್ಧಮಾಡಿಯೇ ಮಾಡಬೇಕೆಂದೂ ಹೇಳಿ ಬಿಟ್ಟನಲ್ಲದೆ, ನನ್ನನ್ನು ಕುರಿತು, ಪುನಃ, ಎಲೋ, ಗಾರ್ಗ್ಯ ! ನಾಳೆ ನಿನ್ನ ಭರತ

ನ ತಾನಿ ತಸ್ಯ ರೋಚಂತೇ ಸಂಗ್ರಾಮಸ್ತಸ್ಯ ರೋಚತೇ ।
ಭರತೇನ ಸಮಾಗಮ್ಯ ಶ್ವೋಭೂತೇ ದ್ವಿಜಪುಂಗವಃ ॥ ೯೫ ॥

ಭರತಂ ನಾಶಯಿಷ್ಯಾಮಿ ನೀಹಾರಂ ಚಂದ್ರಮಾ ಯಥಾ ।
ಇತ್ಯುಕ್ತ್ವಾ ಸ ತು ಮಾಂ ರಾಜಾ ಪ್ರೇಷಯಾಮಾಸ ಸತ್ವರಃ ॥ ೯೬ ॥

ಆಹ್ವಾನದುಂದುಭಿಸ್ತತ್ರ ನಿಷ್ಕ್ರಾಂತೇ ಮಯಿ ಚಾಹತಃ ।
ಏತತ್ ಜ್ಞಾತ್ವಾ ಸ ಯುದ್ಧಾಯ ಪ್ರಾತಃ ಸಜ್ಜೋ ಭವೇತ್ತ್ವವ ॥ ೯೭ ॥

॥ ಮಾರ್ಕಂಡೇಯ ಉವಾಚ ॥

ಇತಿ ಗಾರ್ಗ್ಯವಚಃ ಶ್ರುತ್ವಾ ಭರತೋ ಗಾರ್ಗ್ಯಮಬ್ರವೀತ್ ।
ಗಚ್ಛ ಶೀಘ್ರಂ ಗೃಹಂ ಬ್ರಹ್ಮಂಶ್ಛ್ರಾಂತೋ ರಥಬಲಾಧ್ವತಃ ॥ ೯೮ ॥

ಅಹಮಾಜ್ಞಾಪಯಿಷ್ಯಾಮಿ ಸರ್ವಂ ಸಾಂಗ್ರಾಮಿಕಂ ವಿಧಿಂ ।
ಏತಾವದುಕ್ತ್ವಾ ವಿಜಯಂ ಸೇನಾಧ್ಯಕ್ಷಮಥಾಬ್ರವೀತ್ ॥ ೯೯ ॥

ನಿನ್ನ ಮೋಡಗಳನ್ನು ಚಂದ್ರನು ಛೇದಿಸುವಂತೆ ನಾನು ಛೇದಿಸಿ (ನಾಶಮಾಡಿ) ಬಿಡುತ್ತೇನೆ ಹೋಗು! ಈಗಲೇ ಹೋಗಿ ಈ ಮಾತನ್ನು ನಿನ್ನ ಭರತನಿಗೆ ಹೇಳಿಬಿಡೆಂದು ನನ್ನೊಡನೆ ಹೇಳಿದನು

೯೭. ಕೂಡಲೇ ನಾನೂ ಸಹ ಸ್ವಲ್ಪವೂ ಸಾವಕಾಶಮಾಡದೆ ರಥದ ಮೇಲೆ ಹತ್ತಿ ಹೊರಟು ಬಂದುಬಿಟ್ಟೆನು ನಾನು ಬರುತ್ತಿರುವಾಗಲೇ ರಣದುಂದುಭಿಯು ಮೊಳಗಿದ ಸದ್ದು ನನಗೆ ಕೇಳಿಸುತ್ತಿತ್ತು ಭರತ! ಕೇಳಿದೆಯಷ್ಟೆ? ನಾಳೆಯ ದಿನ ಆ ಗಂಧರ್ವರು ನಿನ್ನೊಡನೆ ಯುದ್ಧಕ್ಕೆ ಸಿದ್ಧವಾಗಿರುತ್ತಾರೆ, ಇಷ್ಟೇ ವೃತ್ತಾಂತ

೯೮-೧೦೦ ಮಾರ್ಕಂಡೇಯರು ವಜ್ರರಾಜನಿಗೆ ಮುಂದೆ ನಡೆದ ಸಂಗತಿಯನ್ನು ಹೇಳುತ್ತಾರೆ —ವಜ್ರರಾಜ! ಮನಸ್ಸಿಟ್ಟು ಕೇಳಯ್ಯ! ಹೀಗೆ ಹೇಳಿದ ಗಾರ್ಗ್ಯನ ಮಾತನ್ನು ಕೇಳಿ ಭರತನು ಹೇಳಿದನು —

ಅಯ್ಯಾ! ಗಾರ್ಗ್ಯ! ನನ್ನ ಜತೆಯಲ್ಲಿ ಬಂದಿರುವ ಸಕಲ ರಾಜರೂ, ಸಕಲ ಸೈನ್ಯವೂ ಒಂಟಯ ಮೇಲೆ ಜಾಗ್ರತೆಯಾಗಿ ಹೊರಡಲಿ. ನಾಳೆ ಬೆಳಗಾಗುವಲ್ಲಿ ಎಲ್ಲರೂ

ಮನೋಽಷ್ಟ್ರನಾಹಿಭಿಃ ಶೀಘ್ರಂ ಶಿಬಿರೇಷು ಮಹೀಕ್ಷಿತಾಂ ।
ಯೋಧಾನಾಜ್ಞಾಪಯಂತ್ವದ್ಯ ಶ್ವೋಭೂತಾಯ ರಣಾಯ ವೈ ॥ ೧೦೦ ॥

ಯುದ್ಧಾವಧಾನಿಕಂ ಸರ್ವಂ ಕರ್ತವ್ಯಂ ಚ ತಥಾ ತ್ವಯಾ ।
ಏವಮಾಜ್ಞಾಪ್ಯ ನಾಗಾನಾಂ ತುರಗಾಣಾಂ ತಥೈವ ಚ ॥ ೧೦೧ ॥

ಪ್ರತ್ಯವೇಕ್ಷಾಂ ತತಃ ಕೃತ್ವಾ ಸಂಧ್ಯಾಮನ್ವಾಸ್ಯ ಪಶ್ಚಿಮಾಂ ।
ರಹೋಗತಃ ಸ ಶುಶ್ರಾವ ನರಾಣಾಂ ಗೂಢಭಾಷಿತಂ ॥ ೧೦೨ ॥

ಆರುರೋಹ ತದಾ ಶ್ರುತ್ವಾ ಪ್ರಾಸಾದಂ ಹಿಮಪಾಂಡುರಂ ।
ಕೈಲಾಸಶಿಖರಾಕಾರಂ ನಿವಾತಂ ರಜನೀಮುಖೇ ॥ ೧೦೩ ॥

ತತಸ್ತು ಸೈನಿಕಃ ಕಶ್ಚಿಚ್ಛಿಬಿರೇ ಭರತಸ್ಯ ತು ।
ತಲಂ ತಲೇನಾಭ್ಯಹನತ್ಪವನಾರ್ಥಂ ಯದೃಚ್ಛಯಾ ॥ ೧೦೪ ॥

---

ರಣರಂಗದಲ್ಲಿ ಕಾದಿರಬೇಕೆಂದು ಸೈನ್ಯದಲ್ಲೆಲ್ಲಾ ಡಂಗೋರೆ ಮೂಲಕ ಸಾರಿಸಿಬಿಡೆಂದು ಆಜ್ಞೆಮಾಡಿದನು

೧೦೧-೧೦೨ ಯುದ್ಧಕ್ಕೆ ತಕ್ಕ ಸಿದ್ಧತೆಗಳೆಲ್ಲಾ ನಡೆಯಲಿ ಆನೆಗಳೂ ಕುದುರೆಗಳೂ, ಕಾಲಾಳುಗಳೇ ಮುಂತಾದ ವಿಶಿಷ್ಟ ಸೈನ್ಯವೂ ಈಗಿನಿಂದಲೇ ಪ್ರಯಾಣ ಸನ್ನಾಹಮಾಡಲೆಂದು ಹೇಳಿ ಭರತನು ಸಾಯಂಸಂಧ್ಯಾವಂದನೆಗೋಸ್ಕರ ಬಿಡಾರಕ್ಕೆ ತೆರಳಿದನು ಸಂಧ್ಯಾವಂದನೆಯಾದ ಬಳಿಕ ಭರತನು ಗೂಢಚಾರನಂತೆ ಬೇರೆ ಸಾಮಾನ್ಯ ವೇಷವನ್ನು ಧರಿಸಿ ಜನರು ಅವರವರ ಮನೆಗಳಲ್ಲಿ ಏನೇನು ಮಾತನಾಡಿಕೊಳ್ಳುವರೋ ಕೇಳಬೇಕೆಂದು ಕತ್ತಲೆಯಾಗುತ್ತಲೂ ಗುಡಾರದಿಂದ ಹೊರ ಹೊರಟನು

೧೦೩-೧೦೪ ಹೀಗೆ ಸ್ವಲ್ಪ ಸಮಯದವರೆಗೆ ಅಡ್ಡಾಡಿ, ಹಿಮದಂತೆ ಶುಭ್ರವಾದ ಅರಮನೆಯ ಎತ್ತರವಾದ ಮಹಡಿಯನ್ನೇರಿ ನೋಡುತ್ತಿರುವಲ್ಲಿ ಆಗ ಇವನ ಕಿವಿಗೆ ಕೆಲವು ಮಾತುಗಳು ಬಿದ್ದುವು ಮತ್ತು ಆ ಶಿಬಿರದಲ್ಲಿ ನಡೆದ ಸಂಗತಿಯೊಂದನ್ನು ಇಲ್ಲಿ ಬರೆಯುತ್ತೇವೆ ಆಗ ಜ್ಯೇಷ್ಠಮಾಸದ ಉರಿಬೇಸಗೆಯೆಂದು ಹಿಂದೆ ಒಮ್ಮೆ ಹೇಳಿಯಾಗಿದೆಯಷ್ಟೆ! ಆ ರಾತ್ರಿ ಆಕಾಶವು ನಿರ್ಮಲವಾಗಿತ್ತು [illegible] ಬಹಳವಾಗಿತ್ತು ಸ್ವಲ್ಪವೂ ಗಾಳಿಯೇ ಬೀಸುತ್ತಲಿರಲಿಲ್ಲ ಆಗ ಸ್ವಲ್ಪ ಗಾಳಿಯಿಂದ ಬೀಸಿಕೊಳ್ಳಬೇಕೆಂದು ಒಬ್ಬ ಸೈನಿಕನು ಅಂಗೈಯನ್ನು ಅಗಲವಾಗಿ ಕೆನ್ನೆ

ತತಸ್ತು ಸೈನಿಕೈಃ ಸರ್ವೈಸ್ತ್ರಲತಾಲೈರ್ಮಹಾಸ್ವನಂ ।
ಚಕ್ರಿರೇ ಪುರುಷವ್ಯಾಘ್ರ ತಸ್ಮಿನ್ಕಾಲೇ ದಿವಂ ಗತಂ ॥ ೧೦೫ ॥

ಪ್ರವವೌ ಚ ತದಾನೀತೋ ವಾಯುರ್ಮನುಜಪುಂಗವ ।
ಏತಸ್ಮಿನ್ನೇವ ಕಾಲೇ ತು ಮದ್ರರಾಜಸ್ತದಾಂಶುಮಾನ್ ॥ ೧೦೬ ॥

ಪ್ರಾಸಾದವರಮಾರೂಢೋ ಜ್ಞಾತವಾನ್ಭರತಂ ತದಾ ।
ದೀಪಾಲೋಕೇನ ಲಕ್ಷ್ಯಾ ಚ ಪ್ರಾಸಾದಸ್ಯ ವಿವೃದ್ಧಯಾ ೧೦೭ ॥

ಸ ಜಗಾಮ ತದಾ ರಾಜಾ ಪ್ರಹಸನ್ಸೈನಿಕಂ ಜನಂ ।
ಭರತಸ್ಯ ಪ್ರದಾಸ್ಯಾಮಿ ಯುಕ್ತ್ಯೈವ ಬಲದರ್ಶನಂ ॥ ೧೦೮ ॥

ತೃಣಮುಷ್ಟಿಮುಪಾದೀಪ್ಯ ಸರ್ವೋಽಪಿ ಕಟಕೇ ಜನಃ ।
ಪಾಣಾವಾದಾಯ ಮುದಿತಃ ಕ್ಷ್ವೇಡಾಶಬ್ದಂ ಕರೋತು ವೈ ॥ ೧೦೯ ॥

---

ಯುವತಿಗೆ ಬೀಸುತ್ತಾ ಇರಲು ಆಕೈಯು ಕೆನ್ನೆಗೆ ನೋಕುತ್ತಿದ್ದಾಗ ಸ್ವಲ್ಪ ಸದ್ದಾಯಿತು ಹಾಗಯೇ ಗಾಳಿಯೂ ಉತ್ಪತ್ತಿಯಾಯಿತು (ತಲವೆಂದರೆ ಅಂಗೈಯನ್ನು ಕೆನ್ನೆಗೆ ನೋಕಿಸುವುದೆಂದರ್ಥ) -ಇವನು ಹೀಗೆ ಗಾಳಿ ಬೀಸಿಕೊಳ್ಳುವುದನ್ನು ನೋಡಿ ನಖ ಯನ್ನು ಸಹಿಸಲಾರದೆ ಇತರರೂ ಸಹ ತಲದಿಂದ ತಲವನ್ನು ಹೊಡೆಯುತ್ತಾ ಬಂದರು ಇದು ಒಂದು ವಿಧವಾದ ತಾಳಧ್ವನಿಯಂತೆ ಒಟ್ಟುಗೂಡಿ ಮಹಾಶಬ್ದವಾಗಿ ಪರಿಣ ಮಿಸಿತು ಈ ಸದ್ದು ಆಕಾಶವನ್ನೂ ಸಹ ಹಬ್ಬಿತು.

೧೦೬-೧೦೯ ಇದರಿಂದ ಗಾಳಿಯೂ ಬೀಸಿತು ದೊಡ್ಡ ಸದ್ದೂ ಆಯಿತು ಇದೇ ಸಮಯದಲ್ಲಿ ಮದ್ರದೇಶದ ರಾಜನಾದ ಅಂಶುಮಂತನು, ಭರತನು ಮಹಡಿಯ ಮೇಲೆ ನಿಂತು ನೋಡುತ್ತಿರುವ ವಿಚಾರವನ್ನು ತಿಳಿದವನಾಗಿ ಆ ಭರತನನ್ನು ಆ ಸ್ಥಿತಿ ಯಲ್ಲಿ ಸಕಲ ಸೈನಿಕರಿಗೂ ತೋರಿಸಿ ಸಂತೋಷಪಡಬೇಕೆಂದುದ್ಯುಕ್ತನಾಗಿ ದೀಪ ಪ್ರಕಾಶವನ್ನು ಬಲಪಡಿಸಿ, ಆ ದೀಪ ಸಂಪತ್ತಿನಿಂದ ಕತ್ತಲೆಯನ್ನೆಬ್ಬಿಸಿಬಿಡಬೇಕೆಂದು ಆಲೋಚಿಸಿದವನಾಗಿ ಸೈನಿಕರೆಲ್ಲರನ್ನೂ ಕುರಿತು ಹೀಗೆ ಹೇಳಿದನು ಈಗ ನಮ್ಮ ಸೈನ್ಯದ ಬಲವನ್ನು ಯುಕ್ತಿಯಿಂದ ಭರತನಿಗೆ ತೋರಿಸಬೇಕಾಗಿರುವುದರಿಂದ, ನೀವು ಪ್ರತಿಯೊಬ್ಬರೂ ನಿಮ್ಮ ನಿಮ್ಮ ಬಿಡಾರದಿಂದ ಒಂದೊಂದು ಹಿಡಿ ಒಣ ಹುಲ್ಲನ್ನು ಕಂತೆ ಕಟ್ಟಿ ಅದಕ್ಕೆ ಬೆಂಕಿಯನ್ನು ಹತ್ತಿಸಿ, ಅದು ಉರಿಯುತ್ತಿರುವಾಗ ನಿಮ್ಮ ಶಕ್ತಿ ಯಿದ್ದಷ್ಟು ಬಲವಾಗಿ ಸಿಂಹನಾದ ಮಾಡಿರಿ.

ಪಾರ್ಥಿವೈರ್ನೈವಮುಕ್ತೇ ತು ಕಟಕೇ ತಸ್ಯ ಧೀಮತಃ ।
ಸೋಲ್ಕಾಹಸೋ ಜನಃ ಸರ್ವಃ ಕ್ಷಣೇನ ಸಮುಪದ್ಯತ ॥ ೧೧೦ ॥

ಶಿಬಿರಂ ಮದ್ರರಾಜಸ್ತು ದ್ವಿತೀಯಮಿವ ಚಾಂಬರಂ ।
ಬಭೂವ ತಾರಕಾಚಿತ್ರಮುಲ್ಕಾಹಸ್ತೈಸ್ತದಾ ನರೈಃ ॥ ೧೧೧ ॥

'ತದ್ಬಲೌಘಮುಪರ್ಯರ್ಣಂತಂ ಸೋಲ್ಕಾಹಸ್ತೈರ್ಜನೈರ್ವೃತಂ ।
ದೃಷ್ಟ್ವಾ ಜಗಾಮ ಧರ್ಮಾತ್ಮಾ ಪರಾಂ ಪ್ರೀತಿಂ ರಘೂದ್ವಹಃ ॥ ೧೧೨ ॥

ಕ್ಷ್ವೇಡಾಃ ಕಿಲಕಿಲಾಶ್ಚೈವ ಶ್ರುತ್ವಾ ಹರ್ಷಮುಪಾಗತಃ ।
ತಸ್ಮಿನ್ಪ್ರಶಾಂತೇ ಜ್ವಲನೇ ಮಂದೀಭೂತೇ ಚ ನಿಃಸ್ವನೇ ॥ ೧೧೩ ॥

ಅಭ್ಯಹನ್ಯಂತ ಭೂಪಾನಾಂ ಶಿಬಿರೇಷು ಪೃಥಕ್ಪೃಥಕ್ ।
ಸಂಜ್ಞಾತೂರ್ಯಾಣಿ ರಮ್ಯಾಣಿ ನಾನಾಲಿಂಗಾನಿ ಚಾಪ್ಯಥ ॥ ೧೧೪ ॥

---

೧೧೦-೧೧೧ ಈ ಮೇರೆ ಮದ್ರರಾಜನು ಆಜ್ಞೆಮಾಡಿದೊಡನೆಯೇ ಒಂದು ಕ್ಷಣದೊಳಗಾಗಿ ಬಿಡಾರದ ಹೊರಗಡೆ ಏನಾಯಿತು, ಬಲ್ಲಿರಾ? ವಾಚಕರೇ, ಕೇಳಿರಿ! ಕೊಳ್ಳಿಯ (ಹುಲ್ಲಿನ) ಉರಿಯನ್ನು ತಿರುಗಿಸುತ್ತಾ ಅಗಾಧವಾದ ಮದ್ರರಾಜನ ಸೈನ್ಯವು ಆಕಾಶವೇ ಬೇರೆಯೊಂದು ನಿರ್ಮಾಣವಾಗಿದೆಯೋ ಎಂಬಂತೆ ಕಾಣಿಸಿತು ಆಕಾಶದಲ್ಲಿಅಸಂಖ್ಯಾಕನಕ್ಷತ್ರರಾಶಿಗಳು ಪ್ರಕಾಶಿಸುವಂತೆ ಮದ್ರರಾಜನ ಸೈನ್ಯವೆಂಬ ಆಕಾಶದಲ್ಲಿ ಅಸಂಖ್ಯಾಕವಾದ ಕೊಳ್ಳೀಉರಿಗಳೆಂಬ ನಕ್ಷತ್ರಗಳು ಒಡಮೂಡಿ ರಾರಾಜಿಸಿದುವು

೧೧೨-೧೧೩ ಹೀಗೆ ಇದ್ದಕ್ಕಿದ್ದ ಹಾಗೆ ಸಮುದ್ರದ ಅಲೆಗಳಂತೆ ಎದ್ದ ಉರಿಯನ್ನು ನೋಡಿ ಭರತನು ಬಹಳ ಸಂತೋಷಪಟ್ಟನು. ಭರತನು ಸಂತೋಷಭರಿತನಾಗಿದ್ದ ಅದೇ ಸಮಯದಲ್ಲಿ ಕಿಲಕಿಲಧ್ವನಿಯೂ, ಸಿಂಹನಾದ ಧ್ವನಿಯೂ ಆರಂಭವಾಗಿ ಇದರಿಂದ ಭರತನಿಗೆ ಹಿಡಿಸಲಾರದಷ್ಟು ಆನಂದವುಂಟಾಯಿತು ಸ್ವಲ್ಪ ಹೊತ್ತಿನೊಳಗಾಗಿ ಸದ್ದು ನಿಂತು ಉರಿಯೂ ಆರಿ ಪ್ರಶಾಂತವಾಗಿ ಹೋಯಿತು ಹೀಗೆ ಪ್ರಕೃತಿಯು ಸ್ವಲ್ಪ ಹೊತ್ತು ಶಾಂತಿಮಯವಾಗಿರಲು ತದುತ್ತರ ಕ್ಷಣದಲ್ಲಿಯೇ, ಏನಾಯಿತು ಬಲ್ಲಿರಾ ?

೧೧೪-೧೧೫. ಬೇರೆ ಬೇರೆ ದೇಶದ ರಾಜರ ಬೇರೆ ಬೇರೆ ಸೈನ್ಯಗಳಲ್ಲಿ ಬಹು ಮನೋಹರವಾದ ನಾನಾವಿಧವಾದ ಯುದ್ಧಸಂಜ್ಞಾಸೂಚಕವಾದ ವಾದ್ಯಗಳ ರಮರವವು ಕಿವಿಗಳಿಗೆ ಕೇಳಿಸಿತು. ಇಂತಹ ಧ್ವನಿಗಳೂ, ಕೋಲಾಹಲ ಶಬ್ದಗಳೂ

ಸುಬಹೂನಿ ಮಹಾರಾಜ ತೇನ ಕೋಲಾಹಲಂ ಮಹತ್ ।
ಬಭೂವ ಪ್ರೀತಿಜನನಂ ಭರತಸ್ಯ ಮಹಾತ್ಮನಃ ॥ ೧೧೫ ॥

ಮಂತ್ರಯಿತ್ವಾ ತತಃ ಶ್ರೀಮಾನ್ಕ್ಷಣಮಾತ್ರಂ ಯುಧಾಜಿತಾ ।
ತೇನೈವ ಸಹ ಭುಕ್ತ್ವಾ ಚ ಸುಷ್ವಾಪ ಶಯನೋತ್ತಮೇ ।
ಮಧುರೇಣ ಸುಗೀತೇನ ವೀಣಾವೇಣುರವೇಣ ಚ ॥ ೧೧೬ ॥

ಹಿಮಾವದಾತೇ ವರಮಾಲ್ಯಚಿತ್ರೇ
ವಿತಾನಕಾಧೋವಿಹಿತೇ ಮನೋಜ್ಞೇ ।
ಸುಷ್ವಾಪ ರಾತ್ರಿಂ ಸ ಮಹಾನುಭಾವೋ
ಭೋಗೀಂದ್ರಭೋಗೇ ಮಧುಜಿದ್ಯಥೈವ ॥ ೧೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಯುದ್ಧಪ್ರಸಂಗವರ್ಣನೋನಾಮ
ನವೋತ್ತರ ದ್ವಿಶತತಮೋಽಧ್ಯಾಯಃ.

---

ಎಷ್ಟಾಯಿತೆಂದು ಹೇಳುವುದಕ್ಕೇ ಸಾಧ್ಯವಿಲ್ಲ ಇದನ್ನೆಲ್ಲಾ ನೋಡಿ ಕೇಳಿ ಭರತನು ಪಟ್ಟ ಸಂತೋಷವನ್ನು ಬರೆಯಲು ನಮ್ಮಿಂದ ಸಾಧ್ಯವಿಲ್ಲ.

೧೧೬. ಭರತನು ರಾತ್ರಿ ಭೋಜನವನ್ನು ಸೋದರಮಾವನ ಜತೆಯಲ್ಲಿ ಕುಳಿತು ನೆರವೇರಿಸಿದವನಾಗಿ ಒಂದು ಕ್ಷಣ ಕಾಲ ಅವನೊಡನೆ ಆಲೋಚಿಸಿ ಸುಖವಾಗಿ ಮಲಗಿ ನಿದ್ದೆಮಾಡಿದನು ಭರತನು ಮಲಗಿದೊಡನೆಯೇ ಮಧುರವಾದ ಗಾನಗಳೂ, ಕೊಳಲು ವೀಣೆಗಳ ಇಂಚರವೂ ಮಧುರ ಮಧುರವಾಗಿ ಕೇಳಿಸಿದುವು

೧೧೭. ಮಹಾನುಭಾವನಾದ ಭಕ್ತರ ದುರಿತರಾಶಿಗಳನ್ನು ದೂರಮಾಡುವ ಆದಿನಾರಾಯಣನು ಆದಿಶೇಷಶಾಯಿಯಾಗಿ ಹೇಗೆ ಪರಮಾನಂದದಿಂದ ಮಲಗಿದವನೋ ಅದೇ ರೀತಿಯಾಗಿ ನಮ್ಮ ಪುಣ್ಯಪುಂಜಲಬ್ಧಮೂರ್ತಿಯಾದ ಭರತ ಚಕ್ರಾಧೀಶ್ವರನು, ಸುಂದರವಾಗಿ ಸಜ್ಜುಗೊಳಿಸಲ್ಪಟ್ಟಿದ್ದ ಹೂವಿನ ಹಾರಗಳಿಂದ ಅಲಂಕೃತವಾದ, ಚಿತ್ರವಿಚಿತ್ರವಾಗಿ ಅಲಂಕೃತವಾಗಿದ್ದ, ಮಂಜಿನಂತೆ ಬಿಳುಪಾಗಿದ್ದ, ಹೂವಿನ ಹಾಸಿಗೆಯಲ್ಲಿ ಸುಖವಾಗಿ ಮಲಗಿಕೊಂಡು ಆ ರಾತ್ರಿಯನ್ನು ಕಳೆದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದ ಯುದ್ಧಪ್ರಸಂಗವರ್ಣನೆಯೆಂಬ ಹೆಸರಿನ
ಇನ್ನೂರೊಂಭತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದಶೋತ್ತರದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಆಹ್ವಾನದುಂದುಭಿಂ ಶ್ರುತ್ವಾ ಶೈಲೂಷತನಯಾಸ್ತತಃ ।
ಆಸೇದುಃ ಪಾರ್ಥಿವಂ ಸರ್ವೇ ಶೈಲೂಷಂ ತಂ ಸಮಾಗತಾಃ ॥ ೧ ॥

ನಮುಚಿಃ ಕಾಮಪಾಲಶ್ಚ ಗವೇಷಣಸುದರ್ಶನೌ ।
ವೀರಬಾಹುಃ ಸುಬಾಹುಶ್ಚ ವಾಯುವೇಗಸುವರ್ಚಸೌ ॥ ೨ ॥

ನಿಕುಂಭಃ ಕುಂಭನಾಮಾ ಚ ಬಲಾಕೋ ಬಲಕಸ್ತಥಾ ।
ಹರಿಕೇಶೋ ಮಹೌಜಾಶ್ಚ ಸೂರ್ಯರಶ್ಮಿಃ ಪ್ರಭಂಕರಃ ॥ ೩ ॥

ವೃಂದಾರಕೋ ಜ್ಯೋತಿಷಿಕೋ ದೃಢಸ್ಯುರಪರಾಜಿತಃ ।
ಕುಮುದಃ ಕುಮುದಾಪೀಡೋ ವಸುನಾಥಃ ಸುಲೋಚನಃ ॥ ೪ ॥

---

### ಇನ್ನೂರ ಹತ್ತನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಯುದ್ಧಕ್ಕೆ ಸಿದ್ಧವಾಗಿರಿ' ಎಂದು ಸೂಚಿಸುತ್ತಿರುವ ಆಹ್ವಾನ ದುಂದುಭಿಧ್ವನಿಯನ್ನು ಕೇಳಿದೊಡನೆಯೇ ಶೈಲೂಷ ಗಂಧರ್ವನ ಮಕ್ಕಳೆಲ್ಲರೂ ತಮ್ಮ ತಂದೆಯಾದ ಶೈಲೂಷನ ಸಮೀಪಕ್ಕೆ ಬಂದು ನೇರಿದರು

೨-೭. ಆ ಶೈಲೂಷನ ಸಮೀಪಕ್ಕೆ ಬಂದ ಅವನ ಮಕ್ಕಳುಗಳ ಹೆಸರುಗಳೇ ನೆಂದರೆ —ನಮುಚಿ, ಕಾಮಪಾಲ, ಗವೇಷಣ, ಸುದರ್ಶನ, ವೀರಬಾಹು,

ಚಂದ್ರಾಪೀಡೋ ಗದೀ ಮೌಲೀ ಕಿನ್ನರೋಽಜಗರೋ ರುಹಃ ।
ಕೇಸರೀ ವರವಾಣಶ್ಚ ಭಾನುರಾಗಾವಹೋ ರಯಿಃ ॥ ೫ ॥

ಏಕಲವ್ಯೋ ವಿಶಾಲಶ್ಚ ಕಲವಿಂಕಃ ಕಲಾಪ್ರಿಯಃ ।
ಭೀಮನಾದೋ ಮಹಾನಾದೋ ವಾಸುಕಿಃ ವನಸೋ ಗದಃ ॥ ೬ ॥

ಚಂದ್ರವರ್ಮಾ ಮಹಾವರ್ಮಾ ವಸುಷೇಣೋಽಗ್ರಚಾರಕಃ
ಏತೇ ಚಾನ್ಯೇ ಚ ಗಂಧರ್ವಾಃ ಶೈಲೂಷಸ್ಯ ಸುತಾಃ ಪ್ರಭೋಃ ॥ ೭ ॥

ದಿವ್ಯಮಾಲ್ಯಾಂಬರಧರಾಃ ದಿವ್ಯಚಂದನಭೂಷಿತಾಃ ।
ಆಸನೇಷು ಮಹಾರ್ಹೇಷು ಸಭಾಯಾಂ ವಿವಿಶುಸ್ತದಾ ॥ ೮ ॥

ಶೈಲೂಷಸ್ಯ ಸುತೈರ್ಗುಪ್ತಾ ಸಭಾ ಸಾ ರತ್ನಚಿತ್ರಿತಾ ।
ರರಾಜ ತಾರಕಾ ಚಿತ್ರಾ ನಿಶೇವ ನೃಪ ಶಾರದೀ ॥ ೯ ॥

---

ಸುಬಾಹು, ವಾಯುವೇಗ, ಸುವರ್ಚಸ, ನಿಕುಂಭ, ಕುಂಭ, ಬಲಾಕ, ಬಲಕ, ಹರಿಕೇಶ, ಮಹೌಜ, ಸೂರ್ಯರಶ್ಮಿ, ಪ್ರಭಂಕರ, ಬೃಂದಾರಕ, ಜ್ಯೋತಿಷಕ, ದೃಢಧನ್ವ, ಅಪರಾಜಿತ, ಕುಮುದ, ಕುಮುದಾಪೀಡ, ವಸುನಾಥ, ಸುಲೋಚನ, ಚಂದ್ರಾಪೀಡ, ಗದೀ, ಮೌಳೀ, ಕಿನ್ನರ, ಅಜಗರ, ರುಹ, ಕೇಸರೀ, ವರವಾಣ, ಭಾನು, ರಾಗಾವಹ ರಯಿ, ಏಕಲವ್ಯ, ವಿಶಾಲ, ಕಲವಿಂಕ, ಕಲಾಪ್ರಿಯ, ಭೀಮನಾದ, ಮಹಾನಾದ, ವಾಸುಕಿ, ವನಸ, ಗದ, ಚಂದ್ರವರ್ಮ, ಮಹಾವರ್ಮ, ವಸುಷೇಣ, ಅಗ್ರಚಾರಕ ಇನ್ನೂ ಹೀಗೇ ಎಷ್ಟೋ ಮಂದಿ ಗಂಧರ್ವ ರಾಜಕುಮಾರರುಗಳು ಆ ಸಭೆಯಲ್ಲಿ ತಂಡೋಪತಂಡವಾಗಿ ಬಂದು ಸೇರಿದರು.

೮-೯ ಅವರೆಲ್ಲರೂ ಕೊರಳುಗಳಲ್ಲಿ ದಿವ್ಯಪುಷ್ಪಹಾರಗಳನ್ನು ಧರಿಸಿದ್ದರು ದಿವ್ಯಪರಿಮಳ ಗಂಧದಿಂದ ಲೇಪಿತರಾಗಿದ್ದರು. ಆ ಸಭೆಯಲ್ಲಿ ಹಾಕಿದ್ದ ಅಮೌಲ್ಯವಾದ ಆಸನಗಳಲ್ಲಿ ಆ ರಾಜಕುಮಾರರೆಲ್ಲರೂ ಸುಖಾಸೀನರಾಗಿ ಕುಳಿತರು ರಹಸ್ಯವಾದ ಶೈಲೂಷರಾಜ ಸಭೆಯು ರತ್ನದ ರಂಗವಲ್ಲಿಗಳಿಂದ ವಿಚಿತ್ರವಾಗಿ ಅಲಂಕೃತವಾಗಿದ್ದಿತು. ಶರತ್ಕಾಲದ ರಾತ್ರಿಯಲ್ಲಿ ನಕ್ಷತ್ರಗಳು ಶುಭ್ರವಾದ ಆಕಾಶದಲ್ಲಿ ಮಿನುಮಿನುಗುವಂತೆ ಆ ರಾಜಪುತ್ರರೂಪ ನಕ್ಷತ್ರಗಳು ಆ ಸಭೆಯಲ್ಲಿ ಹೊಳೆಯುತ್ತಿದ್ದುವು

ತೇಷಾಂ ಸಮುಪವಿಷ್ಟಾನಾಂ ಶೈಲೂಷಸ್ತಾನಥಾಬ್ರವೀತ್ ।
ಗಾರ್ಗ್ಯಸ್ಯ ವಚನಂ ಸರ್ವಮನುಮಾನಂ ತಥಾ ಸ್ವಕಂ ॥ ೧೦ ॥

ತೇಽಭಿಯೋಗಂ ತದಾ ಶ್ರುತ್ವಾ ಮಾನುಷಾನ್ಮನುಜೇಶ್ವರ ।
ಚಕ್ರುರ್ನಾನಾವಿಧಾಶ್ಚೇಷ್ಟಾ ಮನ್ಯುನಾ ಕ್ರೋಧಚೇತಸಃ ॥ ೧೧ ॥

ಗಂಧರ್ವರಾಜಪುತ್ರಾಸ್ತೇ ಕ್ರೋಧಾದಶ್ರುಪ್ರವರ್ಷಿಣಃ ।
ರೇಜುರ್ಯುಗಾಂತಮೇಘಾಭಾ ಅಚಿರಾಭಾಸಧೃಗ್ದೃಶಾ ॥ ೧೨ ॥

ಬಭಾರ ನಮುಚಿರ್ವಕ್ತ್ರಂ ಕ್ರೋಧರಾಗಾನುರಂಜಿತಂ ।
ದಿಕ್ಸ್ವಿಸ್ಯೇವ ದಿಶಾದಾಹಂ ಮಹಾಸಂಗ್ರಾಮಸೂಚಕಂ ॥ ೧೪ ॥

ಕಾಮಪಾಲಲಲಾಟಸ್ಥಾ ತ್ರಿಶಾಖಾ ಭ್ರುಕುಟೀ ಬಭೌ ।
ತ್ರಿಭಿಃ ಪ್ರಸಾತ್ರೈರ್ಗಂಗೇವ ನಿಪತಂತೀ ಹಿಮಾಚಲಂ ॥ ೧೪ ॥

---

೧೦. ಅವರೆಲ್ಲರೂ ಕುಳಿತುಕೊಂಡ ಬಳಿಕ ಶೈಲೂಷನು ಅವರೆಲ್ಲರನ್ನೂ ನಿರ್ದೇಶಿಸಿ ಹೇಳಿದುದೇನೆಂದರೆ —ಎಲೈ ಕುಮಾರಕರುಗಳಿರಾ! ಗಾರ್ಗ್ಯನು ಬಂದು ಹೇಳಿದ ಮಾತನ್ನು ನೀವೆಲ್ಲರೂ ಕೇಳಿಯೇ ಇರುವಿರಷ್ಟೆ? ಅವನು ಮನುಷ್ಯರಾಜನೊಬ್ಬನಿಂದ ಅಭಿಯೋಗವನ್ನು ತಂದಿದ್ದನು ಅದನ್ನು ಕೇಳಿದಾರಭ್ಯ ನನಗೇಕೋ ಸಂದೇಹವುಂಟಾಗುತ್ತಿದೆಯೆನ್ನಲು,

೧೧ ೧೪ ಶೈಲೂಷನ ಮಕ್ಕಳು ಮಹತ್ತರವಾದ ಕೋಪವುಳ್ಳವರಾಗಿ ನಾನಾ ವಿಧವಾದ ಕೋಪಚೇಷ್ಟೆಗಳಂ ಮಾಡುವುದಕ್ಕಾರಂಭಿಸಿದರು ಉಕ್ಕಿಯುಕ್ಕಿ ಬರುವ ಕೋಪವನ್ನು ತಡೆಯಲಾರದೆ ಆ ಗಂಧರ್ವರಾಜಕುಮಾರರ ಕಣ್ಣುಗಳಿಂದ ಅಶ್ರು ಪ್ರವಾಹವೇ ಹರಿಯಲಾರಂಭಿಸಿತು ಆಗ ಅವರ ಮುಖಗಳನ್ನು ನೋಡಿದರೆ ಪ್ರಳಯಕಾಲದ ಮೇಘಗಳಿಂದಾವೃತವಾದ ಆಕಾಶವೋ ಎಂಬಂತೆ ಕಾಣುತ್ತಲಿದ್ದಿತು ನಮೂಚಿಯ ಮುಖವು ಕೋಪವೆಂಬ ರಾಗದಿಂದ ಕೆಂಪಾಗಿ ಮಹಾಸಂಗ್ರಾಮಸೂಚನೆಯನ್ನುಂಟುಮಾಡುತ್ತಿದ್ದಿತು. ಕಾಮಪಾಲನ ಹಣೆಯ ಬಳಿ ಇದ್ದ ಹುಬ್ಬುಗಳು ಗಂಟಿಕ್ಕಿದುದನ್ನು ನೋಡಿದರೆ ಹಿಮಾಚಲದಿಂದ ಗಂಗೆಯು ಮೂರು ಭಾಗವಾಗಿ ಕೆಳಗಿಳಿದಂತೆ ತೋರುತ್ತಲಿದ್ದಿತು.

ಕೃಷ್ಣೇ ಸ ಶುಕ್ಲಪರ್ಯಂತೇ ಕ್ರೋಧರಾಗಾನುರಂಜಿತೇ ।
ಕುಮುದಾಪೀಡನೇತ್ರೇ ತು ಸಂಧ್ಯಾ ತಾಮ್ರೇ ಬಭೂವತುಃ ॥ ೧೫ ॥

ಕ್ರೋಧಾಕ್ರಾಂತೇನ ವಪುಷಾ ಕುಮುದಃ ಕುಮುದಪ್ರಭಃ ।
ರಕ್ತೋತ್ಪಲನಿಭಾಕಾರಃ ಕ್ಷಣೇನ ಸಮುಪದ್ಯತ ॥ ೧೬ ॥

ಚಂದ್ರಾಪೀಡಮುಖಂ ಚಾರು ಕ್ರೋಧಧೂಮ್ರಾನುಕಾರಿತಂ ।
ಬಭಾರ ರೂಪಂ ತನ್ವಭ್ರಸಂಭೃತಸ್ಯ ನಿಶಾಭೃತಃ ॥ ೧೭ ॥

ಕ್ರೋಧನಿಶ್ವಾಸಧೂಮೇನ ಭಾನೋರ್ವಕ್ತ್ರಮಥಾವೃತಂ ।
ಬಭೂವ ಭಾನೋಃ ಸದೃಶಮುಪರಾಗೇ ಯದೂತ್ತಮ ॥ ೧೮ ॥

ಕರನಿಷ್ಪೇಷಸಂಜಾತಧೂಮಧೂಮ್ರಮುಖಾಂಗಕಃ ।
ಅನ್ವರ್ಥನಾಮತಾಮಾಪ ತಸ್ಮಿನ್ಕಾಲೇ ಸುದರ್ಶನಃ ॥ ೧೯ ॥

ಗವೇಷಣಸ್ತುವೇಗೇನ ವಹ್ನಿಗರ್ಭೋಜ್ಜ್ವಲಾತ್ಮನಾ ।
ತಾರಾಭಿವರ್ಷಣೇನೈವ ಸೂಚಿತೋ ಭೂಪತಿಕ್ಷಯಃ ॥ ೨೦ ॥

---

೧೫-೧೬ ಕುಸುಮಾಪೀಡನ ಕೋಪದಿಂದ ಕೆಂಪಾದ ಕಣ್ಣುಗಳು ಅರುಣೋದಯ ಕಾಲದ ಆಕಾಶವನ್ನು ನೆನಪಿಗೆ ತರುತ್ತಿದ್ದಿತು ಕನ್ನೈದಿಲೆ ಹೂವಿನಂತ ಕಾಂತಿಯುಳ್ಳ ಕುಮುದನು ಕ್ರೋಧಾಕ್ರಾಂತವಾದ ಶರೀರದಿಂದ ಕೂಡಿದವನಾಗಿ ರಕ್ತೋತ್ಪಲಪುಷ್ಪ (ಕೆಂದಾವರೆ ಹೂ) ದಂತೆ ಒಂದು ಕ್ಷಣಕಾಲದಲ್ಲಿ ಕೆಂಪಾಗಿ ಹೋದನು

೧೭. ಬಹು ಕೋಮಲವಾಗಿದ್ದ ಚಂದ್ರಾಪೀಡನ ಮುಖವು ಕೋಪವೆಂಬ ಹೊಗೆಯಿಂದ ಕೂಡಿದುದಾಗಿ ಸಾಯಂಕಾಲದ ಸಮಯದಲ್ಲಿ ನಣ್ಣ ಸಣ್ಣ ಕಪ್ಪು ಮೋಡಗಳಿಂದ ಕೂಡಿದ ಆಕಾಶವನ್ನು ಹೋಲುತ್ತಿತ್ತು.

೧೮-೧೯. ಭಾನುವಿನ ಮುಖವು ಕ್ರೋಧವೆಂಬ ನಿಶ್ವಾಸಧೂಮದಿಂದ ಕೂಡಿದುದಾಗಿ ಗ್ರಹಣ ಹಿಡಿದ ಸೂರ್ಯಮಂಡಲದಂತೆ ಕಾಣುತ್ತಿತ್ತು ಧೂಮ್ರನ ಮುಖವು ಅವನ ಹೆಸರಿಗೆ ತಕ್ಕಂತೆ ಹೊಗೆಯ ಬಣ್ಣವನ್ನು ಹೊಂದಿ ಕೋಪಭರದಿಂದ ಕಪ್ಪಾಗಿಹೋಯಿತು.

೨೦ ಗವೇಷಣನು ಅಗ್ನಿಗರ್ಭದಂತೆ ಉಜ್ವಲವಾದ ಕೆಂಡವನ್ನು ಕಕ್ಕುತ್ತಾ

ವೀರಬಾಹುಭುಜಾಘಾತರತ್ನನಿಷ್ಪೇಷರೇಣುನಾ ।
ವಿಜೃಂಭಿತಮುಖಾಸ್ಥಾನೇ ಕ್ರೋಧಮೇವ ವಪುಷ್ಮತಾ ॥ ೨೧ ॥

ಸುಬಾಹುಬಾಹುನಿಷ್ಪೇಷೋ ಬಭೂವಾಶನಿನಿಸ್ವನಃ ।
ನಿರ್ಘಾತ ಇವ ಗಂಭೀರೋ ರಾಜ್ಞಾಂ ನಿಧನಸೂಚಕಃ ॥ ೨೨ ॥

ವಾಯುವೇಗಮಹಾವೇಗಚರಣೋಲ್ಲಿಖಿತಾ ಕ್ಷಿತಿಃ ।
ಚಿದದ್ರೇ ಪೃಥಿವೀಪಾಲ ವಿನಾಶಭಯಶಂಸಿನೀ ॥ ೨೩ ॥

ಆಯಾಸಜಾತಸಂಸ್ವೇದಪುಲಕೋದ್ಗಮಭೂಷಿತಂ ।
ಸುವರ್ಚಾ ಧಾರಯಾಮಾಸ ಲಲಾಟತಟಪಟ್ಟಕಂ ॥ ೨೪ ॥

---

ಇವನ ಕೆಂಪಾದ ಕೆಂಡಗಣ್ಣುಗಳು ಭೂಪತಿಗಳೆಂಬ ನಕ್ಷತ್ರಗಳನ್ನು ಉದುರಿಸುತ್ತಲಿವೆಯೋ ಎಂಬಂತೆ ತೋರುತ್ತಿತ್ತು

೨೧ ವೀರಬಾಹುವು ಬಹು ಕ್ರೋಧಪರಿವೃತನಾಗಿ ತನ್ನ ಭುಜಗಳನ್ನು ಸ್ಫಾಲನೆ (ತಟ್ಟಲು) ಮಾಡಲು ಅವನ ಭುಜಗಳಲ್ಲಿದ್ದ ಆ ಭುಜಪುರಿ (ಬಾಹುಪುರಿ) ಗಳ ರತ್ನಗಳು ಹುಡಿ ಹುಡಿಯಾಗಿ ಕೆಳಗೆ ಬಿದ್ದು, ಕೋಪವೇ ಶರೀರವನ್ನು ಧರಿಸಿ ನಿಂತಿದಯೋ ಎಂಬಂತೆ ಕಾಣುತ್ತಿತ್ತು

೨೨ ಸುಬಾಹುವು ಕೋಪದಿಂದ ಕೈಕೈ ತಿಕ್ಕಿ ಹೊಡೆದು ಮಸೆಯಲು ಅದರಿಂದುಂಟಾದ ಸದ್ದು ಸಿಡಿಲುಬಡಿದಂತೆ ಭಯಂಕರವಾಗಿ ಪರಿಣಮಿಸಿತು. ಮತ್ತು ಈ ಸಿಡಿಲಿನ ಬಡಿತದಿಂದ ಶತ್ರುರಾಜರೆಲ್ಲಿ ಸುಟ್ಟುಹೋಗುವರೋ ಎಂಬುವಂತಿತ್ತು

೨೩ ವಾಯುವೇಗದಿಂದಲೂ, ಮಹಾವೇಗದಿಂದಲೂ ತಮ್ಮ ತಮ್ಮ ಪಾದಗಳನ್ನು ಭೂಮಿಯ ಮೇಲೆ ಸಂಘಟ್ಟಿಸೋಣ (ಒದೆಯೋಣ) ದರಿಂದುಂಟಾದ ರಭಸಕ್ಕೆ ಭೂಮಿಯು ವಿನಾಶಭಯವನ್ನು ಸೂಚನೆಮಾಡುತ್ತಾ ಕಂಪಿಸತೊಡಗಿತು

೨೪. ಸುವರ್ಚನ ಹಣೆಯು ಕೋಪದಿಂದುಂಟಾದ ಆಯಾಸದಿಂ ವಿಪರೀತವಾಗಿ ಬೆವರಿ ನೀರು ತೊಟ್ಟಿಕ್ಕುತ್ತಿರಲು ಅದನ್ನು ರೇಶ್ಮೆ ವಸ್ತ್ರಗಳಿಂದ ಒರಸಿಕೊಂಡನು.

**ಪ್ರಸ್ವಿನ್ನಗಾತ್ರಸಂಕ್ರಾಂತಕಾಂಚನಸ್ತಂಭಪಿಂಗಲಃ ।**
**ಬಭೂವ ಕುಂಭನಾಭಸ್ತು ಕ್ರೋಧೋ ವಿಗ್ರಹವಾನಿವ ॥ ೨೫ ॥**

**ಸುವಿನಿಃಸೃತರೋಮಾಗ್ನಿ ಜ್ವಾಲಾಕೇಸರಮಾಲಿನಾ ।**
**ನೃಸಿಂಹವಪುಷಶ್ಚಕ್ರೇ ರವಿಣಾನುಕೃತಿರ್ಹರೇಃ ॥ ೨೬ ॥**

**ಪ್ರಸ್ವಿನ್ನಗಾತ್ರಸಂಕ್ರಾಂತ ಸರ್ವಗಂಧರ್ವಮಂಡಲಃ ।**
**ವಿಶ್ವರೂಪಧರಂ ಮೌಲಃ ಪ್ರಜಹಾಸ ಜನಾರ್ದನಂ ॥ ೨೭ ॥**

**ಗಂಧರ್ವರಾಜಪುತ್ರಾಸ್ತೇ ಮನ್ಯುನಾ ಹೃತಚೇತಸಃ ।**
**ತದಾ ಬಭೂವುರ್ಭೂಪಾಲ ಸರ್ವ ಏವ ವಿಶೇಷತಃ ॥ ೨೮ ॥**

---

೨೫-೨೬ ಕ್ರೋಧಾತಿಶಯದಿಂದ ಮೈಯೆಲ್ಲಾ ಬೆವರಿ ನೀರಾಗಿ ಹರಿಯುತ್ತ ಲಿದ್ದ ಕುಂಭನಾಭನು ಕ್ರೋಧವೇ ಮೂರ್ತಿಮತ್ತಾಗಿ ಬಂದು ನಿಂತಂತೆ ಕಾಣಿಸಿದನು ಹರಿಯ ದೇಹವು ಕ್ರೋಧ ನಿಶ್ವಾಸದಿಂದುಂಟಾದ ಜ್ವಾಲಾಕೇಸರದಿಂದೊಡಗೂಡಿದ್ದು ದನ್ನು ನೋಡಿದರೆ ನರಸಿಂಹಾವತಾರಮಾಡಿದ ಮಹಾವಿಷ್ಣುವಿನ ಶರೀರವು ಸ್ಮರಣೆಗ ಒರುತ್ತಿತ್ತು

೨೭ ವಿಪರೀತ ಕ್ರೋಧದಿಂದ ಕೂಡಿದ ಮೌಲನನ್ನು ನೋಡಿದರೆ, ಬೆವರು ಹನಿಗಳಿಂದ ಕೂಡಿದ ಅವನ ದೇಹವನ್ನಾಕ್ರಮಿಸಿದ ಸಕಲ ಗಂಧರ್ವ ನಿವಹವೂ ವಿಶ್ವರೂಪಧಾರಿಯಾದ ಜನಾರ್ದನನನ್ನು ಹಾಸ್ಯಮಾಡುವಂತೆ ತೋರುತ್ತಿತ್ತು

೨೮. ಈ ಮೇರೆ ಕೋಪದಿಂದ ಕುದಿಯುತ್ತಾ ಬುದ್ಧಿಯಿಲ್ಲದೆ ಹರಟು ತ್ತಿದ್ದ ಆ ಗಂಧರ್ವ ಕುಮಾರಮಂಡಲಿಯು ಆ ಸಭೆಯನ್ನೆಲ್ಲಾ ವ್ಯಾಪಿಸಿ ಕೊಂಡಿತ್ತು.

ಇತ್ಥಂ ಸುತಾನಾಂ ಪ್ರಸಮೀಕ್ಷ್ಯ ಕೋಪಂ
ಸಂಸ್ಮೃತ್ಯ ವಾಕ್ಯಾನಿ ಪುರೋಹಿತಸ್ಯ ।
ಜಗಾಮ ಮನ್ಯುಂ ಸುತರಾಂ ಸ ರಾಜಾ
ಸಂದಷ್ಟದಂತಚ್ಛದಭೀಮವಕ್ತ್ರಃ ॥ ೨೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಧರ್ವಸಭಾಕ್ಷೋಭವರ್ಣನೋನಾಮ
ದಶೋತ್ತರ ದ್ವಿಶತತಮೋಽಧ್ಯಾಯಃ.



೨೯ ಈ ಪ್ರಕಾರವಾಗಿ ತನ್ನ ಮಕ್ಕಳೆಲ್ಲರೂ ಕೋಪಾಟೋಪದಿಂದ ಕುಣಿಯುತ್ತಿದ್ದುದನ್ನು ನೋಡಿ ಆ ಗಂಧರ್ವನು, ಪುರೋಹಿತನಾದ ಗಾರ್ಗ್ಯನ ಬಾಯಿಯಿಂದ ಹೊರಟ ಮಾತನ್ನು ಸ್ಮರಿಸಿ ಸ್ಮರಿಸಿ, ತಾನೂ ಸಹ ಕೋಪ ಪರವಶನಾಗಿ ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ, ಭಯಂಕರವಾಗಿ ಕಾಣಿಸಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಗಾಂಧರ್ವಸಭಾಕ್ಷೋಭ ವರ್ಣನೆಯೆಂಬ
ಹೆಸರಿನ ಇನ್ನೂರ ಹತ್ತನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕಾದಶೋತ್ತರದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ದೃಷ್ಟ್ವಾ ಗಂಧರ್ವರಾಜಸ್ಯ ಕ್ರೋಧೇನಾಕುಲಿತಂ ಮನಃ ।
ತಮೂಚುರ್ನೃಪ ಗಂಧರ್ವಾಃ ಸ್ವಬಾಹುಬಲದರ್ಪಿತಾಃ ॥ ೧ ॥

॥ ಅಪರಾಜಿತ ಉವಾಚ ॥

ಸರ್ವಮಾಲಭತೇ ರಾಜನ್ನಶೋಕಃ ಶರಬಾಹುಷು ।
ತಸ್ಮಾಚ್ಛೌರ್ಯೇಣ ನಿಧನಂ ರಘೂಣಾಂ ಮಮ ರೋಚತೇ ॥ ೨ ॥

ಇನ್ನೂರ ಹನ್ನೊಂದನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಗಂಧರ್ವರಾಜನಾದ ಶೈಲೂಷನ ಮನಸ್ಸು ಮಹತ್ತರವಾದ ಕೋಪದಿಂದ ವ್ಯಾಕುಲವಾಗಿರುವುದನ್ನು ನೋಡಿ, ಭುಜ ಬಲ ಪರಾಕ್ರಮಗಳಿಂದ ಕೊಬ್ಬಿದ ಗಂಧರ್ವರುಗಳು, ಆ ರಾಜನನ್ನು ಕುರಿತು ಯಾರು ಯಾರು ಏನೇನು ಹೇಳಿದರೆಂಬುದನ್ನು ಮುಂದೆ ಬರೆಯುವೆವು.

೨ ಅಪರಾಜಿತನು ಹೇಳುತ್ತಾನೆ —ರಾಜ! ಆಗಬೇಕಾದುದು ಆಗಿಯೇ ತೀರುತ್ತದೆ. ಇದಕ್ಕಾಗಿ ಪರಾಕ್ರಮಿಗಳಾದ ಶೂರರು ವ್ಯಥೆಪಡಬಾರದು ಈಗ ನಾವು ನಮ್ಮ ಶೌರ್ಯವನ್ನು ತೋರಿಸಿ ರಘು ವಂಶೋತ್ಪನ್ನರಾದ ರಾಜರುಗಳನ್ನು ಸಂಹರಿಸುವುದು ಯುಕ್ತವೆಂದು ನನಗೆ ತೋರುತ್ತದೆ

॥ ನಿಕುಂಭ ಉವಾಚ ॥

ಯೋಽಯಂ ಮನ್ಯುಃ ಸಮುದ್ಭೂತಃ ಕಾಕುತ್ಸ್ಥಾನ್ಪ್ರತಿ ಮೇ ಪ್ರಭೋ ।
ಅವಿನಾಶಿ ಜಗತ್ಕೃತ್ಸ್ನಂ ವಿನಾಶಂ ಸಮುಪೈಷ್ಯತಿ ॥ ೩ ॥

॥ ಕಿನ್ನರ ಉವಾಚ ॥

ಯಾ ಲಕ್ಷ್ಮೀರನುಲಿಪ್ತಾಂಗೀ ವೈರಿಶೋಣಿತಕುಂಕುಮೈಃ ।
ಕಾಂತ್ಯಾಪಿ ಸರಸಾಂ ಪ್ರೀತಿಂ ನ ಸಾ ಧತ್ತೇ ಮನಸ್ವಿನಾಂ ॥ ೪ ॥

॥ ವಸುನಾಭ ಉವಾಚ ॥

ಕೃಪಾಣಧಾರವಿಧ್ವಸ್ತಶತ್ರುಸಂಘಸಮುದ್ಭವಾ ।
ನ ಯಾ ಶ್ರೀಃ ಕಿಂ ತಯಾ ರಾಜನ್ತಯಾಸತ್ತ್ವವತಾಂ ನೃಣಾಂ ॥ ೫ ॥

॥ ಅಜಗರ ಉವಾಚ ॥

ಅಜಿತಾರಿಗಣೋಪಾಂತಸಂಪದೋ ಭೂಷಣಕ್ರಿಯಾ ।
ವಿಪದ್ವರೀಯಸೀ ತಾಭಿರ್ಯಾ ನ ಸಂಪದ್ವಿಭೂಷಣಾ ॥ ೬ ॥

---

೩ ನಿಕುಂಭನು ಹೇಳುತ್ತಾನೆ — ಈ ಕಾಕುತ್ಸ್ಥರಾಜರಮೇಲೆ ನನಗೆ ಉತ್ಪನ್ನವಾಗಿರುವ ಕೋಪವು, ಸುಖವಾಗಿ ಚ್ಯುತಿಯಿಲ್ಲದೆ ಇದ್ದ ಸಮಸ್ತ ಪ್ರಪಂಚವೂ ನಾಶದ ದಾರಿಯನ್ನು ನೋಡುತ್ತಲಿದೆಯೆಂದು ಸೂಚಿಸುವುದಕ್ಕಾಗಿ ಉತ್ಪನ್ನವಾಗಿದೆಯೇ ಹೊರ್ತು ಅನ್ಯಥಾ ಇಲ್ಲ.

೪. ಕಿನ್ನರನೆಂಬುವನು ಹೇಳುತ್ತಾನೆ —ಮಹಾರಾಜ! ಕೇಳು ಶತ್ರುಗಳ ರಕ್ತವೆಂಬ ಕುಂಕುಮಗಳಿಂದ ಯಾವ ಲಕ್ಷ್ಮಿಯು ಅನುಲಿಪ್ತವಾದ (ಬಳಿದ) ಅವಯವವುಳ್ಳವಳಾಗಿರುವಳೋ, ಆ ಲಕ್ಷ್ಮಿಯು ಮನಸ್ವೀ ನಡೆಯುತ್ತಿರುವ ವಿಷಯದಲ್ಲಿ ಅವರು ಎಷ್ಟೇ ಪ್ರಿಯರಾದಾಗ್ಯೂ ಅವರ ವಿಷಯದಲ್ಲಿ ಪ್ರೇಮವನ್ನು ತೋರಿಸುತ್ತಿರಲಿಲ್ಲ

೫ ವಸುನಾಭನು ಹೇಳುತಾನೆ —ಕತ್ತಿಯ ಅಲಗುಗಳಿಂದ ಕತ್ತರಿಸಲ್ಪಟ್ಟ ಶತ್ರುಸಂಘದಿಂದುತ್ಪನ್ನವಾದ ಯಾವ ಕೀರ್ತಿಯೆಂಬುವುದುಂಟೋ ಬಲಶಾಲಿಗಳಾದ ವೀರರಿಗೆ ಆ ಕೀರ್ತಿಯಿಂದಾವ ಪ್ರಯೋಜನವೂ ಇಲ್ಲ.

೬ ಅಜಗರನೆಂಬುವನು ಹೇಳುತ್ತಾನೆ.— ಸೋತುಹೋದ ಶತ್ರುಗಣದ ಬಳಿ ಸೇರಿರುವ ಸಂಪತ್ತೆಂಬುವುದು ಸಂಪತ್ತೆನ್ನಿಸಿಕೊಳ್ಳುವುದಿಲ್ಲ ಅವರುಗಳಿಂದ ಆರ್ಜಿತವಾದ ಸಂಪತ್ತು ಅವರಿಗೆ ಭೂಷಣವಾಗಿರುವುದರ ಬದಲು ಅದಕ್ಕೆ ವಿಪರೀತವಾದ ವಿಪತ್ತನ್ನೇ ತಂದೊದ್ಗುತ್ತದ

॥ ರುಹ ಉವಾಚ ॥

ಶೋಭಂತೇ ಕರ್ಕಶಾಃ ಶೂರಾಃ ಸ್ತನಾ ಇವ ಸಮುನ್ನತಾಃ ।
ಶೂರಾಣಾಂ ಚ ಸ್ತನಾನಾಂ ಚ ಪರಾವಜ್ಞಾಕರೀ ರತಿಃ ॥ ೭ ॥

॥ ಕೇಶ ಉವಾಚ ॥

ತೇಜಸ್ವಿನಾಮಭ್ಯುದಯಂ ವಂದನೀಯಂ ಜಗತ್ತ್ರಯೇ ।
ಯಥಾ ಭಾಸ್ಕರಮುದ್ಯಂತಂ ಜನಃ ಸರ್ವೋಽಭಿನಂದತಿ ॥ ೮ ॥

॥ ವರವಾರಣ ಉವಾಚ ॥

ಸತ್ತ್ವಾಧಿಕಸ್ಯ ಸಿಂಹಸ್ಯ ಲೀಲೋನ್ಮಥಿತಪಾದಪಾಃ ।
ನ ಶಕ್ತಾಃ ಪುರತಃ ಸ್ಥಾತುಂ ಶೈಲಕೂಟೋಪಮಾ ಗಜಾಃ ॥ ೯ ॥

---

೭ ರುಹನೆಂಬುವನು ಹೇಳುತ್ತಾನೆ —ಓ! ಮಹಾರಾಜ! ಕೇಳು ಶೂರರೂ, ಸ್ತ್ರೀಯರ ಸ್ತನಗಳೂ ತಾವು ಕಠಿನವಾದವರೆಂದೂ ಉನ್ನತಿಹೊಂದಿರುವವರೆಂದೂ ತಿಳಿದು ಮೆರೆಯುತ್ತಿರುತ್ತಾರೆ ಆದರೆ ಆ ಶೂರರೂ, ಸ್ತನಗಳೂ ಯುದ್ಧ (ರತಿ) ಕಾಲದಲ್ಲಿ ಶತ್ರು (ಪತಿ) ಗಳಿಂದ ಚೆನ್ನಾಗಿ ಮರ್ದಿಸಲ್ಪಡುತ್ತಾರೆ (ಅಂದರೆ ಪರರಾಜರು ಎಷ್ಟೇ ವೀರರಾದಾಗ್ಯೂ ನಮ್ಮಿಂದ ಜಯಿಸಲ್ಪಡುವರೆಂದರ್ಥ)

೮ ಕೇಶನೆಂಬ ಗಂಧರ್ವನು ಹೇಳುತ್ತಾನೆ —ತೇಜಸ್ವಿಗಳಾದ ಜನರು ಅಭಿವೃದ್ಧಿ ಹೊಂದುವುದರಿಂದ ಮೂರು ಲೋಕಗಳಲ್ಲೂ ವಂದನೀಯರಾಗುತ್ತಾರೆ. ಅದು ಹೇಗೆಂದರೆ —ಉದಯಿಸುತ್ತಿರುವ ಸೂರ್ಯನನ್ನು ನೋಡಿ ಸಕಲ ಜನರೂ ಸಂತೋಷಪಡುವಂತೆಯೇ ತೇಜಸ್ವಿಗಳೂ ವಂದನೀಯರು

೯. ಪರವಾರಣನೆಂಬುವನು ಹೇಳುತ್ತಾನೆ - ಮಹಾ ಮಹಾ ಪರ್ವತದಂತೆ ಬೆಳೆದಿರುವ ಆನೆಗಳು ಎಂತಹ ದೊಡ್ಡ ವೃಕ್ಷವನ್ನಾದರೂ ಲೀಲೆಯಿಂದ ಉರುಳಿಸಬಲ್ಲುವು ಆದರೆ ಅಂತಹ ಮಹಾಗಜಗಳು ಮಹಾಪರಾಕ್ರಮಶಾಲಿಯಾದ ಸಿಂಹದ ಮುಂದೆ ಒಂದು ನಿಲ್ಲಬಲ್ಲುವೆ?

॥ ಆಭಾವಹ ಉವಾಚ ॥

ನ ಜಾತು ಶಮನಂ ಯಸ್ಯ ತೇಜಸ್ತೇಜಸಿ ತೇಜಸಾಂ ।
ವೃಥಾ ಜಾತೇನ ಕಿಂ ತೇನ ಮಾತುರ್ವಾರ್ಧಕ್ಯಕಾರಿಣಾ ॥ ೧೦ ॥

॥ ಏಕಲವ್ಯ ಉವಾಚ ॥

ನಾಮ್ನಿ ಸಂಕೀರ್ತಿತೇ ಯಸ್ಯ ನ ಭವಂತ್ಯರಯೋ ಭಯಾತ್ ।
ವಿವರ್ಣವದನಚ್ಛಾಯಾಃ ಕಾ ದಯಾ ತಸ್ಯ ಜೀವನೇ ॥ ೧೧ ॥

॥ ವಿಶಾಲ ಉವಾಚ ॥

ಲಕ್ಷ್ಮೀಸಂಗಮಲುಬ್ಧಾನಾಂ ಶೂರಾಣಾಂ ಚ ರಣೋದ್ಭವಾ ।
ಕೀರ್ತಿರ್ಭವತಿ ಸೈವಾಶು ಸಂಯೋಗಕರಣಾ ಸಖೀ ॥ ೧೨ ॥

---

೧೦ ಆಭಾವಹನು ಹೇಳುತ್ತಾನೆ —ಯಾವ ಶೂರನೆಂಬುವನ ಹೀನ ತೇಜಸ್ಸು, ಮಹಾತೇಜಸ್ವಿಯಾದವನ ತೇಜಸ್ಸಿನಿಂದ ಎಂದಾದರೊಂದು ದಿನ ಶಾಂತ ವಾಗಿ ಹೋಗಿ ಬಿಡುವುದೋ, ಅಂಥವನು ಹುಟ್ಟುವುದು, ತಾಯಿಯರ ಯೌವನ ವನ್ನು ಹಾಳುಮಾಡಿ ಅವಳಿಗೆ ಮುಪ್ಪನ್ನು ತರುವುದಕ್ಕೇ ವಿನಹ ಮತ್ತೇತಕ್ಕೂ ಅಲ್ಲ

೧೧ ಏಕಲವ್ಯನೆಂಬುವನು ಹೇಳುತ್ತಾನೆ —ಯಾವನ ಹೆಸರು ಕಿವಿಗೆ ಬಿದ್ದೊಡನೆಯೇ ಅವನ ಶತ್ರುಗಳು ಭಯದಿಂದ ಅಂಜಿಕೊಂಡು ಮುಖ ಬಾಡಿದವ ರಾಗಿ ಮಾಯವಾಗಿ ಬಿಡುವರೋ ಅಂಥವರು ಬದುಕಿರುವುದರಿಂದೇನು ಪ್ರಯೋಜನವೈ?

೧೨ ವಿಶಾಲನೆಂಬುವನು ಹೇಳುತ್ತಾನೆ —ಐಶ್ವರ್ಯವಂತರಾಗಬೇಕೆಂಬ ಆಸೆ ಯುಳ್ಳವರಿಗೆ (ಲಕ್ಷ್ಮೀ ಸಂಗಮದಲ್ಲಿ ಆಶೆಯುಳ್ಳವರಿಗೆ) ಯುದ್ಧರಂಗದಲ್ಲಿ ದೊರಕಿದ ಕೀರ್ತಿಯೆಂಬ ಕಾಮಿನಿಯು ಅವರವರ (ವೀರಲಕ್ಷ್ಮೀ) ಸಂಯೋಗವನ್ನುಂಟು ಮಾಡಲು ಬಹುಬೇಗ ಸಖೀಭಾವವನ್ನು ಹೊಂದುತ್ತಾಳೆ.

ಟಿಪ್ಪಣಿ ಶೈಲೂಷನೇ ಶೂರನೆಂದೂ ಸರರಾಜರನ್ನು ಜಯಿಸಲು ಸಾಕ್ಷರು ಬಹು ಬಲಿಷ್ಠರೆಂದೂ ತಮ್ಮ ತಮ್ಮ ಹಿರಿಮೆಯನ್ನು ಹೇಳಿಕೊಳ್ಳುವ ಮಾತು ಗಳನ್ನು ಹೇಳಿಕೊಂಡು ಶೈಲೂಷನ ಮುಖಸ್ತುತಿಯನ್ನು ಮಾಡಲು ನಾನಾ ವಿಧವಾಗಿ ಬಣ್ಣಿಸಿದ್ದಾರೆ

॥ ಕಲಿಪ್ರಿಯ ಉವಾಚ ॥

ರಿಪುರಕ್ತೈವರಾ ಸಿಕ್ತಾ ರಿಪುಸ್ತ್ರೀನೇತ್ರವಾರಿಣಾ ।
ನ ಯಸ್ಯ ಸಿಂಚಿತಾ ಕೀರ್ತಿಃ ಕಾ ಸ್ಪೃಹಾ ತಸ್ಯ ಜೀವನೇ ॥ ೧೩ ॥

॥ ಭೀಮನಾದ ಉವಾಚ ॥

ತೇಜಸೈವ ಸಮಾಕ್ರಾಂತಸಮಸ್ತಭುವನೋ ರವಿಃ ।
ಕರೋತಿ ಪದವಿನ್ಯಾಸಂ ಸರ್ವೇಷಾಮೇವ ಮೂರ್ಧಸು ॥ ೧೪ ॥

॥ ಮಹಾಧರ್ಮ ಉವಾಚ ॥

ಶತ್ರುಮಸ್ತಕವಿನ್ಯಸ್ತಪದಕ್ರಮವಿಲಾಸಿನೀ ।
ಕವಿದತ್ತಕರಾಲಂಬಾ ಕೀರ್ತಿರ್ಯಾತು ದಿವಂ ತವ ॥ ೧೫ ॥

೧೩ ಕಲಿಪ್ರಿಯನೆಂಬುವನು ಹೇಳುತ್ತಾನೆ —ಶತ್ರುಸ್ತ್ರೀಯರ ಕಣ್ಣೀರುಗಳಿಂದ ಚುಮುಕಿಸಲ್ಪಟ್ಟುದಾಗಿ (ಶುದ್ಧಿಗೊಳಿಸಲ್ಪಟ್ಟ) ರಿಪುರಕ್ತಗಳಿಂದ ಲೇಪಿಸಲ್ಪಟ್ಟ ಕೀರ್ತಿಕಾಮಿನಿಯನ್ನಾವನು ಮಂನುವುದಿಲ್ಲವೋ ಅವನು ಬದುಕಿದ್ದರೂ ವ್ಯರ್ಥ

೧೪. ಭೀಮನಾದನೆಂಬುವನು ಹೇಳುತ್ತಾನೆ —ಸಕಲ ಜಗತ್ತನ್ನೂ ತನ್ನ ತೇಜಸ್ಸಿನಿಂದ ಬೆಳಗಿಸುತ್ತಿರುವ, ಸಕಲ ಪ್ರಪಂಚವನ್ನೂ ಆಕ್ರಮಿಸಿಕೊಂಡಿರುವ ಸೂರ್ಯನು ಸಕಲರ ತಲೆಯ ಮೇಲೆಯೂ ತನ್ನ ಪಾದಗಳನ್ನಿಟ್ಟೇ ಇಡುತ್ತಾನೆ

೧೫ ಮಹಾಧರ್ಮನೆಂಬುವನು ಹೇಳುತ್ತಾನೆ —ಶತ್ರುಗಳ ತಲೆಯ ಮೇಲೆ ತನ್ನ ಕಾಲುಗಳ ಹೆಜ್ಜೆಯನ್ನು ವಿಲಾಸದಿಂದ (ಆಟದಿಂದ) ಇರಿಸಿ ಕವಿಗಳಿಂದ ಕೊಡಲ್ಪಟ್ಟ ಕರಾವಲಂಬನವುಳ್ಳ ನಿನ್ನ ಕೀರ್ತಿಕಾಮಿನಿಯು ಸ್ವರ್ಗದ ಮೇಲೆ ಹತ್ತಿ ಹೋಗುತ್ತಲಿದ್ದಾಳೆ

ಟಿಪ್ಪಣಿ--ಮೇಲೆ ಬರೆಯುತ್ತ ಬಂದಿರುವ ಮುಂದೆ ಬರೆಯುತ್ತಿರುವ ಈ ಚಮತ್ಕಾರವಾದ ಶ್ಲೋಕಗಳಿಗೆಲ್ಲಾ ವಿಧವಿಧವಾಗಿ ಅರ್ಥಮಾಡಬಹುದು ಗೀರ್ವಾಣವಾಣಿಯೆಂಬುವುದು ಚಿನ್ನದ ಸರಿಗೆಯಂತೆ ಬೇಕುಬೇಕಾದಲ್ಲಿ ಎಳೆದು ಚಿತ್ರವಿಚಿತ್ರಾಭರಣವನ್ನು ಮಾಡಲನುಕೂಲಿಸುವಂತೆ, ನವರಸಗಳನ್ನೂ ನಾನಾರ್ಥಗಳುಳ್ಳ ಪದಗಳ ಪ್ರಯೋಗದಿಂದ ಚಿತ್ರವಿಚಿತ್ರವಾದ ಶಬ್ದಾಲಂಕಾರ ಅರ್ಥಾಲಂಕಾರಗಳಿಂದ ರಚಿಸಿ ರಸಿಕರನ್ನು ನವನವೀನರೀತಿಯಲ್ಲಿ ನರ್ತನಮಾಡಿಸತಕ್ಕ ಭಾಷೆಯಾಗಿವೆ ಎಲ್ಲ

॥ ವಾಸುಕಿರುವಾಚ ॥

**ಮಾಯಾನಿಹತಮಾತಂಗಮುಧ್ಯದ್ವೀಪವಿದಾರಿತಾಂ ।**
**ಕ್ಷಿತಿಂ ಭಿತ್ವಾವಿಶತ್ಕನ್ಯಾ ಕೀರ್ತಿಸ್ತೇ ವಸುಧಾತಲಂ ॥ ೧೬ ॥**

ಶ್ಲೋಕಗಳಿಗೂ ಈ ಪುರಾಣದಲ್ಲಿ ಯಾವ ವ್ಯಾಖ್ಯಾನವನ್ನೂ ಕೊಡದ ಇದ್ದಾಗ್ಯೂ ಆ ಗೀರ್ವಾಣಮಾತೆಯ ಅನುಗ್ರಹದಿಂದ ಮಧ್ಯೆ ಮಧ್ಯೆ ಸ್ಫುರಿಸುವ ವಿಶೇಷ ವಿಷಯ ಗಳನ್ನು ಗುರುರಾಜ ಕಟಾಕ್ಷಗಳಿಂದನುಗ್ರಹೀತರಾದ ನಾವು ಬರೆಯದೆ ಹೋದರೆ ಗುರುದ್ರೋಹ, ರಾಜದ್ರೋಹಗಳಿಗೆ ಗುರಿಯಾದೇವೆಂಬ ಭೀತಿಯಿಂದ ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಟಿಪ್ಪಣಿಗಳನ್ನೂ ವಿಶೇಷಾರ್ಥಗಳನ್ನೂ ಗುರುರಾಜರ ಪ್ರೇರಣೆಯಂತೆ ಬರೆದು ಮುಖ್ಯೋದ್ದೇಶವನ್ನು ಪರಿಪಾಲಿಸುವೆವು

ಈ ಶ್ಲೋಕದಲ್ಲಿ ರಾಜನ ಕೀರ್ತಿಯನ್ನು ವರ್ಣಿಸುವ ಸಂದರ್ಭದಲ್ಲಿ ಪದಕ್ರಮ ವಿಲಾಸಿನೀಕೀರ್ತಿಃ ಎಂಬ ಪದವನ್ನು ಪ್ರಯೋಗಿಸಿರುವುದರಿಂದ ಈ ಶ್ಲೋಕಕ್ಕೆ ವೇದ ಪರವಾಗಿಯೂ ಒಂದರ್ಥವನ್ನು ಮಾಡಬಹುದು  ಅದಂತೆಂದರೆ –

ಭಗವಂತನ ಮುಖದಿಂದ ಹೊರಟ ಷಡಂಗಯುಕ್ತವಾದ ವೇದಗಳಿಗೆ, ಪದ ಕ್ರಮಜಟೆ, ಘನಗಳೆಂಬ ಉಚ್ಚಾರಣಾ ಲಕ್ಷಣಗಳುಂಟು  ಇಂತಹ ಆಸ್ತಿಕಜನಾನು ಷ್ಠೇಯವಾದ ವೇದವು ಪದಕ್ರಮಗಳೆಂಬ ತನ್ನೆರಡು ಪಾದಗಳನ್ನೂ ವಿಲಾಸದಿಂದ ನಾಸ್ತಿಕಜನರ ತಲೆಯ ಮೇಲಿಟ್ಟು, ತನಗೆ ಹಸ್ತಾಲಂಬನವಿಲ್ಲದೆ ಇರುವಲ್ಲಿ (ಈ ನಾಸ್ತಿಕ್ಯಕಾಲದಲ್ಲಿ) ಕವಿದತ್ತಹಸ್ತಾವಲಂಬಳಾಗಿರುವಳೆಂದರೆ, ವೇದಭಾಷ್ಯಗಳನ್ನೂ ವೇದಸಾರವಾದ ಶ್ರುತಿ, ಸ್ಮೃತಿ, ಪುರಾಣಗಳನ್ನೂ ಬರೆದ ವ್ಯಾಸಾದಿಋಷಿ (ಕವಿ) ಗಳಿಂದ ಉದ್ಧೃತಳಾಗಿ, ಸ್ವರ್ಗದವರಿಗೆ ಕೀರ್ತಿಯನ್ನು ಹಬ್ಬಿಸಿದವಳೆಂದರೆ, ಲೋಕ ತ್ರಯವನ್ನು ತನ್ನ ಮಹಿಮೆಯಿಂದ ಉದ್ಧಾರಮಾಡಿ, ಅನಾದ್ಯಂತವಾದ ಕೀರ್ತಿ ಯನ್ನು ಗಳಿಸಿರುವಳೆಂದು ಮುಖ್ಯವಾದ ಅಭಿಪ್ರಾಯವು ಇಲ್ಲಿ ತೋರುವುದು ಪ್ರಕೃತಮನುಸರಾಮಃ

೧೬. ವಾಸುಕಿಯೆಂಬುವನು ಹೇಳುತ್ತಾನೆ —ಎಲೈ ಶೈಲೂಷರಾಜನೇ! ಭೂಲೋಕದಲ್ಲೆಲ್ಲಾ ಹಬ್ಬಿರುವ ನಿನ್ನ ಕೀರ್ತಿಯೆಂಬ ಕಾಮಿನಿಯನ್ನು ನೋಡಿ, ಶತ್ರುರಾಜರ ಕೀರ್ತಿಯೆಂಬ ಕಾಮಿನಿಯು ನಾಚಿಕೆಯಿಂದ ಕೂಡಿದವಳಾಗಿ, ಮಾಯೆ ಯಿಂದ ಹೊಡೆಯಲ್ಪಟ್ಟ ಮದಿಸಿದ ಆನೆಗಳಿಂದ ಭೇದಿಸಲ್ಪಟ್ಟ (ಬಾಯಿ ಬಿಡಲ್ಪಟ್ಟ) ಭೂತಲವನ್ನು ಭೇದಿಸಿಕೊಂಡು ಅದರೊಳಗೆ ಹೊಕ್ಕಿಕೊಂಡಿರುವಳು

॥ ಪನಸ ಉವಾಚ ॥

ಪತಾರಿಲಕ್ಷ್ಮೀಸಂಯೋಗವಿಕಸದ್ವದನಸ್ಯ ತೇ ।
ಪ್ರಯಾತು ತ್ವರಿತಾ ಕೀರ್ತಿಃ ಕ್ರೋಧನೇವ ದಿಶೋ ದಶ ॥ ೧೭ ॥

॥ ಗದ ಉವಾಚ ॥

ಸತೋಯತೋಯದಾಕಾರೈರ್ನಾಗೈರ್ದಾನಪ್ರವರ್ಷಿಭಿಃ ।
ಆಕ್ರಾಂತದಿಙ್ಮುಖೇ ಯುದ್ಧೇ ವಿದ್ಯುತ್ತ್ವಂಮೇ ಕರೋತ್ವಸಿಃ ॥ ೧೮ ॥

॥ ಮಹಾನಾದ ಉವಾಚ ॥

ಮದೀಯಸಿಂಹನಾದೇನ ವಿತ್ರಾಸಿತಗಜಾಕುಲಂ ।
ಬಲಂ ನಿಪಾತಯಾರೀಣಾಂ ಶರೈಃ ಸನ್ನತಪರ್ವಭಿಃ ॥ ೧೯ ॥

---

೧೭. ಪನಸನೆಂಬುವನು ಹೇಳುತ್ತಾನೆ —ಗಂಧರ್ವ ರಾಜನೇ! ನಾನು ಹೇಳುವುದನ್ನು ಕೇಳು ನಿನ್ನ ಶೌರ್ಯದಿಂದ ಸಂಹರಿಸಲ್ಪಟ್ಟ ಶತ್ರುರಾಜರನ್ನು ಬಿಟ್ಟು ಬಿಟ್ಟವಳಾಗಿ ಅವರ ಭಾಗದ ಲಕ್ಷ್ಮಿಯು ನಿನ್ನನ್ನು ಕೂಡಿಕೊಂಡ ಬಳಿಕ ನಿನ್ನ ಮುಖವು ಶುಭ್ರ ಕಾಂತಿಯಿಂದ ವಿಕಸಿತವಾದುದನ್ನು ನೋಡಿ ಶತ್ರುಗಳ ಕೀರ್ತಿಯೆನಿಸಿದ ಕಾಮಿನಿಯು ಕೋಪದಿಂದ ಹುಬ್ಬು ಗಂಟಿಕ್ಕಿಕೊಂಡು ಹತ್ತು ದಿಕ್ಕುಗಳಲ್ಲೂ ಹೋಗಿ ಸೇರಿಕೊಳ್ಳಲಿ

೧೮. ಗದನೆಂಬುವನು ಹೇಳುತ್ತಾನೆ —ನೀರನ್ನು ತುಂಬಿಕೊಂಡ ದೊಡ್ಡ ದೊಡ್ಡ ಮೋಡಗಳಂತೆ ಆಕಾರವುಳ್ಳ ಮದ್ದಾನೆಗಳ ಕಪೋಲದಿಂದ ಹೊರಹೊರಟ ಮದೋದಕಧಾರೆಗಳಿಂದ ಹತ್ತು ದಿಕ್ಕುಗಳೂ ಮುಸುಕಿಕೊಂಡಿದ್ದ ಸಮಯದಲ್ಲಿ ನನ್ನ ಕೈಯಲ್ಲಿ ಹಿಡಿದಿರುವ ತೀಕ್ಷ್ಣವಾದ ಕತ್ತಿಯು ಸಿಡಿಲಿನಂತೆ ಎರಗಿ ಮೋಡ (ಆನೆ) ಗಳನ್ನು ಕತ್ತರಿಸಿಹಾಕಲಿ

೧೯. ಮಹಾನಾದನು ಹೇಳುತ್ತಾನೆ —ಎಲೈ ವೀರನಾದ ಗಂಧರ್ವರಾಜನೇ! ಕೇಳು ನನ್ನ ಸಿಂಹನಾದದಿಂದ ಬೆದರಿ ಓಡಿಹೋಗುತ್ತಿರುವ ಗಜ ತುರಗ ಸಹಿತವಾದ ಶತ್ರುಸೈನ್ಯವನ್ನು ನಿನ್ನ ಬತ್ತಳಿಕೆಯಿಂದ ಹೊರ ಹೊರಟ ತೀಕ್ಷ್ಣವಾದ ಬಾಣಗಳು ಚೂರುಚೂರಾಗಿ ಕತ್ತರಿಸಿ ಕೆಡವಲಿ

॥ ವಸುರುವಾಚ ॥

ಗಜಾಶ್ವರಥಸಾಘಾತಚರಣೋಲ್ಲಿಖಿತಂ ರಜಃ ।
ದ್ರಷ್ಟಾಸಿ ಪ್ರಶಮಂ ಯಾತಂ ಪರಿತಸ್ತ್ವರಿ ಶೋಣಿತೈಃ ॥ ೨೦ ॥

॥ ವೃಂದಾರಕ ಉವಾಚ ॥

ಗಜಕುಂಭಸಮುದ್ರಷ್ಟಮುಕ್ತಾಫಲವಿಕಾಸಿಷು ।
ತಿಷ್ಠತ್ಸು ರಾಜಸ್ತ್ವಡ್ಗೇಷು ಕಃ ಸಹೇತ ಪರಾಭವಂ ॥ ೨೧ ॥

॥ ಜ್ಯೋತಿಷಿಕ ಉವಾಚ ॥

ಕುಪಿತಭ್ರೂಲತಾಭಂಗಕುಟಿಲದ್ವಯಕೋಟಿಷು ।
ವಿದ್ಯಮಾನೇಷು ಚಾಪೇಷು ಕಃ ಸಹೇತ ಪರಾಭವಂ ॥ ೨೨ ॥

॥ ದೃಢಸ್ಯುರುವಾಚ ॥

ರಾಜಂಸ್ತ್ರೀಕ್ಷ್ಣಾಃ ಸಂತಿ ಯಸ್ಯ ವಿಶಿಖಾಃ ಪಂಚ ಮಾನಿನಃ ।
ಕಿಮನ್ಯೈಸ್ತಸ್ಯ ಕರ್ತವ್ಯಂ ಪಕ್ಷಪಾತಿಭಿರಾಹವೇ ॥ ೨೩ ॥

---

೨೦. ವಸುವೆಂಬುವನು ಹೇಳುತ್ತಾನೆ --ಆನೆ ಕುದುರೆ ಕಾಲಾಳುಗಳ ಕಾಲು ತುಳಿತದಿಂದ ಮೇಲಕ್ಕೆದ್ದ ಧೂಳು ನಿನ್ನ ಶತ್ರುಗಳ ರಕ್ತಗಳಿಂದಲೇ ಶಾಂತವಾಗುವುದನ್ನು ಇಷ್ಟರಲ್ಲೇ ನೋಡುತ್ತೀಯೆ

೨೧ ಬೃಂದಾರಕನೆಂಬುವನು ಹೇಳುತ್ತಾನೆ.—ಆನೆಗಳ ಕುಂಭಸ್ಥಳಗಳಲ್ಲಿ ದೊರಕುವ ರತ್ನಗಳು ನಿನ್ನ ಖಡ್ಗದಲ್ಲೇ ಕೆತಲ್ಪಟ್ಟಿರುವಾಗ ಶತ್ರುಗಳಿಂದ ಅಪಜಯವೆಂಬುದನ್ನು ಯಾವನು ತಾನೆ ಸಹಿಸಿಯಾನು?

೨೨. ದೃಢಸ್ಯು ಎಂಬುವನು ಹೇಳುತ್ತಾನೆ —ಯಾವ ಅಭಿಮಾನಶಾಲಿಯಾದ ವೀರನಿಗೆ ಐದೇ ಐದು ಬಾಣಗಳಿರುತ್ತವೆಯೋ ಅಂತಹವನಿಗೆ ಇತರ ಪಕ್ಷಪಾತಿ (ಸಹಾಯ) ಗಳಿಂದ ಏನೂ ಕೆಲಸವಿಲ್ಲ.

೨೩. ಚಂದ್ರಾಪೀಡನು ಹೇಳಿದನು.—ಕೋಪಿಷ್ಠರಾಗಿರುವ ಮನೋಹರವಾದ ದೋರ್ದಂಡಗಳಿಂದ ವಿರಾಜಮಾನರಾದ ವೀರರಿಗೆ, ಯುದ್ಧದಲ್ಲಿ ವ್ಯರ್ಥವಾಗಿ ಬಿಡಲ್ಪಡುವ ಬಾಣಗಳಿಂದೇನು ಪ್ರಯೋಜನವುಂಟು?

॥ ಚಂದ್ರಾಪೀಡ ಉವಾಚ ॥

ಕಿಮಾಯುಧೈಃ ಸತ್ತ್ವವತಾಂ ಚಾರುದೋರ್ದಂಡ ಶಾಲಿನಾಂ ।
ಸದ್ಯಃ ಸಂಜಾತಮನ್ಯೂನಾಂ ಯುದ್ಧವ್ಯಾಕ್ಷೇಪಕಾರಕೈಃ ॥ ೨೪ ॥

॥ ಗದ್ಯೈರುವಾಚ ॥

ಖಡ್ಗಾಸ್ತಿಷ್ಠಂತು ಮೇ ತುಚ್ಛಾ ಭುಕ್ತಭಂಗಾಟ್ಟಹಾಸಿನಃ ।
ಏಕದೋರ್ದಂಡಶೇಷೋಽಪಿ ಕಃ ಸಹೇತ ಪರಾಭವಂ ॥ ೨೫ ॥

॥ ಕಲವಿಂಕ ಉವಾಚ ॥

ಮದ್ಬಾಹುಮಂದಕ್ಷುಭಿತವೈರಿಸೈನ್ಯಮಹಾರ್ಣವಾತ್ ।
ಭುಂಕ್ಷ್ವ ಲಕ್ಷ್ಮೀಂ ಸಮುತ್ಪನ್ನಾಂ ಚಿರಾಯ ಜಗತೀಪತೇ ॥ ೨೬ ॥

॥ ಗಜ ಉವಾಚ ॥

ಕಿಮಾಯುಧೈಃ ಸತ್ತ್ವವತಾಂ ಕುಪುಂಸಾಂ ಚ ಕಿಮಾಯುಧೈಃ ।
ಅರಾತಿಶಸ್ತ್ರಾಣ್ಯೇಕೇಷಾಮನ್ಯೇಷಾಮಫಲಾನಿ ಹಿ ॥ ೨೭ ॥

---

೨೪. ಜ್ಯೋತಿಷಿಕನು ಹೇಳಿದನು —ದುಂಡಾಗಿ ಸ್ವಲ್ಪ ಬಗ್ಗಿರುವ ಹುಬ್ಬುಗಳಂತೆ ಇರುವ ಧನುಸ್ಸುಗಳನ್ನುಳ್ಳ ವೀರರು ಕೋಟಿ ಕೋಟಿ ಸಂಖ್ಯಾಕರಾಗಿರುವಲ್ಲಿ ಶತ್ರುಗಳಿಂದ ಉಂಟಾಗುವ ತಿರಸ್ಕಾರವನ್ನಾವನು ತಾನೇ ಸಹಿಸಿಯಾನು ?

೨೫ ಗದ್ಯವೆಂಬುವನು ಹೇಳುತ್ತಾನೆ —ಬರೀ ಅಟ್ಟಹಾಸ ಧ್ವನಿಯಿಂದ ಕೂಡಿದ ನನ್ನ ನೂರಾರು ಕತ್ತಿಗಳ ಮಾತದಂತಿರಲಿ ಆದಿಶೇಷನ ದೇಹದಂತೆ ದೋರ್ದಂಡಬಲಶಾಲಿಯಾದ, ಒಬ್ಬನೇ ಬಲಶಾಲಿಯಾದ ನೀನಿರುವಲ್ಲಿ ಶತ್ರುಗಳಿಂದ ಅಪಜಯವೆಂಬುದನ್ನಾವನು ಸಹಿಸಬಲ್ಲನು ?

೨೬. ಕಲವಿಂಕನು ಹೇಳಿದನು —ಎಲೈ ಗಂಧರ್ವರಾಜನೇ ! ಕೇಳು ನನ್ನ ಉದ್ದವಾದ ತೋಳುಗಳೆಂಬ ಮಂದರಪರ್ವತದಿಂದ ಕಡೆಯಲ್ಪಟ್ಟು, ವೈರಿಗಳ ಸೈನ್ಯವೆಂಬ ಮಹಾಸಮುದ್ರದಿಂದ ಹುಟ್ಟಿದ ಜಯಲಕ್ಷ್ಮಿಯನ್ನು ನೀನು ಬಹು ಕಾಲ ಭೋಗಿಸೈ ! ಭೂಪಾಲ !

೨೭ ಗಜನು ಹೇಳುತ್ತಾನೆ —ಬಲಶಾಲಿಗಳಿಗೆ ಆಯುಧದಿಂದೇನು ಪ್ರಯೋಜನ? ಹೇಡಿಗಳ ಹತ್ತಿರ ಆಯುಧವಿದ್ದರೆ ತಾನೇ ಏನು ಪ್ರಯೋಜನ ? ಶತ್ರುಗಳ ಶಸ್ತ್ರಗಳು ಇವರ ಮುಂದೆ ವ್ಯರ್ಥವೇ ಹೊರ್ತು ಮತ್ತೇನೂ ಪ್ರಯೋಜನವಿಲ್ಲ

॥ ಬಲಕ ಉವಾಚ ॥

ದುರ್ಬಲೋತ್ಖಾತಶಕ್ರೇಭದಶನಾಭಿಹತೇ ಹರೌ ।
ಮಯಾದ್ಯ ಸುರರಾಡಸ್ತು ಭವಾಂಸ್ತ್ರಿಭುವನೇಶ್ವರಃ ॥ ೨೮ ॥

—

ಪ್ರನಷ್ಟದೇವತಾಪೂಜಂ ಬಲಿದಾನಂ ಸುದುರ್ದಶಂ ।
ಮಯಾ ಕೃತಮಥಾದ್ಯಾಸ್ತು ತ್ರೈಲೋಕ್ಯಮಪಿ ಸುಪ್ರಭೋ ॥ ೨೯ ॥

॥ ಹರಿತ ಉವಾಚ ॥

ಕೀನಾಶಮಹಿಷೇಣಾದ್ಯ ಹರಸ್ಯ ವೃಷಭೇಣ ತು ।
ಅಯೋಧ್ಯಾಂ ವಾಹಯಿಷ್ಯಾಮಿ ಶೇಷಾಹೇರ್ಲಾಂಗಲೇನ ಚ ॥ ೩೦ ॥

---

೨೮ ಬಲಕನೆಂಬುವನು ಹೇಳುತ್ತಾನೆ —ತ್ರಿಭುವನೇಶ್ವರನಾದ ಶೈಲೂಷ ರಾಜನಾದ ನೀನಿರುವಲ್ಲಿ, ಶೂರನಾದ ನಾನು ಶತ್ರುಗಳಿಗೆ ಅಭಿಮುಖನಾಗಿ ನಿಂತು ಯುದ್ಧಮಾಡುವಾಗ, ಆ ಮಹಾವಿಷ್ಣುವು ದುರ್ಬಲವಾಗಿ ನೆಲವನ್ನು ಅಗೆದು ಅದರಲ್ಲಿ ಹುದುಗಲಪೇಕ್ಷೆಮಾಡುವ ಐರಾವತದ ಹಲ್ಲಿನಿಂದ ಅಗಿಯಲ್ಪಡುವನು.

೨೯ ಮತ್ತೊಬ್ಬ ಗಂಧರ್ವನು ಹೇಳುತ್ತಾನೆ.—ಗಂಧರ್ವರಾಜ ! ನಾನು ರಣರಂಗದಲ್ಲಿ ಶತ್ರುಗಳನ್ನು ಹೊಡೆದುರುಳಿಸಿದ ಬಳಿಕ ಮೂರು ಲೋಕಗಳಲ್ಲೂ ದೇವತಾಪೂಜೆಯೂ ಬಲಿಹರಣಾದಿಗಳೂ ನಾಶವಾಗಿ ಮಹತ್ತರವಾದ ದುರ್ದಶೆ ಯುಂಟಾಗಲಿ.

೩೦ ಹರಿತನೆಂಬುವನು ಹೇಳುತ್ತಾನೆ —ಗಂಧರ್ವರಾಜ ! ನನ್ನ ಪರಾಕ್ರಮ ವನ್ನು ಸ್ವಲ್ಪ ಕೇಳು ಈ ಶತ್ರುರಾಜನಾದ ಭರತನ ಆಧಿಪತ್ಯಕ್ಕೆ ಸೇರಿದ ಅಯೋಧ್ಯಾ ನಗರಕ್ಕೆ ನಗರವನ್ನೇ ನಾನು ಈಗಿಂದೀಗಲೇ ಯಮನ ಕೋಣದ ಮೇಲೆಯೂ, ಈಶ್ವರನ ಎತ್ತಿನ ಮೇಲೆಯೂ, ಆದಿಶೇಷನ ಬಾಲದಿಂದಲೂ ಎಳೆಸಿ ಹಾಕಿಸಿ ಬಿಡುತ್ತೇನೆ

॥ ಮಹೋದರ ಉವಾಚ ॥
ನಿರಸ್ತಮಯಮಾರ್ತಾಂಡೇ ಮಯಾ ಲೋಕೇ ಚರಾಚರೇ ।
ಯಮಸ್ಯ ಮಹಿಷಂ ಪಶ್ಯ ಕ್ರಮಂತಂ ಸೂರ್ಯವಾಜಿಷು ॥ ೩೧ ॥

॥ ಸೂರ್ಯ ಉವಾಚ ॥
ನಿಃಶೇಷದೇವತಾಸಂಘೇ ಮಯಾ ಲೋಕತ್ರಯೇ ಕೃತೇ ।
ಮರ್ಗಾಸಿಂಹವಿನಿರ್ಭಿನ್ನಂ ಪಶ್ಯಾದ್ಯ ಮಘವದ್ಗಜಂ ॥ ೩೨ ॥

॥ ಪ್ರಭಸ ಉವಾಚ ॥
ನಿರಸ್ತಾಂಬುಪಿಪಾಸೇನ ಸಮಾಕೃಷ್ಟ ಧನೇಶ್ವರಾಃ ।
ಪ್ರಣಮಂತು ತವಾದ್ಯೈವ ದೇವಸಂಘಾ ಹತತ್ವಿಷಃ ॥ ೩೩ ॥

॥ ಭದ್ರಕೆ ಉವಾಚ ॥
ಸ್ಕಂದಶಂಕರಶೂನ್ಯೇಽಸ್ಮಿನ್ಮಯಾ ತ್ರಿಭುವನೇ ಕೃತೇ ।
ಶಿಖೀ ಸಂಭಕ್ಷಯತ್ವದ್ಯ ಶರ್ವಾಭರಣಪನ್ನಗಾ ॥ ೩೪ ॥

---

೩೧ ಮಹೋದರನು ಹೇಳುವನು—ಅಯ್ಯಾ ಶೈಲೂಷರಾಜ! ನನ್ನ ಶೌರ್ಯವನ್ನೂ ಸ್ವಲ್ಪ ಕೇಳು. ಸೂರ್ಯನು ಅಸ್ತವಾಗುವುದಕ್ಕಿಂತ ಮುಂಚೆಯೇ ಈ ಚರಾಚರಾತ್ಮಕ ಪ್ರಪಂಚವೆಲ್ಲವನ್ನೂ ಯಮನ ಕೋಣನು ಹೊತ್ತುಕೊಂಡು ಸೂರ್ಯನ ಕುದುರೆಗಳ ಮೇಲೆ ಸಾಗುವುದನ್ನು ನೋಡುತ್ತಲಿರು.

೩೨. ಸೂರ್ಯನೆಂಬ ಗಂಧರ್ವನು ಹೇಳುತ್ತಾನೆ—ನಾನು ಮೂರು ಲೋಕಗಳಲ್ಲಿಯೂ ಇರುವ ದೇವತೆಗಳ ಗುಂಪನ್ನೆಲ್ಲಾ ನಾಶವಡಿಸಿದೊಡನೆಯೇ, ಇಂದ್ರನ ಐರಾವತವು ಮಣ್ಣುಮುಕ್ಕುವುದನ್ನು ನೋಡುವಿಯಂತೆ

೩೩. ಪ್ರಭಸನೆಂಬುವನು ಹೇಳುತ್ತಾನೆ—ನನ್ನಿಂದ ಹೊಡೆಯಲ್ಪಟ್ಟ ಬಾಣಗಳು ಮಹಾದಾಹದಿಂದ ಕೂಡಿದವುಗಳಾಗಿ, ಧನೇಶ್ವರನೇ ಮೊದಲಾದ ದೇವತಾ ಸಂಘವನ್ನೆಳೆದೆಳೆದು ಅವರ ಪ್ರಾಣಗಳನ್ನು ಹೀರಲು ಹೊರಟಾಗ ಅವರೆಲ್ಲರೂ ಬಂದು ನಿನ್ನ ಕಾಲುಗಳ ಮೇಲೆ ಬೀಳಲಿ.

೩೪. ಭದ್ರಕನೆಂಬುವನು ಹೇಳುತ್ತಾನೆ—ಸೇನಾನಿಯಾದ ಕುಮಾರ ಸ್ವಾಮಿಯನ್ನೂ ಅವನ ತಂದೆ ಈಶ್ವರನನ್ನೂ ನಾನು ಮೂರು ಲೋಕದೊಡನೆ ಸೇರಿಸಿ ನಾಶಮಾಡಿ ಬಿಟ್ಟೊಡನೆಯೇ ಆ ಷಡಾನನನ ವಾಹನವಾದ ನವಿಲು ನುಗ್ಗಿ, ಈಶ್ವರನ ಒಡವೆಗಳಾದ ಹಾವುಗಳನ್ನು ಯಥೇಚ್ಛವಾಗಿ ತಿನ್ನಲಿ

॥ ಮಾರ್ಕಂಡೇಯ ಉವಾಚ ॥

ಕ್ರೋಧಾಂಧಕಾರಕಲುಷೀಕೃತಚಾರುವಕ್ತ್ರಾ-
ನ್ಗಂಧರ್ವರಾಜತನಯಾನ್ಪ್ರಸಮೀಕ್ಷಮಾಣಃ ।
ಜಗಾದ ರಾಜಾನಮುದೀನಸತ್ತ್ವೇ
ನಾಡಾಯನಾಖ್ಯಸ್ತು ತದಾ ಪುರೋಧಾಃ ॥ ೩೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಧರ್ವಗರ್ಜನಂನಾಮೈಕಾ
ದಶೋತ್ತರ ದ್ವಿಶತತಮೋಽಧ್ಯಾಯಃ.



೩೫ ಮಾರ್ಕಂಡೇಯ ಋಷಿಗಳು ವಜ್ರರಾಜನನ್ನು ಕುರಿತು ಹೇಳುತ್ತಾರೆ. ಶಿಬಿರಾಜನ ಪುರೋಹಿತನಾದ ನಾಡಾಯನನೆಂಬುವನು ಕೋಪವೆಂಬ ಕತ್ತಲೆಯ ರೂಪವಾದ ಕಲ್ಮಷದಿಂದ ಕೂಡಿದ ಮುಖಗಳುಳ್ಳ, ಮನಸ್ವೀ ಮಾತನಾಡುತ್ತಲಿರುವ ಆ ಗಂಧರ್ವರಾಜ ಕುಮಾರರನ್ನು ನೋಡಿ, ಮಹಾರಾಜನ ಎದುರಿಗೆ ನಿಂತು ಮುಂದೆ ಹೇಳುವ ನೀತಿಯನ್ನು ಹೇಳಿದನು ಕೇಳಯ್ಯ! ವಜ್ರರಾಜ!

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಗಂಧರ್ವರ ಗರ್ಜನೆಯೆಂಬ ಹೆಸರಿನ
ಇನ್ನೂರ ಹನ್ನೊಂದನೆಯ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವಾದಶೋತ್ತರ ದ್ವಿಶತತಮೋಽಧ್ಯಾಯಃ ॥

---

॥ ನಾಡಾಯನ ಉವಾಚ ॥

ಏಕಯಾ ದ್ವೇ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೀಕುರು ।
ಪಂಚ ಜಿತ್ವಾ ಷಡಾಶ್ರಿತ್ಯ ಸಪ್ತ ಹಿತ್ವಾ ಸುಖೀ ಭವ ॥ ೧ ॥

ಏಕಯಾ ಪ್ರಜ್ಞಯಾ ರಾಜನ್ಕಾರ್ಯಾಕಾರ್ಯದ್ವಯಂ ನರಃ ।
ವಿನಿಶ್ಚಿತ್ಯ ತು ಯಃ ಕುರ್ಯಾತ್ಕಾರ್ಯಂ ತತ್ರ ಸ ಪಂಡಿತಃ ॥ ೨ ॥

ಮಧ್ಯಸ್ಥಂ ಯದಿ ವಾ ಮಿತ್ರಂ ಶತ್ರುಂ ವಾ ಕಾರ್ಯಗೌರವಾತ್ ।
ಜ್ಞಾತ್ವಾ ದೇಶಂ ಚ ಕಾಲಂ ಚ ಹ್ಯುಪಾಯೈರಭ್ಯುಪಕ್ರಮೇತ್ ॥ ೩ ॥

---

### ಇನ್ನೂರ ಹನ್ನೆರಡನೆಯ ಅಧ್ಯಾಯವು.

೧ ನಾಡಾಯನನು ಶೈಲೂಷನನ್ನು ಕುರಿತು ಹೇಳಿದನು.—ಮಹಾರಾಜ! ಕೇಳು. ಒಂದರಿಂದ ಎರಡನ್ನು ನಿಶ್ಚಯಿಸಿ, ನಾಲ್ಕರಿಂದ ಮೂರನ್ನು ಸ್ವಾಧೀನ ಮಾಡಿಕೊ ಐದನ್ನೂ ಆರನ್ನೂ ಗೆದ್ದು ಏಳನ್ನು ಬಿಟ್ಟು ಸುಖವಾಗಿರು ಇವರ ವಿವರಣೆ ಮುಂದಿನ ಶ್ಲೋಕದಲ್ಲಿ ನೋಡಿ.

೨-೪. ಎಲೈ ಶೈಲೂಷರಾಜನೇ! ಕೇಳು ಒಂದೇ ಬುದ್ಧಿಯಿಂದ ಕಾರ್ಯಾ ಕಾರ್ಯಗಳೆರಡನ್ನೂ ನಿಶ್ಚಯಿಸಿ ಯಾವನು ಕೆಲಸಮಾಡುವನೋ ಅವನೇ ವಿವೇಕ ಯೆನಿಸಿಕೊಳ್ಳುವನು ಕಾರ್ಯಗೌರವದಿಂದಿರುವ ಶತ್ರುವನ್ನು ಮಧ್ಯಸ್ಥನಾಗಿದಾನೆಯೋ ಅಥವಾ, ಇವನು ಮಿತ್ರನೇ ಅಥವಾ ಶತ್ರುವೇ ಎಂಬ ಮೂರು ವಿಚಾರವನ್ನು ದೇಶ

ಸಾಮಭೇದಪ್ರದಾನಾಶ್ಚ ಉಪಾಯಾಃ ಪರಿಕೀರ್ತಿತಾಃ ।
ಉಪಾಯಶ್ಚ ಚತುರ್ಥೋಽತ್ರ ದಂಡಸ್ತ್ವಗತಿಕಾ ಗತಿಃ ॥ ೪ ॥

ಪಂಚೇಂದ್ರಿಯಜಯಂ ಕೃತ್ವಾ ಗುಣಷಟ್ಕಮುಪಾಶ್ರಯೇತ್ ।
ಬುಧ್ವಾ ಬಲಾಬಲಂ ಸಮ್ಯಗಾತ್ಮನಶ್ಚಾಪರಸ್ಯ ಚ ॥ ೬ ॥

ರಾಜದೋಷಾಃ ಪರಿತ್ಯಕ್ತಾ ಯೇನ ಸಪ್ತ ನರಾಧಿಪ ।
ಸಿದ್ಧಿಂ ತಸ್ಯ ಸಮಾಯಾಂತಿ ಯಥಾಕಾಲಂ ಗುಣಾ ನೃಪ ॥ ೭ ॥

ಮೃಗಯಾಯಾನಮುಖ್ಯಾಶ್ಚ ಸ್ತ್ರಿಯಶ್ಚ ಪುರುಷಾ ಗಿರಃ ।
ಅರ್ಥಸಂದೂಷಣಂ ಚೈವ ದಂಡಪಾರುಷ್ಯಮೇವ ಚ ॥ ೮ ॥

ರಾಜದೋಷೈಃ ಪರಿತ್ಯಕ್ತಾ ರಾಘವಾಸ್ತತ್ರ ಪಾರ್ಥಿವ ।
ಗುಣಾಶ್ರಯವಿಭಾಗಜ್ಞಾ ವಿಗ್ರಹಸ್ತೈರ್ನ ರೋಚತೇ ॥ ೯ ॥

---

ಕಾರ್ತೋಪಾಯಗಳೆಂಬ ಮೂರು ಉಪಾಯಗಳಿಂದ ಕಂಡುಹಿಡಿದು ಅಂಥವನನ್ನು ಸಾಮದಾನಭೇದದಂಡಗಳೆಂಬ ನಾಲ್ಕು ಗತಿಗಳಿಂದ ವಶಮಾಡಿಕೊಳ್ಳಬೇಕು.

೫ ಯಾವನು ಶತ್ರುಗಳನ್ನು ಜಯಿಸಬೇಕೆಂದು ಅಪೇಕ್ಷಿಸುವನೋ ಅವನು ಪಂಚೇಂದ್ರಿಯಗಳನ್ನೂ ಜಯಿಸಿದವನಾಗಿ ಬಳಿಕ ತ್ರಿಲೋಕವನ್ನೂ ಜಯಿಸುವ ಉಪಾಯವನ್ನು ಕಂಡುಹಿಡಿದರೆ ಅಂಥವನಿಗೆ ವಿಜಯವು ಸಮೀಪದಲ್ಲಿಯೇ ಇರುವದರಲ್ಲಿ ಸಂದೇಹವಿಲ್ಲ

೬-೯ ಈ ರೀತಿ ಪಂಚೇಂದ್ರಿಯಗಳನ್ನು ಜಯಿಸಿ ಆರು ಗುಣಗಳನ್ನಾಶ್ರಯಿಸಬೇಕು ಇವರಿಂದ ತನ್ನ ಮತ್ತು ಶತ್ರುವಿನ ಬಲಾಬಲಗಳು ಗೊತ್ತಾಗುವುವು ರಾಜನಾದವನು ಸಪ್ತವ್ಯಸನಗಳನ್ನು ಬಿಟ್ಟು ಬಿಟ್ಟು ಕೆಲಸಮಾಡುವನಾದರೆ ಅವನಿಗೆ ಸಿದ್ಧಿಯು ಕಾಲಾನುಸಾರವಾಗಿ ತಾನೇ ತಾನಾಗಿ ಲಭಿಸುತ್ತದೆ ಆ ಸಪ್ತವ್ಯಸನಗಳಾವುವೆಂದರೆ—ಬೇಟೆ, ವಾಹನ, ಸ್ತ್ರೀಯರು, ದುಸ್ಸಂಗ, ದುರ್ವಾಕ್ಯ, ದ್ರವ್ಯಸಂದೂಷಣ, ದಂಡ. ಇವುಗಳನ್ನು ರಾಜನು ದೋಷವನ್ನಾಗಿ ತಿಳಿದು ಬಿಟ್ಟುಬಿಡಬೇಕು ಗುಣಾಶ್ರಯಗಳ ವಿಭಾಗಗಳನ್ನು ತಿಳಿದವರು ಯುದ್ಧಮಾಡದೆ ಉಪಾಯದಿಂದ ಶತ್ರುವನ್ನು ಜಯಿಸುವರು.

ಭರತೇನ ವಯಂ ಸಾಮ್ನಾ ಬಲೇ ಮಹತಿ ತಿಷ್ಠತಾ ।
ಪ್ರಥಮಂ ಸಮುಪಾಕ್ರಾಂತಂ ತದೇವ ತವ ರೋಚತಾಂ ॥ ೧೦ ॥

ಭರತಸ್ಯ ವಯಂ ಸಾಮ್ನಾ ಯದಿ ಗಚ್ಛೇಮ ಪರ್ವತಂ ।
ಹಿತಂ ತತ್ಸ್ಯಾನ್ಮಹಾಭಾಗ ಸಕುಲಸ್ಯ ತವಾನಘ ॥ ೧೧ ॥

ತ್ವಯಾ ಕೃತ್ವಾ ಸಮುಚ್ಛೇದಂ ರಾಜ್ಞಾಂ ಜನನಿವಾಸಿನಾಂ ।
ಅಕಾರಣಾನ್ಮಹದ್ವೈರಂ ಕೃತಂ ಭೂಪತಿಭಿಃ ಸಹ ॥ ೧೨ ॥

ಜನೇ ನಿವಾಸಾದಸ್ಮಾಕಂ ಕೇವಲಂ ಲಘುತಾ ಭವೇತ್ ।
ಮಾನುಷ್ಯೈಃ ಸಂಗಮಶ್ಚೈವ ವಿಗ್ರಹಶ್ಚ ಪುನಃಪುನಃ ॥ ೧೩ ॥

ನ ಕೃಷಿರ್ನ ಚ ವಾಣಿಜ್ಯಂ ಜನೋಽಸ್ಮಾಕಂ ಪ್ರಯೋಜನಂ ।
ತೇ ವಯಂ ಸಜನಾಂ ಭೂಮಿಂ ತ್ಯಕ್ತ್ವಾ ಯಾಮಃ ಶಿಲೋಚ್ಚಯಂ ॥

---

೧೦-೧೧. ಮಹಾಬಲದಿಂದ ಯುದ್ಧಕ್ಕೆ ಬಂದಿರುವ ಭರತನಿಂದ ನಾವು ಈಗ ಸಾಮೋಪಾಯಕ್ಕಾಗಿ ಸಂದೇಶಿಸಲ್ಪಟ್ಟಿದ್ದೇವೆ. ಎಲೈ ಶೈಲೂಷರಾಜನೇ ! ನಾವೂ ನಮ ಈ ಸಾಮೋಪಾಯವನ್ನು ಸಾಧಿಸಿ ಸುಖವಾಗಿರೋಣ ಈಗ ಸಾಮೋಪಾಯಕ್ಕೆ ಬಂದಿರುವ ಭರತನ ಮಾತಿನಂತೆ ನಾವು ಹಿಮವತ್ಪರ್ವತದ ತಪ್ಪಲುಗಳಿಗೆ ಹೊರಟು ಹೋಗೋಣ ಈ ರೀತಿ ನೀನು ಮಾಡಿದರೆ ನೀನೂ ನಿನ್ನ ವಂಶವೂ ಸುಖವಾಗಿರು ವುದರಲ್ಲಿ ಅಡ್ಡಿಯಿಲ್ಲ

೧೨-೧೩. ಹಾಗಲ್ಲದೆ ನೀನು ಭೂತಲ ನಿವಾಸಿಗಳೊಡನೆ ವ್ಯರ್ಥ ವೈರವನ್ನು ಬೆಳೆಸಿ ಅಕಾರಣವಾಗಿ ಭೂಪತಿಗಳನ್ನು ಕೆಣಕಿಕೊಂಡು ಹೋಗುವುದಾದರೆ, ಈ ಜನ ನಿವಾಸಿಗಳ ರಾಜ್ಯದಲ್ಲಿರುವ ನಮಗೆ ಕೇವಲ ಲಾಘವವುಂಟಾಗುವುದೇ ಹೊರತು ನಮ್ಮ ಗೌರವಕ್ಕೇ ಬೆಲೆಯೇ ಇಲ್ಲದಂತಾಗುವುದು ಮನುಷ್ಯರ ಸಹವಾಸ ಅವ ರೊಡನೆ ಯುದ್ಧಗಳನ್ನು ಮಾಡುವುದೂ ಸಹ ಗಂಧರ್ವರಾದ ನಮಗೆ ಸುತರಾಂ ಯೋಗ್ಯವಲ್ಲ.

೧೪. ಈ ಮನುಷ್ಯರು ವಾಸಮಾಡುತ್ತಿರುವ ಭೂ ಮಿ ಯಿಂ ದ ಲಾ ಗ ಲಿ ಇವರು ಮಾಡುತ್ತಿರುವ ಭೂವ್ಯವಸಾಯದಿಂದಲಾಗಲಿ, ಲಾಭಾರ್ಥವಾಗಿ ಮಾಡುವ ವ್ಯಾಪಾರದಿಂದಲಾಗಲಿ ಗಂಧರ್ವರಾದ ನಮಗೆ ಏನೇನು ಪ್ರಯೋಜನವೇ ಇಲ್ಲ

**ಅಪೇಕ್ಷ್ಯ ದೇಶಕಾಲೌ ಚ ಸಿದ್ಧಿಂ ವಿಗ್ರಹಮೇವ ಚ ।**
**ಫಲಂ ಚ ಬುಧ್ವಾ ಯಃ ಕುರ್ಯಾತ್ಸ ರಾಜಸ್ಪಂದಿತೋ ನರಃ ॥ ೧೫ ॥**

**ಭೂಮಿರ್ಹಿರಣ್ಯಂ ಮಿತ್ರಂ ಚ ತ್ರಿವಿಧಂ ವಿಗ್ರಹಾಸ್ಪದಂ ।**
**ಸ್ವಯಂಗ್ರಾಹೋ ಯದಸ್ಮಾಕಂ ಮೇರುಃ ಕನಕಪರ್ವತಃ ॥ ೧೬ ॥**

**ಹಿರಣ್ಯೇನ ತದಾ ಕಾರ್ಯಂ ನ ನೋಽಸ್ತಿ ರಿಪುಸೂದನ ।**
**ಕೃಷಿರ್ನಾಸ್ತಿ ಯತೋಽಸ್ಮಾಕಂ ತತೋ ಭೂರ್ನಿಷ್ಪ್ರಯೋಜನಾ ॥ ೧೭ ॥**

**ತಸ್ಮಾದ್ಭರತಮುನ್ನಿಚ್ಛ ಮುನಿಂ ಸಾಮ್ನಾ ನರಾಧಿಪ ।**
**ಮಿತ್ರಂ ರಘುಕುಲಂ ಕೃತ್ವಾ ನಿವಾಸಸ್ತು ಹಿಮಾಚಲೇ ॥ ೧೮ ॥**

**ಅದೃಶ್ಯಂ ದೇವಸೈನ್ಯಾನಾಂ ಸುಖಂ ಚಿರಮವಾಪ್ನುಹಿ ।**
**ಸ ಮಾನುಷೋಽಯಮಿತ್ಯೇವಂ ಭರತಂ ಮಂತುಮರ್ಹಸಿ ॥ ೧೯ ॥**

---

ಆದ್ದರಿಂದ ಇವರ ಮತ್ತು ಈ ವಾಣಿಜ್ಯ ವ್ಯವಸಾಯ ಭೂಮಿನ್ನಾದ ಭೂಮಿಯ
ಗೋಜನ್ನೇ ಬಿಟ್ಟು ನಾವೆಲ್ಲರೂ ಬೆಟ್ಟಗಳ ಮೇಲಕ್ಕೆ ಹೊರಟು ಹೋಗೋಣ

೧೫-೧೮. ದೇಶಕಾಲಾಪೇಕ್ಷೆಯಿಂದ ಸಂಧಿವಿಗ್ರಹಗಳನ್ನೂ, ಅವರಿಂದಾಗುವ ಫಲವನ್ನೂ ತಿಳಿದು ಯಾವನು ಕೆಲಸ ಮಾಡುವನೋ ಅವನೇ ಪಂಡಿತನೆನಿಸಿಕೊಳ್ಳುವನು ಹೆಣ್ಣು ಹೊನ್ನು ಮಣ್ಣುಗಳೇ ಮೈತ್ರಿಗೂ ಶತೃತ್ವಕ್ಕೂ ಆಶ್ರಯ ಸ್ಥಾನಗಳು ನಮಗೆ ಹೊನ್ನೆಂದರೆ ಲೆಖ್ಖವೇ ಇಲ್ಲ. ಚಿನ್ನದ ಬೆಟ್ಟವಾದ ಮೇರುಪರ್ವತವೇ ನಮ್ಮ ಅಧೀನವಲ್ಲಿರುವುದರಿಂದ ನಾವು ನಾವೇ ಬೇಕಾದಷ್ಟು ಚಿನ್ನಗಳನ್ನು ಅಲ್ಲಿಂದ ತರಬಹುದು. ಆದರಿಂದ ಗಂಧರ್ವರಾದ ನಮಗೆ ಚಿನ್ನದಿಂದೇನೂ ಉಪಯೋಗವೇ ಇಲ್ಲ -ನಮಗೆ ಊಟವೇ ಬೇಕಿಲ್ಲವಾದ್ದರಿಂದ ಭೂವ್ಯವಸಾಯವೂ ಸಹ ನಮಗೆ ಅನುಪಯೋಗವಾದುದು ಆದ್ದರಿಂದ ಭರತನನ್ನು ಮಿತ್ರನಂತೆ ಕಂಡು ಸಾಮೋಪಾಯದಿಂದ ಅವನ ಪ್ರೀತಿಗೆ ಪಾತ್ರರಾಗಿ ಅವನಿಗೆ ಭೂರಾಜ್ಯವನ್ನು ವಹಿಸಿ ನಾವೆಲ್ಲರೂ ಹಿಮಾಲಯ ಪರ್ವತಕ್ಕೆ ಹೊರಟುಹೋಗೋಣ

೧೯. ದೇವಸೇನೆಗಳೆಲ್ಲಾ ಮನುಷ್ಯರ ಕಣ್ಣಿಗೆ ಅದೃಶ್ಯವಾಗಿ ಹೋಗಿ ಸುಖವನ್ನು ಹೊಂದಲಿ ಇವನು ಸಾಮಾನ್ಯ ಮನುಷ್ಯ. ಇವನಿಂದೇನಾದೀತೆಂದು ನೀನು ಭರತನನ್ನು ಕ್ಷಮಿಸಬೇಕಾದುದೇನೂ ಇಲ್ಲ

ದುಷ್ಟಾನಾಂ ನಿಗ್ರಹಾರ್ಥಾಯ ಚತುರ್ಮೂರ್ತಿರ್ಜನಾರ್ದನಃ ।
ಜಾತೋ ರಘುಕುಲೇ ರಾಜನ್ಪುತ್ರೋ ದಶರಥಸ್ಯ ತು ॥ ೨೦ ॥

ಅಂಶೇನ ವಾಸುದೇವಸ್ಯ ಜಾತೋ ರಾಮೋ ಮಹಾಯಶಾಃ ।
ಸಂಕರ್ಷಣಸ್ಯ ಚಾಂಶೇನ ಲಕ್ಷ್ಮಣಃ ಪರವೀರಹಾ ॥ ೨೧ ॥

ಪ್ರದ್ಯುಮ್ನಸ್ಯ ತಥಾಂಶೇನ ಭರತೋ ಧರ್ಮವತ್ಸಲಃ ।
ಅನಿರುದ್ಧಸ್ಯ ಚಾಂಶೇನ ಶತ್ರುಘ್ನಃ ಸುಮಹಾಬಲಃ ॥ ೨೨ ॥

ತತ್ರ ರಾಘವಸಿಂಹೇನ ರಾಮೇಣಾಕ್ಲಿಷ್ಟಕರ್ಮಣಾ ।
ರಾವಣೋಽಭಿಹತಃ ಸಂಖ್ಯೇ ಸರ್ವಸತ್ತ್ವಭಯಂಕರಃ ॥ ೨೩ ॥

ಮೇಘನಾದೋ ನಿರಸ್ತಶ್ಚ ಸಂಗ್ರಾಮೇ ಲಕ್ಷ್ಮಣೇನ ಚ ।
ಶತ್ರುಘ್ನೇನ ನಿರಸ್ತಶ್ಚ ಲವಣೋ ದುಷ್ಟರಾಕ್ಷಸಃ ॥ ೨೪ ॥

ಮನ್ಯೇ ವಿಶಿಷ್ಟಭಾವತ್ವಂ ಭರತಸ್ಯ ಮಹಾತ್ಮನಃ ।
ಯೇನ ಮಾಲೀ ಹತಃ ಪೂರ್ವಂ ಲಂಕಾವಾಸೀ ಸ ರಾಕ್ಷಸಃ ॥ ೨೫ ॥

---

೨೦-೨೨ ಕೇಳು, ಗಂಧರ್ವರಾಜ! ಜನಾರ್ದನನಾದ ಮಹಾವಿಷ್ಣುವು ದುಷ್ಟರ ನಿಗ್ರಹಕ್ಕಾಗಿ ರಘುವಂಶದಲ್ಲಿ ದಶರಥನ ಹೊಟ್ಟೆಯಲ್ಲಿ ನಾಲ್ಕು ವಿಧ ಮೂರ್ತಿಯಾಗಿ ಅವತರಿಸಿರುವನು. ವಾಸುದೇವನ ಅಂಶದಿಂದ ರಾಮನಾಗಿಯೂ, ಸಂಕರ್ಷಣಾಂಶದಿಂದ ಲಕ್ಷ್ಮಣನಾಗಿಯೂ, ಪ್ರದ್ಯುಮ್ನಾಂಶದಿಂದ ಧರ್ಮವತ್ಸಲನಾದ ಭರತನಾಗಿಯೂ, ಅನಿರುದ್ಧಾಂಶದಿಂದ ಮಹಾಬಲಿಷ್ಠನಾದ ಶತ್ರುಘ್ನನಾಗಿಯೂ ಅವತರಿಸಿರುವರು.

೨೩-೨೫ ಈ ನಾಲ್ಕು ಮೂರ್ತಿಗಳ ಪೈಕಿ ಶ್ರೀರಾಮಮೂರ್ತಿಯು ಈಗಾಗಲೇ ಬಹು ಪ್ರಬಲನಾಗಿದ್ದ ರಾವಣನನ್ನು ಸಂಹರಿಸಿ ಲೋಕಹಿತವನ್ನುಂಟುಮಾಡಿದನು. ಈ ಮಹಾಶೂರನಾದ ರಾವಣನ ಮಗನಾದ ಮೇಘನಾದನನ್ನು ಲಕ್ಷ್ಮಣನು ಸಂಹರಿಸಿ ಲೋಕೈಕವೀರನೆನಿಸಿಕೊಂಡನು. ದುಷ್ಟರಾಕ್ಷಸನಾದ ಲವಣಾಸುರನನ್ನು ಶತ್ರುಘ್ನನು ಸಂಹರಿಸಿದನು. ಇನ್ನು ಭರತನ ವೈಶಿಷ್ಟ್ಯವನ್ನು ಹೇಳುವೆನು, ಕೇಳು. ಹಿಂದೆ ಲಂಕಾವಾಸಿಯಾಗಿದ್ದ ಮಾಲಿಯೆಂಬ ರಾಕ್ಷಸನನ್ನು ಈಗ ನಿನ್ನೊಡನೆ ಯುದ್ಧಮಾಡಲು ಬಂದಿರುವ ಭರತನು ಸಂಹಾರಮಾಡಿದನು. ಈ ಭರತನು ವಿಷ್ಣುವಿನ

ಸ ಏಷ ಭರತೋ ವಿಷ್ಣುರಸ್ತಿ ತೇ ತು ರಣಾಂಗಮಃ ॥ ១៦ ॥

ಹಿತೇ ಸ್ಥಿತೋ ಯಃ ಸತತಂ ಸುರಾಣಾಂ
ದೈತ್ಯೇಂದ್ರನಾಶಾಯ ನಿವಿಷ್ಟಬುದ್ಧಿಃ ।
ತೇನಾಽಪ್ರಮೇಯೇಣ ಜನಾರ್ದನೇನ
ಸಮಂ ವ್ರಜಸ್ವಾಶು ಮಹಾನುಭಾವ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ನಾಡಾಯನ ವಾಕ್ಯೇ ಶೈಲೂಷಂ ಪ್ರತಿ
ನಾಡಾಯನಾನುಶಾಸನವರ್ಣನೋನಾಮ
ದ್ವಾದಶೋತ್ತರ ದ್ವಿಶತತಮೋಽಧ್ಯಾಯಃ

---

ಅವತಾರಮೂರ್ತಿಯೆಂದು ಈಗ ನಿನಗೆ ಗೊತ್ತಾಯಿತಷ್ಟೆ ? ಈ ಭರತನು ಯಾವಾಗಲೂ ದೇವತೆಗಳ ಕೆಲಸಕ್ಕೆ ಸಹಾಯಮಾಡತಕ್ಕವನು ದೈತ್ಯಸಂಹಾರದಲ್ಲಿ ಬದ್ಧಕಂಕಣನಾದವನು. ಎಲೈ ಶೈಲೂಷನೆ! ಈಗ ಹೇಳಿದ ಮಾತನ್ನೆಲ್ಲಾ ಕೇಳಿ, ನೀನು ಈಗಲೇ ಭರತನ ಬಳಿಗೆ ಹೋಗಿ ಸಂಧಿಮಾಡಿಕೊಳ್ಳಯ್ಯ ! ನಿನಗೆ ಮಂಗಳವಾಗುವುದೆಂದು ನಾಡಾಯನನು ಶೈಲೂಷನಿಗೆ ಹೇಳಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಶೈಲೂಷನನ್ನು ಕುರಿತು ನಾಡಾಯನ
ವಾಕ್ಯವೆಂಬ ಹೆಸರಿನ ಇನ್ನೂರ ಹನ್ನೆರಡನೆಯ ಅಧ್ಯಾಯ
ಮುಗಿದುದು

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರಯೋದಶೋತ್ತರ ದ್ವಿಶತತಮೋಽಧ್ಯಾಯಃ ॥

---

॥ ಶೈಲೂಷ ಉವಾಚ ॥

ಸುಮಾಲೀ ವಿಷ್ಣುನಾಪೂರ್ವಂ ಕಥಂ ಯುದ್ಧೇ ನಿಪಾತಿತಃ ।
ಏತನ್ಮೇ ಸಂಶಯಂ ಛಿಂಧಿ ಶ್ರೂಯತೇ ಸ ಮಹಾಬಲಃ ॥ ೧ ॥

॥ ನಾರಾಯಣ ಉವಾಚ ॥

ಕಥೇಯಂ ರಾಜಶಾರ್ದೂಲ ಪುರಾಽಗಸ್ತ್ಯೇನ ಧೀಮತಾ ।
ರಾಮಾಯ ಕಥಿತಾ ವೀರ ತಾಂ ಮೇ ನಿಗಾದತಃ ಶೃಣು ॥ ೨ ॥

ಪುರಾ ವಿನಿಹತೇ ವೃತ್ರೇ ದೈತ್ಯಾ ವಿಗತನಾಯಕಾಃ ।
ಅಬ್ಧಿದುರ್ಗಂ ಸಾಗರಂ ಕೃತ್ವಾ ರಾತ್ರೌ ನಿಘ್ನಂತಿ ವೈ ಪ್ರಜಾಃ ॥ ೩ ॥

---

### ಇನ್ನೂರ ಹದಿಮೂರನೆಯ ಅಧ್ಯಾಯವು.

೧ ಶೈಲೂಷನು ಹೇಳುತ್ತಾನೆ —ಪೂರ್ವದಲ್ಲಿ ಸುಮಾಲಿಯೆಂಬ ಮಹಾಬಲ ಪರಾಕ್ರಮಶಾಲಿಯಾದ ರಾಕ್ಷಸನು ವಿಷ್ಣುವಿನಿಂದ ಯುದ್ಧದಲ್ಲಿ ಹರಿಹರಿಸಲ್ಪಟ್ಟನೆಂಬ ವೃತ್ತಾಂತವನ್ನು ದಯಮಾಡಿ ಹೇಳಬೇಕು

೨. ನಾರಾಯಣ ಋಷಿಗಳು ಹೇಳುತ್ತಾರೆ —ಎಲೈ ರಾಜಸಿಂಹನೇ ! ಈ ಕಥೆಯು ಪೂರ್ವದಲ್ಲಿ ಅಗಸ್ತ್ಯಋಷಿಗಳಿಂದ ರಾಮನಿಗೋಸ್ಕರ ಹೇಳಲ್ಪಟ್ಟಿತು ಅದೇ ಕಥೆಯನ್ನೇ ಈಗ ನಾನು ನಿನಗೆ ಹೇಳುತ್ತೇನೆ, ಕೇಳು.

೩-೪. ಪೂರ್ವದಲ್ಲಿ ವೃತ್ರಾಸುರನು ಸಂಹೃತನಾದ ಮೇಲೆ ಅವನ ಅನುಚರರಾದ ಸಮಸ್ತ ರಾಕ್ಷಸರೂ ಸಹ ಸಮುದ್ರದಲ್ಲಿ ಹಗಲೆಲ್ಲಾ ಇದ್ದುಕೊಂಡು ರಾತ್ರಿ

ಸುರೈಃ ಸರ್ವೈಃ ಸಮಾಗಮ್ಯ ತಥಾಽಯಂ ನ ಪರೈರ್ವಧಃ ।
ಸಮುದ್ರೋದಕಪಾನಾಯ ಅಗಸ್ತ್ಯಶ್ಚೋದಿತಸ್ತದಾ ॥ ೪ ॥

ದೇವಕರ್ಮಪ್ರಮುದಿತಸ್ತದಾಽಗಸ್ತ್ಯಮುನಿರ್ನೃಪ ।
ಪೀತ್ವಾ ಚಕಾರ ರಾಜೇಂದ್ರ ನಿಸ್ತೋಯಂ ಸಲಿಲಾಶಯಂ ॥ ೫ ॥

ದೇವೈಶ್ಚ ನಿಹತಾ ದೈತ್ಯಾ ನಿಸ್ತೋಯೇ ಸಲಿಲಾಶಯೇ ।
ತತಃ ಕದಾಚಿದ್ವಿಂಧ್ಯಸ್ತು ಜಗಾದಾರ್ಕನಿಶಾಕರೌ ॥ ೬ ॥

ಮೇರುಂತ್ಯಕ್ತ್ವಾ ಮಹಾಭಾಗೌ ಮಮ ಯಾತ ಪ್ರದಕ್ಷಿಣಾಂ ।
ಊಚತುಸ್ತೌ ತದಾ ವಿಂಧ್ಯಮಾವಯೋಸ್ತು ವಶಂ ಗಿರೇ ॥ ೭ ॥

ತೇನ ಪಂಥಾಃ ಕೃತೋಽಸ್ಮಾಕಂ ಯೇನೇದಂ ನಿರ್ಮಿತಂ ಜಗತ್ ।
ಏತಚ್ಛ್ರುತ್ವಾ ತು ವಿಂಧ್ಯಸ್ತು ತಪಸ್ತಪ್ತ್ವಾ ಪಿತಾಮಹಾತ್ ॥ ೮ ॥

---

ಯಾದ ಮೇಲೆ ಈಚೆಗೆ ಬಂದು ಪ್ರಜೆಗಳನ್ನು ಕೊಲ್ಲುವುದಕ್ಕಾರಂಭಿಸಿದರು ಆಗ ಇವರ ದೌಷ್ಟ್ಯವನ್ನರಿತು ಸಕಲ ದೇವತೆಗಳೂ ಸೇರಿ ಯೋಚಿಸಿದವರಾಗಿ ಇವರನ್ನು ಸುಮ್ಮ ಸುಮ್ಮನೆ ಕೊಲ್ಲುವುದು ಅಸಾಧ್ಯವೆಂದು ಭಾವಿಸಿ ಅಗಸ್ತ್ಯಋಷಿಗಳ ಹತ್ತಿರಕ್ಕೆ ಬಂದು, ಸ್ವಾಮಿ! ನೀವು ಸಮುದ್ರದ ನೀರನ್ನೆಲ್ಲಾ ಕುಡಿದು ಬಯಲುಭೂಮಿಯನ್ನಾಗಿ ಮಾಡಿದರೆ ಅದರೊಳಡಗಿರುವ ವೃತ್ರರನ್ನು ಸಂಹರಿಸಲು ಸರಾಗವಾಗುವುದೆಂದು ಪ್ರಾರ್ಥಿಸಿದರು.

೫ ದೇವತೆಗಳ ಮಾತಿಗೆ ಸಂತೋಷದಿಂದ ಒಪ್ಪಿಕೊಂಡು ಅಗಸ್ತ್ಯ ಋಷಿಗಳು ಸಮುದ್ರದ ನೀರನ್ನೆಲ್ಲಾ ಆಪೋಶನ ತೆಗೆದುಕೊಂಡಂತೆ ಒಂದೇ ಬಾರಿ ಕುಡಿದು ಅದನ್ನು ಬರಿದಾಗಿ ಮಾಡಿದರು.

೬. ನೀರಿಲ್ಲದೆ ಬಟ್ಟ ಬಯಲಾದ ಆ ಸಮುದ್ರದ ತಳದಲ್ಲಿದ್ದ ರಾಕ್ಷಸರನ್ನೆಲ್ಲಾ ಸಮಸ್ತ ದೇವತೆಗಳೂ ಬಂದು ಹೊಡೆದು ಸಂಹರಿಸಿ ಲೋಕೋಪಕಾರವನ್ನೇ ಮಾಡಿದರು.

೭-೮ ಒಂದಾನೊಂದು ಸಮಯದಲ್ಲಿ ವಿಂಧ್ಯಾದ್ರಿರಾಜನು ಸೂರ್ಯಚಂದ್ರರನ್ನು ಕುರಿತು ಒಂದು ಮಾತನ್ನು ಹೇಳಿದನು —

ಎಲೈ ಸೂರ್ಯಚಂದ್ರರಿರಾ! ನೀವು ಇದುವರಿಗೂ ಮೇರುಪರ್ವತವನ್ನು ಪ್ರದಕ್ಷಿಣೆಮಾಡುತ್ತಲಿರುವಿರಿ ಇನ್ನುಮುಂದೆ ಹಾಗೆ ಮಾಡಕೂಡದು ನಾನು ಮೇರು

ಇಷುಪಾತಮುಖೋಽಹ್ನಾ್ರಯಂ ಪ್ರತ್ಯಹಂ ಸಮವಾಪ್ತವಾನ್ ।
ತತಃ ಕತಿಪಯಾಹಾನಿ ದಿಶಮಾವೃತ್ಯ ದಕ್ಷಿಣಾಂ ॥ ೯ ॥

ಆವೃತ್ಯ ತಸ್ಥೌ ಪಂಥಾನಂ ದಿವಾಕರನಿಶಾಭೃತೋಃ ।
ತತೋಽಂಥಮಭವತ್ಸರ್ವೋ ಭೂಲೋಕಃ ಪಾರ್ಥಿವೋತ್ತಮ ॥ ೧೦ ॥

ಪ್ರೇರಿತೋ ದೇವವಾಕ್ಯೇನ ತತೋಽಗಸ್ತ್ಯೋ ಮಹಾತಪಾಃ ।
ಗತ್ವೋವಾಚ ತದಾ ವಿಂಧ್ಯಂ ತೀರ್ಥಯಾತ್ರಾಂ ಕರೋಮ್ಯಹಂ ॥ ೧೧ ॥

ಮತ್ಕೃತೇ ಹ್ರಸ್ವತಾಂ ಗಚ್ಛ ಯೇನ ಯಾಸ್ಯಾಮ್ಯಹಂ ಸುಖೀ ।
ಜ್ಞಾತ್ವಾ ತತಃ ಪ್ರಭಾವಂ ತು ಸೋಽಗಸ್ತ್ಯಸ್ಯ ಮಹಾಗಿರಿಃ ॥ ೧೨ ॥

ಜಗಾಮ ಹ್ರಸ್ವತಾಂ ಶೀಘ್ರಮಗಸ್ತ್ಯೋಽಪಿ ತದಾ ಯಯೌ ।
ದಕ್ಷಿಣಾಶಾಂ ಪರಿತ್ಯಜ್ಯ ನ ಯಾವದಹಮಾಗತಃ ॥ ೧೩ ॥

---

ಪರ್ವತಕ್ಕಿಂತ ಏನೂ ಕಡಿಮೆಯಾದವನಲ್ಲವಾದ್ದರಿಂದ ನನ್ನನ್ನೇ ಪ್ರದಕ್ಷಿಣೆಮಾಡ ಬೇಕೆನ್ನಲು —ಅವರಿಬ್ಬರೂ ಉತ್ತರ ಹೇಳಿದುದೇನೆಂದರೆ —ಅಯ್ಯಾ! ಗಿರಿ ಶ್ರೇಷ್ಠನೇ! ಈ ಜಗತ್ತನ್ನಾರು ಪೂರ್ವದಲ್ಲಿ ಸೃಷ್ಟಿಸಿದನೋ ಆ ಜಗತ್ಸೃಷ್ಟಿಕರ್ತನೇ ಈ ಮೇರುಗಿರಿಯ ಸುತ್ತಲೂ ದಾರಿಯನ್ನು ನಮ್ಮ ಸಂಚಾರಕ್ಕಾಗಿ ಮಾಡಿಕೊಟ್ಟಿರು ವುದರಿಂದ ನಮ್ಮ ಸಂಚಾರಕ್ಕೆ ಅನುಕೂಲವಾದ ದಾರಿಯನ್ನು ಬದಲಾಯಿಸಲಿಕ್ಕಾಗು ವುದಿಲ್ಲವೆಂದು ಉತ್ತರಕೊಟ್ಟನು

೯-೧೦ ಆಗ ವಿಂಧ್ಯಾದ್ರಿಗೆ ಮಹಾಕೋಪಬಂದು ಬ್ರಹ್ಮನನ್ನು ಕುರಿತು ತಪ ಸ್ಸುಮಾಡಿ ದಿನೇದಿನೇ ಬೆಳಯಲಾರಂಭಿಸಿ ಕಡೆಗೆ ದಕ್ಷಿಣದಿಕ್ಕೆಲ್ಲಾ ಆಕಾಶದವರೆಗ ಮುಚ್ಚಿಹೋಗುವಂತೆ ಬಹು ದೊಡ್ಡ ಪ್ರಮಾಣದಿಂದ ಬೆಳೆದು ನಿಂತುಬಿಟ್ಟನು

೧೧ ೧೩. ಆಗ ದೇವತೆಗಳು ಅಗಸ್ತ್ಯರ ಬಳಿಗೆ ಒಂದು ಈ ವೃತ್ತಾಂತವನ್ನು ತಿಳಿಸಿ ಲೋಕೋಪಕಾರ ಮಾಡಬೇಕೆಂದು ಬೇಡಿಕೊಂಡರು ಹಾಗೇ ಆಗಲೆಂದು ಅಗಸ್ತ್ಯರು ಒಪ್ಪಿಕೊಂಡು ವಿಂಧ್ಯರಾಜನ ಬಳಿಗೆ ಬಂದರು. ಆಗ ಗುರುಗಳು ಬಂದು ದನ್ನು ನೋಡಿ ವಿಂಧ್ಯರಾಜನು ನಮಸ್ಕಾರಮಾಡಿದನು. ಆಗ ಅಗಸ್ತ್ಯರು ವಿಂಧ್ಯ ನನ್ನು ಕುರಿತು, ಅಯ್ಯಾ! ನಾನು ತೀರ್ಥಯಾತ್ರೆ ಮಾಡಿಕೊಂಡು ಬರಬೇಕಾಗಿದ ಬಹು ಎತ್ತರವಾಗಿ ಬೆಳದಿರುವ ನಿನ್ನ ಬೆಟ್ಟವನ್ನು ದಾಟಿಕೊಂಡುಹೋಗಲು ಅದ್ದಿ ಯಾಗಿರುವುದರಿಂದ ದಯವಿಟ್ಟು ನಿನ್ನ ಪ್ರಮಾಣವನ್ನು ಕುಗ್ಗಿಸಬೇಕು. ಆಗ ನನ್ನ

ಸಪುತ್ರದಾರಸ್ತಾವತ್ತ್ವಂ ಹ್ರಸ್ವ ಏವ ಭವಾಽಚಲ ।
ಏವಮುಕ್ತ್ವಾ ಸ ವಿಂಧ್ಯಂತು ಸದಾರಾಪತ್ಯಬಾಂಧವಂ ॥ ೧೪ ॥

ಜಗಾಮ ದಕ್ಷಿಣಾಮಾಶಾಂ ತಮುವಾಚ ಪಿತಾಮಹಃ ।
ದೇವಕಾರ್ಯಂ ಮಹದ್ಬ್ರಹ್ಮಂಸ್ತ್ವಯಾ ಕೃತಮಿದಂ ಶುಭಂ ॥ ೧೫ ॥

ತಸ್ಮಾತ್ಸ್ಥಾನಂ ಚ ತೇ ದದ್ಮಿ ವೈಶ್ವಾನರಪಥಾದ್ಬಹಿಃ ।
ದಿವ್ಯದೇಹೋ ಭವಾಂಸ್ತತ್ರ ವಿಮಾನವರಮಾಸ್ಥಿತಃ ॥ ೧೬ ॥

ದಕ್ಷಿಣಾಂ ಭೂಷಯ ದಿಶಮಸ್ತೋದಯಸಮನ್ವಿತಃ ।
ಪ್ರಸಾದಮಂಭಸಾ ಶೈತ್ಯಂ ನಿರ್ವಿಷತ್ವಂ ತಪೋದ ಯೋ ॥ ೧೭ ॥

ಭವಿಷ್ಯತ್ಯಮಲಪ್ರಜ್ಞ ಮತ್ಪ್ರಸಾದಾತ್ತವೈವ ತು ।
ಶರತ್ಸಮುದಿತೋ ಭೂತ್ವಾ ವಸಂತೇಽಸ್ತಮಯಂ ವ್ರಜ ॥ ೧೮ ॥

---

ಪ್ರಯಾಣಕ್ಕೆ ಅನುಕೂಲವಾಗುವುದನ್ನಲ್ಲ, ಅಗಸ್ತ್ಯರ ಪ್ರಭಾವನಂತಹುದೆಂಬು ದನ್ನು ತಿಳಿದಿದ್ದ ಆ ವಿಂಧ್ಯನು ಬಹಳ ಹ್ರಸ್ವವಾಗಿ (ಕುಗ್ಗಿ) ಬಿಟ್ಟನು ಆಗ ಅಗಸ್ತ್ಯರು ಸುಖವಾಗಿ ದಕ್ಷಿಣದಿಕ್ಕಿಗೆ ಬಂದು ಮುಂದಹೋಗುವಾಗ ವಿಂಧ್ಯನನ್ನು ಕುರಿತಿಂತೆಂದರು. ಅಯ್ಯಾ ಗಿರಿರಾಜನೇ! ನಾನು ಯಾವಾಗ ದಕ್ಷಿಣದಿಕ್ಕಿನಿಂದ ಹಿಂತಿರುಗಿಬರುವೆನೋ ಅಲ್ಲಿಯವರಿಗೆ ನೀನು ಇದೇರೀತಿ ಹ್ರಸ್ವನಾಗಿಯೇ ಇದ್ದುಕೊಂಡು ನಿನ್ನ ಪತ್ನೀಪುತ್ರ ಪರಿವಾರದೊಡನೆ ಸುಖವಾಗಿದ್ದುಕೊಂಡಿರೆನಲು ವಿಂಧ್ಯನು ಅವರ ಮಾತಿಗೆ ಒಪ್ಪಿ ಕೊಂಡು ಹಾಗೇ ನಿಂತನು.

೧೫-೨೦ ವಿಂಧ್ಯನು ಕುಗ್ಗಿ ನಿಂತುದನ್ನು ನೋಡಿ ಅಗಸ್ತ್ಯನು ದಕ್ಷಿಣದಿಕ್ಕಿಗೆ ಹೊರಟ ಸಮಯದಲ್ಲಿ ಬ್ರಹ್ಮನು ಆ ಋಷಿಯನ್ನು ಕುರಿತು ಹೇಳಿದುದೇನೆಂದರೆ, ಅಯ್ಯಾ ಅಗಸ್ತ್ಯಮಹರ್ಷಿಯೇ! ಸೂರ್ಯಚಂದ್ರರ ಗತಿಯನ್ನು ಪುನಃ ಕ್ರಮಪಡಿಸಿ ದೇವತೆಗಳಿಗೂ ತ್ರಿಲೋಕಕ್ಕೂ ನೀನು ಮಹೋಪಕಾರ ಮಾಡಿದೆ ಅದಕ್ಕಾಗಿ ಬಹಳ ಸಂತೋಷ. ಈ ನಿನ್ನ ಉಪಕಾರಕ್ಕೋಸ್ಕರ ನಿನಗೊಂದು ದಿವ್ಯನಿವಾಸಸ್ಥಾನವನ್ನು ಅನುಗ್ರಹಿಸುವೆನು ನಿನಗೆ ಆಗ್ನೇಯದಿಕ್ಕಿನ ಹೊರಗಡೆ ಒಂದು ಪ್ರಶಸ್ತವಾದ ಸ್ಥಳ ವನ್ನು ಕಲ್ಪಿಸಿದ್ದೇನೆ ನೀನು ದೇವತಾಯೋಗ್ಯವಾದ ಅಮೃತಶರೀರವನ್ನು ಹೊಂದಿ ಅಲ್ಲಿಗೆ ವಿಮಾನದಮೇಲೆ ಪ್ರಯಾಣಮಾಡು. ಇನ್ನುಮುಂದೆ ನೀನು ಶಾಶ್ವತವಾಗಿ ಅಲ್ಲಿಯೇ ಇದ್ದುಕೊಂಡು ಅಸ್ತೋದಯ (ರಾತ್ರಿ ಹಗಲು) ಗಳನ್ನು ಕಳೆಯುತ್ತಾ ಬಾ

ಪ್ರಾಕಾಮ್ಯಯುಕ್ತಶ್ಚ ತಥಾ ಸಮಗ್ರಾಂ ವಸುಧಾಂ ಚರ ।
ಪ್ರಧಾನಮೂರ್ತಿರ್ಯಾವತ್ತ್ವಂ ಸದಾರಾಪತ್ಯಬಾಂಧವಃ ॥ ೧೯ ॥

ನಾಕ್ರಮಿಷ್ಯತಿ ವೈ ವಿಂಧ್ಯಂ ತಾವದ್ವಿಂಧ್ಯಾಚಲಃ ಸ್ಥಿತಃ ।
ಪ್ರಾಕಾಮ್ಯಮೂರ್ತಿಯುಕ್ತೇ ತು ಯತ್ರ ಕ್ವಚನ ಸಂಸ್ಥಿತೇ ॥ ೨೦ ॥

ತ್ವಯಿ ವಿಂಧ್ಯೋ ಮಹಾಶೈಲೋ ವೃದ್ಧಿಂ ನ ಸ ಗಮಿಷ್ಯತಿ ।
ಇಲ್ವಲಶ್ಚಾಪಿ ದುರ್ಮೇಧಾ ಭ್ರಾತ್ರಾ ವೈ ಮೇಷರೂಪಿಣಾ ॥ ೨೧ ॥

ಯದಾ ಭೋಜಯತೇ ವಿಪ್ರಾನ್ಭಕ್ತವತ್ಸು ದ್ವಿಜಾತಿಷು ।
ಕುಕ್ಷಿಭೇದಂತು ವಾತಾಪೀ ಕೃತ್ವಾ ನಿರ್ಗಚ್ಛತೇ ಪುನಃ ॥ ೨೨ ॥

---

ನೀನು ನಿನ್ನ ಹೆಂಡತಿ ಮಕ್ಕಳೇ ಮುಂತಾದ ಪರಿವಾರಜನರೊಡನೆ ನಿಶ್ಚಿತನಾಗಿ ಅಲ್ಲೇ ಇದ್ದುಬಿಡು. ನಿನಗೆ ಪ್ರಾಕಾಮ್ಯವೆಂಬ ಸಿದ್ಧಿಯನ್ನನುಗ್ರಹಿಸಿರುತ್ತೇನೆ. ಅಷ್ಟೈಶ್ವರ್ಯಗಳಲ್ಲಿ ಪ್ರಾಕಾಮ್ಯವೆಂಬ ಸಿದ್ಧಿಯು ನಿನಗೆ ಬೇಕಾದ ಭೋಗಗಳನ್ನೆಲ್ಲಾ ಇಚ್ಛಾಸಂಕಲ್ಪಮಾತ್ರದಿಂದಲೇ ಒದಗಿಸಿಕೊಡತಕ್ಕುದಾಗಿರುವುದು. ಈ ಪ್ರಾಕಾಮ್ಯಸಿದ್ಧಿಯಿಂದ ನೀನು ಸೂಕ್ಷ್ಮರೂಪಧಾರಿಯಾಗಿ ಭೂಲೋಕದಲ್ಲೆಲ್ಲಾ ಸಂಚರಿಸಬಹುದು. ನಿನ್ನ ಉದಯವು (ಹಗಲು) ಶರದೃತುವಿನಲ್ಲಿಯೂ, ಅಸ್ತವು (ರಾತ್ರಿಯು) ವಸಂತಋತುವಿನಲ್ಲಿಯೂ ಆಗಲಿ. ಈರೀತಿ ಅಸ್ತೋದಯಗಳಿಂದ ಕೂಡಿದ ನೀನು ದಕ್ಷಿಣದಿಕ್ಕಿನಲ್ಲಿಯೇ ಶಾಶ್ವತವಾಗಿ ಇದ್ದುಬಿಡು. ನೀನು ಬರುವವರೆಗೆ ವಿಂಧ್ಯನು ಏಳುವಹಾಗೆಯೇ ಇಲ್ಲ. ಈಗ ಇರುವಹಾಗೆ ಬೆಳೆಯದ ಬಿದ್ದೇಯಿರುವುದರಿಂದ ಸೂರ್ಯಚಂದ್ರರ ಗತಿಗಳಿನ್ನುಮುಂದೆ ಎಂದೆಂದಿಗೂ ಭಂಗಬರಲಾರದು. ಪ್ರಾಕಾಮ್ಯಸಿದ್ಧಿಯಿಂದ ನಿನಗೆ ಯಾವ ದಾರಿಯೂ ಅಪ್ರತಿಹತವಾಗಿಯೇ ಇರುತ್ತದೆ. ನಿನ್ನ ಉದಯಕಾಲದಲ್ಲಿ ತಣ್ಣಗಿರುವ ನೀರು ನಿರ್ದೋಷ (ನಿರ್ವಿಷ) ವಾಗಿರಲಿ. ವಿಂಧ್ಯಮಹಾಪರ್ವತವು ಮುಂದೆ ಮೇಲಕ್ಕೇಳದ (ವೃದ್ಧಿಯಾಗದೆ) ಇರಬೇಕಾದರೆ ನಿನ್ನ ಪುನರಾವೃತ್ತಿರಾಹಿತ್ಯವೇ ಮುಖ್ಯಕಾರಣವೆಂದು ಬ್ರಹ್ಮನು ಅಗಸ್ತ್ಯರೊಡನೆ ಹೇಳಿದನು.

## ಇಲ್ವಲ ವಾತಾಪಿಗಳ ಕಥೆ.

೨೧-೨೨. ಬ್ರಹ್ಮನು ಅಗಸ್ತ್ಯರನ್ನು ಕುರಿತು ಹೇಳುತ್ತಾನೆ,—ಇಲ್ವಲ ವಾತಾಪಿಗಳೆಂಬ ಇಬ್ಬರುರಾಕ್ಷಸರಿದ್ದರು. ಇಲ್ವಲನೆಂಬುವನು ತನ್ನ ಭ್ರಾತೃವಾದ ವಾತಾಪಿಯನ್ನು ಒಂದುಕುರಿಯಹಾಗೆ ಮಾಡಿಕೊಂಡು ತಿರುಗುತ್ತಾ ದಿನದಿನವೂ ಅದನ್ನು ಕೊಂದು ಅದರ

ಏವಂ ವಿನಿಷ್ಕೃತಸ್ತಸ್ಯ ಬ್ರಾಹ್ಮಣಾನ್ಯಸ್ತ್ವಯಾ ಕೃತಂ ।
ಶರಣಂ ತೇನ ತುಷ್ಟೋಽಸ್ಮಿ ವಿಂಧ್ಯಸಂಸ್ತಂಭನೇನ ಚ ॥ ೨೩ ॥

ಶರತ್ಸಮಯಮಾಸಾದ್ಯ ಯಸ್ಮಾದ್ವಿಪ್ರ ನವೋದಯೇ ।
ಪೂಜಾಂ ತ್ವಮಾಪ್ಸ್ಯಸೇ ಲೋಕೇ ಮತ್ಪ್ರಸಾದಾದ್ದ್ವಿಜೋತ್ತಮ ॥ ೨೪ ॥

ಯೇ ಚ ತ್ವಾಂ ಪೂಜಯಿಷ್ಯಂತಿ ಗಂಧಮಾಲ್ಯಫಲಾಕ್ಷತೈಃ ।
ದಧಿಕಾಂಚನರತ್ನೈಶ್ಚ ಪರಮಾನ್ನೇನ ಭೂರಿಣಾ ॥ ೨೫ ॥

ಪೂರ್ಣಕುಂಭೈಃ ಸಕೂಷ್ಮಾಂಡೈಶ್ಚೈಕ್ರೋಪಾನಹಯಷ್ಟಿಭಿಃ ।
ಧೇನ್ವಾ ವೃಷೇಣ ಭಕ್ಷ್ಯೈಶ್ಚ ವಾಸೋಭಿಃ ಕನಕೇನ ಚ ॥ ೨೬ ॥

---

ಮಾಂಸದಿಂದ ಅಡಿಗೆಯನ್ನು ಮಾಡಿಸಿ ಯಾರಾದರೂ ಬ್ರಾಹ್ಮಣರನ್ನು ಕರೆದು ಭೋಜನ ಮಾಡಿಸುತ್ತಿದ್ದನು. ಆ ಬ್ರಾಹ್ಮಣರು ಊಟಮಾಡಿ ವಾತಾಪಿಯ ಮಾಂಸವನ್ನು ಭುಜಿಸಿದೊಡನ ಇಲ್ವಲನು ವಾತಾಪಿ! ಈಚೆಗೆ ಬಾ! ಎಂದು ಕೂಗುತ್ತಿದ್ದನು ಆ ಧ್ವನಿಗೆ ಕಿವಿಗ ಬಿದ್ದೊಡನೆಯೇ ವಾತಾಪಿಯು ತನ್ನನ್ನು ತಿಂದ ಬ್ರಾಹ್ಮಣರ ಹೊಟ್ಟೆಯನ್ನು ಸೀಳಿಕೊಂಡು ಈಚೆಗೆ ಬಂದು ಬಿಡುತ್ತಲಿದ್ದನು ಹೀಗೆ ಅವರಿಬ್ಬರು ದುಷ್ಟ ರಾಕ್ಷಸರೂ ಅನೇಕ ಮಂದಿ ಬ್ರಾಹ್ಮಣರನ್ನು ವಧಮಾಡಿಬಿಟ್ಟಿದ್ದರು ಎಲೈ ಅಗಸ್ತ್ಯನೆ! ನೀನೂ ಒಂದು ಬಾರಿ ಅವರ ಕೈಗೆ ಸಿಕ್ಕಿಹೋದೆ. ನಿನಗೂ ಯಥಾ ಪ್ರಕಾರ ವಾತಾಪಿಯ ಮೇಷ ಮಾಂಸವನ್ನು ಬಡಿಸಿ ಆ ಮಾಂಸವು ಹೊಟ್ಟೆಗೆ ಬಿದ್ದೊಡನೆಯೇ, ವಾತಾಪಿ! ಈಚೆಗೆ ಬಾ! ಎಂದು ಇಲ್ವಲನು ಕೂಗಿ ಕರೆದಾಗ ನೀನು ವಾತಾಪಿ! ಜೀರ್ಣೋಭವ ಎಂದು ಹೇಳಿಬಿಟ್ಟೆ ಆ ಕೂಡಲೆ ವಾತಾಪಿಯು ನಿನ್ನ ಹೊಟ್ಟೆಯಲ್ಲಿ ನಿಜವಾಗಿ ಜೀರ್ಣವಾಗಿಯೇ ಹೋಗಲು ಅಂದಿನಿಂದ ಬ್ರಾಹ್ಮಣರೆಲ್ಲರೂ ಬದುಕಿಕೊಂಡರು. ಇಲ್ವಲನು ಇಲ್ಲವಾದನು. ಎಲೈ ಅಗಸ್ತ್ಯನೆ! ವಿಂಧ್ಯನನ್ನು ಸ್ತಂಭಿಸಿ ಬಗ್ಗಿಸಿದಂತೆ ದುಷ್ಟ ರಕ್ಕಸನಾದ ವಾತಾಪಿಯನ್ನೂ ನೀನು ನಿಗ್ರಹಿಸಿ ಲೋಕವನ್ನು ಕಾಪಾಡಿರುತ್ತೀಯೆ!

೨೪. ಇಂತಹ ಲೋಕೋಪಕಾರಿಯಾದ ನಿನಗೆ ನಾನು ವರವನ್ನು ಕೊಡುತ್ತೇನೆ ಶರದೃತುವು ಪ್ರಾಪ್ತವಾದ ಬಳಿಕ ನಿನ್ನನ್ನು ಯಾರು ಪ್ರತಿದಿನವೂ ಸೂರ್ಯೋದಯಕಾಲದಲ್ಲಿ ಪೂಜಿಸುವರೋ ನನ್ನ ಅನುಗ್ರಹದಿಂದ ಅವರು ಸಕಲ ಸಂಪತ್ತನ್ನೂ ಹೊಂದುತ್ತಾರೆ

೨೫-೨೯. ಯಾರಾದರೆ ನಿನ್ನನ್ನು ಗಂಧ, ಹೂವು, ಹಣ್ಣು, ಅಕ್ಷತೆಯೇ

ಸಂವತ್ಸರಂ ಚ ತ್ಯಾಗೇನ ಫಲಸ್ಯೈಕಸ್ಯ ಚಾಪ್ಯಥ ।
ಪೂಜನೈರ್ಬ್ರಾಹ್ಮಣೇಂದ್ರಾಣಾಂ ತ್ವತ್ಕರ್ಮಪರಿಕೀರ್ತನೈಃ ॥ ೨೭ ॥

ತೇ ಪ್ರಾಪ್ಸ್ಯಂತಿ ಸದಾ ಪುತ್ರಾನ್ ಧನಮಾರೋಗ್ಯಮೇವ ಚ ।
ಆಯುರಗ್ರ್ಯಂ ತಥಾ ಲೋಕೇ ಶತ್ರುಭಿಶ್ಚಾಪರಾಜಯಂ ॥ ೨೮ ॥

ಸೌಭಾಗ್ಯಂ ವಿಪುಲಾನ್ಕಾಮಾನ್ ಧರ್ಮವೃದ್ಧಿಂ ತಥೈವ ಚ ।
ಏವಮುಕ್ತ್ವಾ ಸ ಭಗವಾಂಸ್ತತ್ರೈವಾಂತರಧೀಯತ ॥ ೨೯ ॥

ಅಸಸಾದ ತಥಾ ಸ್ಥಾನಮಗಸ್ತ್ಯೋಽಪಿ ಮಹಾತಪಾಃ ।
ಯೇನ ಕ್ರತುಶತೈರಿಷ್ಟಂ ತಪಸ್ತಪ್ತಂ ತಥಾ ಮಹತ್ ॥ ೩೦ ॥

---

ಮುಂತಾದುವುಗಳಿಂದ ಪೂಜಿಸುವರೋ ಮತ್ತು ಮೊಸರು, ಚಿನ್ನ, ರತ್ನಗಳನ್ನೂ ಪಾಯಸವನ್ನೂ ನಿನ್ನ ಪ್ರೀತಿಯಾಗಿ ದಾನಮಾಡುವರೋ, ಪೂರ್ಣಕುಂಭದಾನ, ಕೂಷ್ಮಾಂಡದಾನ, ಛತ್ರಪಾದುಕಾದಿದಾನ, ಚಿತ್ತದದಾನ, ಗೋದಾನ, ವೃಷಭದಾನ, ಭಕ್ಷ್ಯದಾನ, ವಸ್ತ್ರದಾನ, ಸುವರ್ಣದಾನಗಳನ್ನು ನಿನಗೆ ಪ್ರೀತಿಯಾಗಲೆಂದು ಯಾರು ಒಂದು ವರ್ಷಕಾಲ ದಾನಮಾಡುವರೋ ಅಥವಾ ಒಂದು ತಿಂಗಳು ಮಾತ್ರವೇ ದಾನ ಮಾಡುವರೋ, ಮತ್ತು ಬ್ರಾಹ್ಮಣ ಸಮಾರಾಧನೆಯನ್ನು ಮಾಡಿ ನಿನ್ನ ನಾಮ ಗಳನ್ನು ಸಂಕೀರ್ತನೆಮಾಡುವರೋ, ಅಂಥವರಿಗೆ ಪುತ್ರ ಪೌತ್ರ ಧನ ಧಾನ್ಯ ಸಂಪ ತ್ತಿಯೂ ಆಯುರಾರೋಗ್ಯೈಶ್ವರ್ಯಾಭಿವೃದ್ಧಿಯೂ ಶತ್ರುನಿಗ್ರಹವೂ ಉಂಟಾಗಿ ಅಂತಹ ಮಹಾನುಭಾವನು ಸೌಭಾಗ್ಯವನ್ನೂ, ಮನಸ್ಸಿನ ಕೋರಿಕೆಗಳನ್ನೂ, ಧರ್ಮ ವೃದ್ಧಿಯನ್ನೂ ಹೊಂದುವನೆಂದು ಅಗಸ್ತ್ಯರೊಡನೆ ಹೇಳಿ ಬ್ರಹ್ಮನು ಅಲ್ಲಿಯೇ ಅಂತ ರ್ಧಾನನಾದನು (ಕಣ್ಣಿಗೆ ಕಾಣಿಸದ ಮರೆಯಾದನು )

೩೦-೩೩ ಆ ಬಳಿಕ ಮಹಾತಪಸ್ವಿಯಾದ ಅಗಸ್ತ್ಯನೂ ಸಹ ತನ್ನ ಸ್ಥಾನ ವನ್ನು ಕುರಿತು ತೆರಳಿದನು ಇಂತಹ ಮಹಾಪ್ರಭವಶಾಲಿಯಾದ ಅಗಸ್ತ್ಯ ಮಹರ್ಷಿಯು ನೂರು ಯಜ್ಞಗಳನ್ನು ಮಾಡಿದ್ದನು. ಅವನು ಮಾಡಿದ ತಪಸ್ಸಿ ಗಂತೂ ಲೆಕ್ಕವೇ ಇಲ್ಲ. ಮತ್ತು ಈ ಅಗಸ್ತ್ಯಋಷಿಯು ತನ್ನ ತಪೋಬಲದಿಂದಲೇ ಪ್ರಿಯಂವದಯಾದ ಲೋಪಾಮುದ್ರೆಯನ್ನು ನಿರ್ಮಾಣಮಾಡಿದನು ಈ ಲೋಪಾ ಮುದ್ರೆಯು ವಿದರ್ಭರಾಜನ ಮನೆಯಲ್ಲಿ ಬೆಳೆದು ಅವನ ಕುಮಾರಿಯಾದಳು ವಿದರ್ಭರಾಜನು ಈ ಲೋಪಾಮುದ್ರೆಯನ್ನು ಅಗಸ್ತ್ಯರಿಗೇ ಕೊಟ್ಟು ವಿಧಿವಿಹಿತವಾಗಿ

ತೇನ ಸ್ವತಪಸಾ ಸೃಷ್ಟ್ವಾ ಲೋಪಮುದ್ರಾ ಪ್ರಿಯಂವದಾ ।
ವಿದರ್ಭರಾಜತನಯಾ ಧರ್ಮಪತ್ನೀ ತಥಾತ್ಮನಃ ॥ ೩೧ ॥

ದೃಢಸ್ಯುಸ್ತನಯಸ್ತಸ್ಯ ತಪಸ್ವೀ ಚ ಮಹಾತಪಾಃ ।
ಪ್ರಮುಚುರ್ಮುಮುಚುಶ್ಚೈವ ತನ್ಮುಚುಶ್ಚ ಮಹಾತಪಾಃ ॥ ೩೨ ॥

ಸ್ವಸ್ತ್ಯಾತ್ರೇಯಸ್ತಥಾ ವಿದ್ವಾಂಸ್ತಸ್ಯ ಶಿಷ್ಯೋ ಮಹಾತ್ಮನಃ ।
ಅಭೇದ್ಯಂ ಕವಚಂ ದತ್ತಂ ತಥಾಕ್ಷಯ್ಯೇ ಮಹೇಷುಧೀ ॥ ೩೩ ॥

ರಾಮಲಕ್ಷ್ಮಣಯೋಸ್ತೇನ ಧನುಷೀ ಚ ಮಹಾಬಲೇ ।
ಘೋರೇಣಾವ್ಯಥ ಸಂಯುಕ್ತಃ ಸ ಚ ವೈಷ್ಣವತೇಜಸಾ ॥ ೩೪ ॥

ಕರ್ಮಣಾಂ ಕೀರ್ತನಂ ಯಸ್ಯ ನರೋ ವರ್ಷಶತೈರಪಿ ।
ಕರ್ತುಂ ಶಕ್ತೋ ನ ಸಹತೇ ಪ್ರಾಕಾಮ್ಯೇ ಚೈವ ರಾವಣೇ ॥ ೩೫ ॥

ಅಯೋಧ್ಯಾಂ ರಾಘವಂ ದ್ರಷ್ಟುಂ ಜಗಾಮ ತ್ವರಿತೋ ಮುನಿಃ ।
ತಮಾಗತಮಭಿಪ್ರೇಕ್ಷ್ಯ ಪೂಜಯಾಮಾಸ ರಾಘವಃ ॥ ೩೬ ॥

---

ದಾನಮಾಡಿದನು ಈ ಅಗಸ್ತ್ಯನ ಮಗನೇ ದೃಢಸ್ಯುಮಹರ್ಷಿ ಈ ಅಗಸ್ತ್ಯ ನಿಗೆ ಅನೇಕ ಮಂದಿ ಶಿಷ್ಯರಿದ್ದರು ಅವರಲ್ಲಿ ಕೆಲವರ ಹೆಸರನ್ನು ಇಲ್ಲಿ ಒರೆಯು ತ್ತೇವೆ —ಪ್ರಮುಚು, ಮುಮುಚು, ತನ್ಮುಚು, ಸ್ವಸ್ತ್ಯಾತ್ರೇಯ ಇವರೇ ಮುಖ್ಯ ರಾದ ಶಿಷ್ಯರು

೩೪-೩೫ ಹಿಂದೆ ರಾಮನಿಗೂ ರಾವಣನಿಗೂ ಪ್ರಾಪ್ತವಾದ ಯುದ್ಧಸಮಯ ದಲ್ಲಿ ರಾವಣ ಸಂಹಾರಾರ್ಥವಾಗಿ ಅಗಸ್ತ್ಯರು ಅಭೇದ್ಯವಾದ ಕವಚವನ್ನೂ, ಅಕ್ಷಯ ಬಾಣಗಳುಳ್ಳ ಬತ್ತಲಿಕೆಯನ್ನೂ, ಬಹು ಬಲವಾದ ಧನುಸ್ಸನ್ನೂ ಸಹ ರಾಮ ಲಕ್ಷ್ಮಣರಿಬ್ಬರಿಗೂ ಅನುಗ್ರಹಿಸಿಕೊಟ್ಟರು ಆ ಸಮಯಲ್ಲಿ ಶ್ರೀರಾಮನು ಭಯಂ ಕರವಾದ ವೈಷ್ಣವ ತೇಜೋವಿಶಿಷ್ಟನಾಗಿ ರಾವಣ ಸಂಹಾರಕ್ಕೋಸ್ಕರವಾಗಿ ಎಂತೆಂತಹ ಕೆಲಸವನ್ನು ಕಷ್ಟದಿಂದ ಮಾಡಿದನೆಂಬುದನ್ನು ಹೇಳಬೇಕಾದರೆ ನೂರು ವರ್ಷ ವಾದರೂ ಸಾಲುವುದಿಲ್ಲ ಪ್ರಾಕಾಮ್ಯಾದಿಸಿದ್ಧಿಗಳನ್ನು ಪಡೆದಿದ್ದ ರಾವಣನ ತಲೆ ಗಳನ್ನು ಕತ್ತರಿಸುವುದಕ್ಕೆ ಸಾಧ್ಯವಾಗುತ್ತಿತ್ತೆ ?

೩೬-೩೮. ಒಂದಾನೊಂದು ಸಮಯದಲ್ಲಿ ಈ ಅಗಸ್ತ್ಯಋಷಿಗಳು ಅಯೋಧ್ಯಾ

ಪಾದ್ಯಾರ್ಘ್ಯಾಚಮನೀಯಾದ್ಯೈಃ ಸರ್ವೈ ರಾಜ್ಯನಿವೇದನೈಃ ।
ಸಂಪೂಜಿತಸ್ತದಾ ತೇನ ತತ್ರ ಚಕ್ರೇ ಕಥಾಃ ಶುಭಾಃ ॥ ೩೭ ॥

ತತಃ ಕಥಾಂತೇ ಕಸ್ಮಿಂಶ್ಚಿತ್ತಮಪೃಚ್ಛತ್ತು ರಾಘವಃ ।
ವಿಷ್ಣುನಾ ಮಾಲಿನಿಧನಂ ತೇನೋಕ್ತಂ ತಸ್ಯ ತಚ್ಛೃಣು ॥ ೩೮ ॥

ಯದುಕ್ತವಾನ್ರಾಘವನಂದನಸ್ಯ
ಚಂದ್ರಾರ್ಕವಹ್ನಿಪ್ರತಿಮಪ್ರಭಾವಃ ।

---

ಪಟ್ಟಣದಲ್ಲಿದ್ದ ಶ್ರೀರಾಮನನ್ನು ನೋಡುವುದಕ್ಕೆ ಅವಸರವಸರವಾಗಿ ಬಂದರು ಈ ರೀತಿ ಬಂದ ಅಗಸ್ತ್ಯರಿಗೆ ಶ್ರೀರಾಮನು ಅರ್ಘ್ಯಾದಿ ಪೂಜೆಗಳಿಂದ ಸತ್ಕರಿಸಿ ನಮಸ್ಕರಿಸಿದನು ಆಗ ಅಗಸ್ತ್ಯರು ರಾಮನಿಗೆ ಅನೇಕ ಮನೋಹರವಾದ ಮಂಗಳಕರವಾದ ಕಥೆಗಳನ್ನು ಹೇಳಿದರು. ಹೀಗೆ ಕಥೆಗಳನ್ನು ಹೇಳುತ್ತಿದ್ದ ಸಮಯದಲ್ಲಿ ರಾಮನು, ಮಾಲಿಯೆಂಬ ರಾಕ್ಷಸನು ಮಹಾವಿಷ್ಣುವಿನಿಂದ ಹತನಾದ ಒಂದು ಕಥೆಯನ್ನು ವಿಸ್ತಾರವಾಗಿ ಅಗಸ್ತ್ಯಋಷಿಯ ಮುಖದಿಂದ ಕೇಳಿದನು

೩೯ ಸೂರ್ಯಚಂದ್ರಾಗ್ನಿಗಳ ತೇಜಸ್ಸಿನಂತೆ ಮಹಾಪ್ರಭಾವದಿಂದೊಡಗೂಡಿದ ಮಹಾತ್ಮನಾದ ಅಗಸ್ತ್ಯಮಹರ್ಷಿಯು ಪರಬ್ರಹ್ಮ ಸ್ವರೂಪನಾದ ಶ್ರೀರಾಮಚಂದ್ರ ಪರಮಾತ್ಮನಿಗೋಸ್ಕರ, ರಾಕ್ಷಸ ಕುಲನಾಯಕನಾದ ಮಾಲಿಯು ಮಹಾವಿಷ್ಣುವಿನಿಂದ ಹೇಗೆ ಹತನಾದನೆಂಬ ಕಥೆಯನ್ನು ಹೇಗೆ ಹೇಳಿದನೋ ಅದೇ ಕಥೆಯನ್ನು ನಿನಗೆ ನಾನು ಈಗ ಹಾಗೆಯೇ ಹೇಳುತ್ತೇನೆ ಕೇಳಯ್ಯ ! ವಜ್ರರಾಜ,

ರಕ್ಷೋ ಗಣೇಶಸ್ಯ ವಧಂ ಸುಘೋರಂ
ಮುನಿರ್ಮಹಾತ್ಮಾ ತದಿದಂ ನಿಬೋಧ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ನಾರಾಯನವಾಕ್ಯೇ ಶೈಲೂಷಂ ಪ್ರತಿ
ನಾರಾಯನೋಕ್ತಾಗಸ್ತ್ಯಮಾಹಾತ್ಮ್ಯವರ್ಣನೋ
ನಾಮ ತ್ರಯೋದಶೋತ್ತರ ದ್ವಿಶತತಮೋಽಧ್ಯಾಯಃ.

---

ಎಂಬುದಾಗಿ ಮಾರ್ಕಂಡೇಯನು ಹೇಳಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ನಾರಾಯನ ಋಷಿಯ ವಾಕ್ಯಾವಸರದಲ್ಲಿ ಅಗಸ್ತ್ಯ
ಮಹಾತ್ಮ್ಯ ವರ್ಣನೆಯೆಂಬ ಹೆಸರಿನ ಇನ್ನೂರ
ಹದಿಮೂರನೆಯ ಅಧ್ಯಾಯವು
ಮುಗಿದುದು



ಶ್ರೀಃ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುರ್ದಶೋತ್ತರ ದ್ವಿಶತತಮೋಧ್ಯಾಯಃ ॥

॥ ಅಗಸ್ತ್ಯ ಉವಾಚ ॥

ಮಾಲೀ ಸುಮಾಲೀ ರಾಜೇಂದ್ರ ಮಾಲ್ಯವಾಂಶ್ಚ ರಣೋತ್ಕಟಃ ।
ಲಂಕಾದುರ್ಗಮಥಾಸಾದ್ಯ ಚಿತ್ರಮೂಷುಃ ಪರಸ್ಪರಂ ॥ ೧ ॥

ಮಾಲೀ ಸುಮಾಲೀ ದುರ್ವೃತ್ತೌ ಪೀಡಯಂತೌ ಚ ದೇವತಾಃ ।
ವಾರ್ಯಮಾಣಾವಪಿ ಸದಾ ತೇನ ಮಾಲ್ಯವತಾ ನೃಪ ॥ ೨ ॥

ತಯೋರ್ಭೀತೈಃ ಸುರೈರ್ಬ್ರಹ್ಮಾ ಜ್ಞಾಪಿತಃ ಸಂಪ್ರಯೋಜನಂ ।
ಬ್ರಹ್ಮಣಾ ಸಹಿತೈರ್ಗತ್ವಾ ಜ್ಞಾಪಿತಸ್ತ್ರಿಪುರಾಂತಕಃ ॥ ೩ ॥

---

### ಇನ್ನೂರ ಹದಿನಾಲ್ಕನೆಯ ಅಧ್ಯಾಯವು.

೧. ಅಗಸ್ತ್ಯರು ಶ್ರೀರಾಮನನ್ನು ಕುರಿತು ಹೇಳುತ್ತಾರೆ —ಎಲೈ ರಾಜ ಶ್ರೇಷ್ಠನೇ! ಕೇಳು ಮಾಲಿ-ಸುಮಾಲಿ-ಮಾಲ್ಯವಂತರೆಂಬ ಹೆಸರಿನ ಮೂವರು ಅಣ್ಣ ತಮ್ಮಂದಿರೂ ಸಹ ಲಂಕಾರಾಜ್ಯದಲ್ಲಿ ಪರಸ್ಪರ ವಿಚಿತ್ರ ರೀತಿಯಲ್ಲಿ ವಾಸ ಮಾಡುತ್ತಿದ್ದರು

೨ ಇವರು ಮೂವರಲ್ಲಿ ಮಾಲೀ ಸುಮಾಲಿಗಳೆಂಬುವರಿಬ್ಬರೂ ಮಹಾ ದುಷ್ಟರಾಗಿ ದೇವತೆಗಳನ್ನು ಪದೇ ಪದೇ ಪೀಡಿಸುತ್ತಲೇ ಇದ್ದರು ಮಾಲ್ಯವಂತನು ಯೋಗ್ಯನಾಗಿದ್ದುದರಿಂದ ತನ್ನ ಅಣ್ಣಂದಿರ ನಡತೆಯನ್ನು ಖಂಡಿಸುತ್ತಾ, ಹೀಗೆ ಮಾಡುವುದು ನಿಮಗೆ ಯೋಗ್ಯವಲ್ಲವೆಂದು ಎಷ್ಟೋ ಬಾರಿ ತಡೆಯುತ್ತಿದ್ದನು

೩. ಈ ಈರ್ವರು ರಾಕ್ಷಸರ ಹಿಂಸೆಯನ್ನು ತಡೆಯಲಾರದ ದೇವತೆಗಳು ಬ್ರಹ್ಮನ ಒಳಗೆ ಹೋಗಿ ತಮ್ಮ ಕಷ್ಟವನ್ನು ಹೇಳಿಕೊಂಡರು ಆಗ ಬ್ರಹ್ಮನು

ಬ್ರಹ್ಮೇಶ ಸಹಿತಾ ದೇವಾ ವಿಷ್ಣುಂ ಶರಣಮೀಯುಷಃ ।
ಜಗ್ಮುರ್ಲವಣತೋಯಸ್ಥಂ ವಿಜ್ಞಾಪಯಿತುಮುದ್ಯತಂ ॥ ೪ ॥

ದದೃಶುಶ್ಚ ರಘುಶ್ರೇಷ್ಠ ಸಮುದ್ರಂ ಪೀತಮಂಭಸಾಂ ।
ಊರ್ಮಿವರ್ಗೈಃ ಪ್ರನೃತ್ಯದ್ಭಿರ್ವಲ್ಗಂತಮಿವ ವಾಯುನಾ ॥ ೫ ॥

ಹಸಂತಮಿವ ಫೇನೋಘೈಃ ಸ್ಖಲಂತಂ ಕಂದರಾಸು ಚ ।
ಅಪಾರಮಿವ ಗರ್ಜಂತಂ ನಾನಾಯಾದೋಗಣಾವೃತಂ ॥ ೬ ॥

ವೀಚಿಹಸ್ತೈಃ ಪ್ರಚಲಿತೈರಾಹ್ವಯಾನಮಿವಾಮರಾನ್ ।
ಫೇನವತ್ಯಃ ಪ್ರಕೀರ್ಣಾಶ್ಚ ಸಂಹತಾಶ್ಚ ಸಮುಚ್ಛ್ರಿತಾಃ ॥ ೭ ॥

---

ದೇವತೆಗಳನ್ನು ಜತೆಯಲ್ಲಿ ಕರೆದುಕೊಂಡು ಈಶ್ವರನ ಬಳಿಗೆ ಬಂದನು

೪ ಆಗ ಈಶ್ವರನು ಬ್ರಹ್ಮನನ್ನೂ ದೇವತಗಳನ್ನೂ ತನ್ನ ಜತೆಯಲ್ಲಿ ಕರೆದುಕೊಂಡವನಾಗಿ ಮಹಾವಿಷ್ಣುವಿನ ಸಮೀಪಕ್ಕೆ ಬಂದನು ಆಗ ಮಹಾವಿಷ್ಣುವು ಲವಣಸಮುದ್ರದಲ್ಲಿ ವಾಸವಾಗಿದ್ದನು ದೇವರ್ಕಳೂ, ಬ್ರಹ್ಮೇಶ್ವರರೂ ತನ್ನ ಬಳಿಗೆ ಬಂದು ವಿಜ್ಞಾಪಿಸಿಕೊಂಡ ವಿಚಾರವನ್ನು ಭಗವಾನ್ ಮಹಾವಿಷ್ಣುವು ಕೇಳಿದನು

೫-೬ ಆ ಮಹಾವಿಷ್ಣುವನ್ನು ನೋಡುವುದಕ್ಕೆ ಆ ದೇವತೆಗಳೆಲ್ಲರೂ ಬಂದಿದ್ದ ಆ ಸಮಯದಲ್ಲಿ, ನಾನು ಆಕ್ರೋಶನವಾಗಿ ಕುಡಿದಿದ್ದ ಆ ಸಮುದ್ರವು ಹೇಗಿದ್ದಿತೆಂಬುವನ್ನು ವಿವರಿಸುವೆನು ಕೇಳೈ ರಘುರಾಮ ! ರಾಜಲಲಾಮ ! ಅಲೆಗಳ ಚಂಚಲ ಗತಿಯನ್ನು ನೋಡಿದರೆ, ನರ್ತನಮಾಡುತ್ತಲಿವೆಯೋ ಎಂಬಂತೆ ಕಾಣುತ್ತಿತ್ತು ಆ ಅಲೆಗಳ ಕುಣಿತವನ್ನು ವಾಯುವು ಹಾರಿಸುತ್ತಿರುವುದನ್ನು ನೋಡಿ ನೊರೆಗಳು ಗೇಲಿ (ಹಾಸ್ಯ) ಮಾಡುತ್ತಲಿರುವಂತೆಯೂ, ಆ ಅಪಹಾಸ್ಯವನ್ನು ತಡೆಯಲಾರದೆ ಆ ನೊರೆಗಳು ದೂರದೂರಕ್ಕೆ ಕೊಚ್ಚಿಹೋಗಿ ಗುಹೆಗಳಲ್ಲಿ ಹೋಗಿ ಹುಗಿದುಕೊಳ್ಳುತ್ತಿರುವಂತೆಯೂ, ಈ ನೊರೆಯ ಈ ವಿಧವಾದ ಅವಸ್ಥೆಯನ್ನು ನೋಡಿ ನೀರಿನೊಳಗೆ ವಾಸಮಾಡುವ ಜಲಚರ ಪ್ರಾಣಿಗಳು ತುದಿಮೊದಲಿಲ್ಲದೆ ಕೂಗಿಕೊಳ್ಳುತ್ತಲಿರುವಂತೆಯೂ ಕಾಣುತ್ತಲಿತ್ತು,

೭-೮. ಸಮುದ್ರತೀರದಲ್ಲಿರುವ ಮಹಾಮಹಾಪರ್ವತಗಳ ಬಳಿಗೆ ಪದೇಪದೇ

ಊರ್ಮಯಶ್ಚಾಸ್ಯ ದೃಶ್ಯಂತೇ ಚಲಂತ ಇವ ಪರ್ವತಾಃ ।
ತಿಮಿಂಗಿಲಾಃ ಕಚ್ಛಪಾಶ್ಚ ತಥಾ ತಿಮಿತಿಮಿಂಗಿಲಾಃ ॥ ೮ ॥

ಮಕರಾಶ್ಚಾಪಿ ದೃಶ್ಯಂತೇ ಜಲೇ ಮಗ್ನಾ ಇವಾದ್ರಯಃ ।
ಶಂಖಾನಾಂ ಚ ಸಹಸ್ರಾಣಿ ಮಗ್ನಾನ್ಯಪ್ಸು ಸಮಂತತಃ ॥ ೯ ॥

ದೃಶ್ಯಂತೇ ಸ್ಮ ಯಥಾ ರಾತ್ರೌ ತಾರಾಸ್ತನ್ವಭ್ರಸಂವೃತಾಃ ।
ಕ್ವಚಿತ್ಸುಪ್ತೈಃ ಕ್ವಚಿದ್ಗರ್ಜದ್ಭಿಃ ಕ್ವಚಿದ್ಘೂರ್ಣದ್ಭಿಃ ಕ್ವಚಿತ್ಸ್ಖಲ ॥ ೧೦ ॥

ಕ್ಷೀಬೋಪಮಂ ತಂ ದದೃಶುಃ ಸಮುದ್ರಂ ತ್ರಿದಶಾಧಿಪಾಃ ।
ಕ್ವಚಿಚ್ಚಾವಾಸಿತೈರ್ದೈತ್ಯೈಃ ಕ್ವಚಿದ್ದೈತ್ಯಾರಿಣಾ ತಥಾ ॥ ೧೧ ॥

---

ಬಂದು ವಾಯುವೇಗದಿಂದ ಹೊಡಯಲ್ಪಡುತ್ತಲಿರುವ, ಬಹು ಎತ್ತರವಾಗಿ ನಿಂತಿರುವ ಆ ಪರ್ವತಗಳ ಬುಡದಲ್ಲಿ ಕಾಣಿಸುತ್ತಲಿರುವ ದೊಡ್ಡ ದೊಡ್ಡ ಅಲೆಗಳು ನೊರೆನೊರೆಯಾಗಿ ಎತ್ತೆತ್ತಲೂ ಹರಡಿಕೊಂಡಿರುವುದನ್ನು ನೋಡಿದರೆ ದೇವಲೋಕದಲ್ಲಿರುವ ದೇವತೆಗಳನ್ನು ಕೈಬೀಸಿ ಬೀಸಿ ಕರೆಯುತ್ತಿರುವಂತೆ ಬಹು ಸೊಗಸಾಗಿ ಕಾಣಿಸುತ್ತಲಿತ್ತು ಆ ಸಮುದ್ರದಲ್ಲಿ ಸಂಚರಿಸುತ್ತಲಿರುವ ದೊಡ್ಡದೊಡ್ಡ ಆಮೆಗಳನ್ನೂ, ಮೀನುಗಳನ್ನೂ ತಿಮಿತಿಮಿಂಗಿಲಗಳನ್ನೂ ನೋಡಿದರೆ ನೀರಿನಲ್ಲಿ ದೊಡ್ಡ ದೊಡ್ಡ ಪರ್ವತಗಳು ನಡೆದುಕೊಂಡು ಹೋಗುತ್ತಿವೆಯೋ ಎಂಬಂತೆ ತೋರುತ್ತಿತ್ತು

೯-೧೦ ಮತ್ತು ಸಮುದ್ರದಲ್ಲಿ ಯಾವಾಗಲೂ ಮುಳುಗಿಕೊಂಡೇ ಇರುವ ದೊಡ್ಡ ದೊಡ್ಡ ಮೊಸಳೆಗಳನ್ನೂ, ಸಹಸ್ರಾರು ಶಂಖಗಳನ್ನೂ ನೋಡಿದರೆ ದೊಡ್ಡ ದೊಡ್ಡ ಬೆಟ್ಟಗಳು ಸಮುದ್ರದಲ್ಲಿ ಮುಳುಗಿರುವಂತಯೂ ಕಾಣುತ್ತಿತ್ತು ಅನೇಕಾನೇಕವಾದ ಜಲಚರ ಪ್ರಾಣಿಗಳು ಕೆಲವೆಡೆ ಮಲಗಿರುವುದನ್ನೂ, ಕೆಲವು ಕಡೆ ಗರ್ಜಿಸುತ್ತಿರುವುದನ್ನೂ, ಕೆಲವು ಕಡೆ ಸುತ್ತುತ್ತಿರುವುದನ್ನೂ, ಮತ್ತೆ ಕೆಲವು ಕಡೆ ಜಾರುತ್ತಿರುವುದನ್ನೂ ನೋಡಿದರೆ ಅನಂತವಾದ ಆಕಾಶದಲ್ಲಿ ಬಹು ಸೂಕ್ಷ್ಮವಾಗಿ ಕಂಡು ಕಾಣದಂತೆ ಚಿತ್ರವಿಚಿತ್ರವಾಗಿ ತೋರಿ, ಜಾರಿ, ಹಾರಿ, ಸುತ್ತು ಸುತ್ತಿ ಕಾಣುತ್ತಲಿರುವ ನಾನಾವಿಧ ನಕ್ಷತ್ರಗಳಂತೆ ತೋರುತ್ತಿತ್ತು

೧೧-೧೨ ಇಂತಹ ಮಹಾಸಮುದ್ರವನ್ನು ದೇವತೆಗಳು ಮಹಾವಿಷ್ಣುವಿನ ಸಂದರ್ಶನಕ್ಕೆ ಬಂದಾಗ ನೋಡಿದರು ಆ ಸಮುದ್ರದ ಕೆಲವು ಕಡೆಗಳಲ್ಲಿ ದೈತ್ಯರು

ಕ್ವಚಿಚ್ಚ ಭುಜಗೈರ್ಭೀಮೈರ್ಮಹಾಗಾಂಭೀರ್ಯಸಂಯುತಂ ।
ವಿಷ್ಣೋರ್ವರಾಹವಪುಷಾ ವಿಕ್ಷೋಭಿತಜಲಾವಿಲಂ ॥ ೧೨ ॥

ಅನಾಸಾದಿತಬಾಧಂ ಚ ವರ್ಷಾಣಾಂ ಶತಪತ್ರಿಣಾ ।
ತೇನ ದೇವಾದಿದೇವೇವ ವಿಷ್ಣುನಾ ಪ್ರಭವಿಷ್ಣುನಾ ॥ ೧೩ ॥

ನಿತ್ಯಮಂತರಸಂಸ್ಥೇನ ನಿರ್ಮಲೀಕೃತವಿಗ್ರಹಂ ।
ಶಕ್ರವಜ್ರಭಯತ್ರಸ್ಯಮಾನಶೈಲಶತಾಕುಲಂ ॥ ೧೪ ॥

ವಿದ್ರುಮಾಂಬರಮಾಪ್ಲುಷ್ಟಸದೃಶಾಕಾರವಿದ್ರುಮಂ ।
ಪೂರ್ಣಚಂದ್ರಕಲಂಕಸ್ಯ ಕ್ಷಾಲನೇಪ್ಸುರಿವೋದ್ಧತೈಃ ॥ ೧೫ ॥

ಖಮಾಕ್ರಮತಿ ಕಲ್ಲೋಲೈಃ ಪೌರ್ಣಮಾಸೀಷು ಯಃ ಸದಾ ।
ಅಸಂಖ್ಯಾತಂ ತರಂಗೌಘೈಃ ಸಂಕ್ರಾಂತಶಶಿಮಂಡಲಂ ॥ ೧೬ ॥

---

ವಾಸವಾಗಿದ್ದರು ಮತ್ತೊಂದೆಡೆ ಮಹಾವಿಷ್ಣುವು ವಾಸವಾಗಿದ್ದನು ವರಾಹಾವತಾರ ಮಾಡಿದ ಮಹಾವಿಷ್ಣುವಿನಿಂದ ಕಲಕಲ್ಪಟ್ಟ ಆ ಗಂಭೀರವಾದ ಸಮುದ್ರದಲ್ಲಿ ಭಯಂಕರವಾದ ಹೆಬ್ಬಾವು (ಘಟಸರ್ಪ) ಗಳು ಕಾಣುತ್ತಿದ್ದುವು

೧೩, ೧೪ ಮಹಾವಿಷ್ಣುವು ವಾಸಮಾಡುತ್ತಲಿದ್ದ ಭಾಗದಲ್ಲಿ ಬಿಡಿಬಿಡಿಯಾಗಿ ಸಾವಿರಾರು ಕಮಲಪುಷ್ಪಗಳಿಂದ ಪರಿವೃತವಾದ ದಿವ್ಯಮಂದಿರದಲ್ಲಿದ್ದ ಪರಿಶುದ್ಧವಾದ ಒಂದು ಭಾಗದಲ್ಲಿ ಮಹಾವಿಷ್ಣುವು ಆನಂದಮೂರ್ತಿಯಾಗಿ ವಿರಾಜಮಾನನಾಗಿದ್ದನು ಇಂದ್ರನ ವಜ್ರಾಯುಧದ ಏಟಿಗೆ ಹೆದರಿದ ಅನೇಕ ಪರ್ವತಗಳು ಆ ಸಮುದ್ರದಲ್ಲಿ ಅಡಗಿಕೊಂಡಿದ್ದುವು

೧೫-೧೬ ಆ ಸಮುದ್ರವು ಆಕಾಶದೊಡನೆ ಸ್ಪರ್ಧೆಮಾಡುತ್ತಿರುವಂತೆ ತೋರುತ್ತಿದ್ದ ಬಗೆಯುದಂತಿನೆ,—ಪರಿಶುದ್ಧವಾದ ಅಂತರಿಕ್ಷವು ಪೂರ್ಣಿಮಾ ರಾತ್ರಿಯಲ್ಲಿ ದಿವ್ಯಚಂದ್ರಕಾಂತಿಯಿಂದ ಪರಿಶುದ್ಧ (ಬಿಳುಪು) ವಾಗಿದ್ದಾಗ್ಯೂ ಚಂದ್ರನಲ್ಲಿ ಮಾತ್ರ ಸ್ವಲ್ಪ ಕಳಂಕವು ಕಾಣುತ್ತಿರುವುದನ್ನು ನೋಡಿ ಸಮುದ್ರದ ಮೇಲೆ ತೋರುತ್ತಿದ್ದ ಅಲೆಗಳು ಈ ಚಂದ್ರನಲ್ಲಿರುವ ಕಳಂಕವನ್ನಳಿಸಿ ಬಿಡಬೇಕೆಂದು ಯೋಚಿಸಿಕೊಂಡು ಆಕಾಶದವರಿಗೆ ಹೋಗಿ ಚಂದ್ರಮಂಡಲವನ್ನು ಸೋಕಿ ಬರುತ್ತಿವೆಯೋ ಎಂಬಂತೆ ತೋರುತ್ತಿತ್ತು ಪೂರ್ಣಿಮಾರಾತ್ರಿಯಲ್ಲಿ ಚಂದ್ರನನ್ನು ನೋಡಿ ಸಮುದ್ರವು ಉಕ್ಕಿ

ಹಸಂತಂ ವಾಂತರಿಕ್ಷಸ್ಯ ಶ್ರಿಯಮೋವೇಂದುಧಾರಿಣಃ ।
ದಿಗ್ಭಾಗದಾನಕಾಲೇಷು ಯುಕ್ತಶ್ಚಂಡಸಮಾರಿಣಾ ॥ ೧೭ ॥

ತಮಂತರಿಕ್ಷಪ್ರತಿಮಂ ವಿಶಾಲ-
ಲೋಲೋರ್ಮಿಮಾಲಾಕುಲದಿಗ್ವಿಭಾಗಂ ।
ಸಮುದ್ರಮಾಸಾದ್ಯ ದಿವೌಕಸಸ್ತ-
ಮಾತಸ್ಥುರುಗ್ರಂ ತಪಸೋಗ್ರಸತ್ತ್ವಾಃ ॥ ೧೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನ ವಾಕ್ಯೇ
ಸಮುದ್ರವರ್ಣನೋನಾಮ ಚತುರ್ದಶೋತ್ತರ
ದ್ವಿಶತತಮೋಽಧ್ಯಾಯಃ.

---

ಯುಕ್ತಿ ಒರುವುದನ್ನು ನೋಡಿ, ಈ ಪುರಾಣ (ಕಾವ್ಯ) ಕರ್ತೃವು ಇಂತು ವರ್ಣಿಸಿರು ತ್ತಾನೆ ಈ ವಿಧವಾಗಿ ಸಮುದ್ರದಲ್ಲಿ ತರಂಗತರಂಗವಾಗಿ ಶುಭ್ರವಾದ ನೊರೆ ನೊರೆಯಾದ ಅಲೆಗಳು ಆಕಾಶದವರೆಗೆ ಹಾರಿ ಹಾರಿ ಹೋಗುತ್ತಿರುವುದನ್ನು ನೋಡಿ ದರೆ ಚಂದ್ರನನ್ನು ಧರಿಸಿರುವ ಆಕಾಶಸಂಪತ್ತನ್ನು ನೋಡಿ ಇವುಗಳು ಅಣಕಿಸುತ್ತ ಲಿವೆಯೋ ಎಂಬಂತೆ ತೋರುತ್ತಿತು

೧೮ ಇಂತಹ ಮಹಾಸಮುದ್ರದಲ್ಲಿ ಗಂಧೋದಕದಿಂದ ಲೇಪಿತವಾದ ಅವ ಯವವುಳ್ಳ, ಪದ್ಮನಾಭಮೂರ್ತಿಯು ಮಲಗಿದ್ದನು ಈ ವಿಧವಾದ ಅಂತರಿಕ್ಷಕ್ಕೆ ಸಮ ನಾದ ಸಂಪತ್ತನ್ನು ಹೊಂದಿ, ಎತ್ತೆತ್ತಲೂ ಎಲ್ಲ ದಿಕ್ಕುಗಳನ್ನೂ ತಮ್ಮ ವಿಸ್ತಾರವಾದ ಕಲ್ಲೋಲಗಳಿಂದ ವ್ಯಾಪಿಸಿಕೊಂಡಿದ್ದ ಸಮುದ್ರರಾಜನ ಮನೆಯಲ್ಲಿ ಮಲಗಿದ್ದ ಮಹಾವಿಷ್ಣುವನ್ನು ನೋಡುವುದಕ್ಕಾಗಿ ಬ್ರಹ್ಮನೂ, ಈಶ್ವರನೂ, ದೇವತೆಗಳೂ ಒಟ್ಟಾಗಿ ಬಂದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಶೈಲೂಷನನ್ನು ಕುರಿತು ನಾಡಾಯನನು
ಮಾತನಾಡಿದ ಸಂದರ್ಭದಲ್ಲಿ ಸಮುದ್ರವರ್ಣನೆಯೆಂಬ
ಹೆಸರಿನ ಇನ್ನೂರ ಹದಿನಾಲ್ಕನೆಯ ಅಧ್ಯಾಯವು
ಮುಗಿದುದು.

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ಪಂಚದಶೋತ್ತರದ್ವಿಶತತಮೋಽಧ್ಯಾಯಃ ॥

॥ ಅಗಸ್ತ್ಯ ಉವಾಚ ॥

ತಪಸಾ ತೋಷಿತೋ ದೇವೈರ್ದೇವದೇವೋ ಜನಾರ್ದನಃ ।
ಮಹೋದವಾಸಂ ಸಂತ್ಯಜ್ಯ ಸುರಾಣಾಂ ದರ್ಶನಂ ದದೌ ॥ ೧ ॥

ತೇ ಚ ತತಂ ವಿಬುಧಾರಿಘ್ನಂ ಧರಣೀಪಾತಪಾಂಸುಲೈಃ ।
ಜಾನುಪಾಣಿಲಲಾಟಾಂತೈಃ ಪ್ರಣೇಮುರ್ಮುದಿತಾ ಹರಿಂ ॥ ೨ ॥

### ಇನ್ನೂರ ಹದಿನೈದನೆಯ ಅಧ್ಯಾಯವು.

೧ ಅಗಸ್ತ್ಯರು ರಘುರಾಮಚಂದ್ರನನ್ನು ಕುರಿತು ಮತ್ತೂ ಹೇಳುತ್ತಾರೆ ದೇವಾದಿದೇವನಾದ ಜನಾರ್ದನನು ದೇವತೆಗಳ ತಪಸ್ಸಿಗೆ ಮೆಚ್ಚಿದವನಾಗಿ ಸಮುದ್ರ ವಾಸವನ್ನು ಬಿಟ್ಟು ಈಚೆಗೆ ಬಂದು ಸಮಸ್ತ ದೇವತೆಗಳಿಗೂ ಸಂದರ್ಶನವನ್ನು ಕೊಟ್ಟನು

೨ ಪರಮಾತ್ಮನು ಗೋಚರವಾದೊಡನೆಯೇ, ಆ ದೇವತೆಗಳು ಭೂಮಿಯ ಮೇಲೆ ಸಾಷ್ಟಾಂಗವಾಗಿ ನಮಸ್ಕರಿಸಿದರು ಈರೀತಿ ನಮಸ್ಕರಿಸಿದುದರಿಂದ ಮೊಳ ಕಾಲು, ಕೈಕಾಲು, ಹಣೆಗಳಿಗೆ ಭೂಮಿಯ ಮೇಲಿನ ಮಣ್ಣುಗಳು ವ್ಯಾಪಿಸಿಕೊಂಡುವು ಈರೀತಿ ಧೂಳಾದ ಧೂಳಿನಿಂದಂಟಿಕೊಂಡ ಮೈಕೈಗಳನ್ನು ಕೊಡಹಿಕೊಳ್ಳುವ ಸಕಲ ದೇವತೆಗಳೂ ಆನಂದದಿಂದ ಭಗವಂತನಿಗೆ ಅಡ್ಡಬಿದ್ದರು.

ತುಷ್ಟುವುಶ್ಚ ತಥಾ ವಾಗ್ಭಿರಥೋಚುಃ ಸ್ವಪ್ರಯೋಜನಂ ।
ವಧಾರ್ಥಂ ದೇವದೇವಸ್ಯ ಸುಕೇಶತನಯಾನ್ಪ್ರತಿ ॥ ೩ ॥

ಪ್ರತಿಜಜ್ಞೇ ತದಾ ತೇಷಾಂ ದೇವೋ ಮಾಲಿವಧಂ ಹರಿಃ ।
ಯೂಯಂ ಸುಮಾಲಿನಿಧನೇ ಶಕ್ತಾಃ ಸ್ಥ ಸುರಸತ್ತಮಾಃ ॥ ೪ ॥

ಮಾಲ್ಯವಾನವ್ಯವಧ್ಯೋಽಸೌ ಸತತಂ ಧರ್ಮವತ್ಸಲಃ ।
ಏವಮುಕ್ತ್ವಾ ತತಸ್ತಾರ್ಕ್ಷ್ಯಮಾಹ್ವಯಾಮಾಸ ಕೇಶವಃ ॥ ೫ ॥

ತಮಾರುರೋಹ ಸರ್ವಾಕ್ಸ್ಯಾ ಕಾಂಚನಂ ವಿನತಾಸುತಂ ।
ಶಂಖಚಕ್ರಗದಾಪದ್ಮಲಾಂಛಿತೋ ಮಧುಸೂದನಃ ॥ ೬ ॥

---

೩ ಅಷ್ಟಬಿದ್ದು ಮೇಲಕ್ಕೆದ್ದು ಕೈಜೋಡಿಸಿ ನಿಂತುಕೊಂಡು ಆ ಭಗವಂತನನ್ನು ನಾನಾಪ್ರಕಾರವಾಗಿ ಸ್ತೋತ್ರಮಾಡಿ ಸುಕೇಶತನಯರಾದ ಮಾಲಿ ಮತ್ತು ಸುಮಾಲಿಯೆಂಬುವರನ್ನು ಸಂಹರಿಸಿ ದೇವತೆಗಳಿಗೂ, ಆ ಮೂಲಕವಾಗಿ ಲೋಕಕ್ಕೂ ಉಪಕಾರಮಾಡಬೇಕೆಂದು ಬೇಡಿಕೊಂಡರು

೪ ಆಗ ಭಗವಾನ್ ಶ್ರೀಹರಿಯು ಅಪ್ಪಣೆಕೊಡಿಸಿದುದೇನೆಂದರೆ —ಎಲೈ ದೇವತೆಗಳಿರಾ! ನೀವೆಲ್ಲರೂ ಸೇರಿ ಸುಮಾಲಿಯೊಡನೆ ಯುದ್ಧಮಾಡಿ ಅವನನ್ನು ಸಂಹಾರಮಾಡಿರಿ ನಾನು ಮಾಲಿಯನ್ನು ಸಂಹರಿಸುತ್ತೇನೆ ಈ ರೀತಿಯಾಗಿ ದೇವತೆಗಳ ಮುಂದ ಮಾಲಿ ವಧೆಗೆ ಪ್ರತಿಜ್ಞೆಮಾಡಿದನು

೫ ಮತ್ತು ದೇವತೆಗಳನ್ನು ಕುರಿತು, ಎಲೈ ಗೀರ್ವಾಣರೇ! ಮೂರನೆಯ ಮಾಲ್ಯವಂತನು ತುಂಬಾ ಧರ್ಮಾತ್ಮನಾಗಿ ಅಹಿಂಸಾವ್ರತವಂ ಕೈಗೊಂಡಿರುವುದರಿಂದ ಅವನನ್ನು ನಾನು ಬದುಕಿಸುತ್ತೇನೆ ನೀವಿನ್ನು ಹೊರಡಿರೆಂದು ಹೇಳಿ ಯುದ್ಧಕ್ಕೆ ಹೊರಡುವುದಕ್ಕಾಗಿ ತನ್ನ ವಾಹನವಾದ ಗರುಡನನ್ನು ಕರೆದನು

೬. ಸುವರ್ಣಮಯಕಾಂತಿಯಿಂದ ಕೂಡಿದ ಗರುಡನು ಕೂಡಲೇ ಸಿದ್ಧನಾದನು ಮಧುಸೂದನನು ತನ್ನ ಮುಂದೆ ಸಿದ್ಧನಾಗಿ ನಿಂತಿರುವ ಗರುಡನ ಮೇಲೆ ಶಂಖ-ಚಕ್ರ-ಗದಾಪದ್ಮಗಳಂ ಧರಿಸಿದವನಾಗಿ ಆವನ ಮೇಲೆ ಹತ್ತಿ ಕುಳಿತನು.

ಅತಸೀಕುಸುಮಶ್ಯಾಮಃ ಕಾಂಚನೇ ಖಗಮೇ ಸ್ಥಿತಃ ।
ಶ್ರಿಯಮೂಹೇ ಸತೋಯಸ್ಯ ತೋಯದಸ್ಯ ಸವಿದ್ಯುತಃ　　॥ ೭ ॥

ಕಿರೀಟಕೌಸ್ತುಭಧರಂ ವರಭೂಷಣಭೂಷಿತಂ ।
ವಿಹಂಗವರಮಾರೂಢಮನುಜಗ್ಮುರ್ದಿವೌಕಸಃ　　॥ ೮ ॥

ಸುಧಾವದಾತಸತ್ಪಕ್ಷೈರ್ವಿತತಾಂಬರಧಾರಿಭಿಃ ।
ಹಂಸೈಸ್ತಮನ್ವಯಾದ್ಬ್ರಹ್ಮಾ ಜಟಾಮಂಡಲದುರ್ದೃಶಃ　　॥ ೯ ॥

ಚಂದ್ರರಶ್ಮಿಪ್ರತೀಕಾಶನಿಬಿಡಾಂಗಕಕುದ್ಮಿಕಃ ।
ಹರಸ್ತೃತೀಯನೇತ್ರಾರ್ಚಿರ್ವಿದಾರಿತನಭೋ ಯಯೌ　　॥ ೧೦ ॥

ಮಹೇಂದ್ರನೇತ್ರಸಂಕಾಶಕಲಾಪಾಟೋಪರೋಧಿನಾ ।
ಸ್ಕಂದಸ್ತಮನ್ವಯೌ ತಸ್ಮಾನ್ಮಯೂರೇಣ ಷಡಾನನಃ　　॥ ೧೧ ॥

---

೭ ಆಗ ಆ ಮಹಾಸ್ವಾಮಿಯು ಸುವರ್ಣಮಯ ದೇಹಧಾರಿಯಾದ ಗರುತ್ಮಂತನ ಮೇಲೆ ಕುಳಿತಿದ್ದುದನ್ನು ನೋಡಿದರ, ಪೂರ್ಣ ಜಲಪೂರಿತವಾದ ಮೇಘವು ಮಿಂಚಿನೊಡನೆ ಸೇರಿದ ಸಮಯದಲ್ಲಿ ಅದೆಂತಹ ಕಾಂತಿಯಿಂದಿರುವುದೋ, ಅಂತಹ ತೇಜಸ್ಸು ಪರಮಪುರುಷನಲ್ಲಿ ತೋರುತ್ತಿತ್ತು

೮ ಕಿರೀಟಕೌಸ್ತುಭಗಳನ್ನೂ ಶ್ರೇಷ್ಠವಾದ ಆಭರಣಗಳನ್ನೂ ಧರಿಸಿ ಗರುಡನ ಮೇಲೆ ಕುಳಿತು ಹೊರಟ ಮಹಾವಿಷ್ಣುವನ್ನು ನೋಡಿ ಸಕಲ ದೇವತೆಗಳೂ ಸಹ ಅವನ ಹಿಂದೆ ತಾವೂ ಹೊರಟರು

೯. ಆ ಮಹಾವಿಷ್ಣುವಿನ ಹಿಂದೆ, ಮೊದಲು ಸುಣ್ಣವನ್ನು ಬಳಿದಂತೆ ಸ್ವಚ್ಛವಾದ ಬಣ್ಣವುಳ್ಳ ರೆಕ್ಕೆಗಳಿಂದಲೂ, ವಿಸ್ತಾರವಾದ ವಸ್ತ್ರಗಳ ಧಾರಣದಿಂದಲೂ ಪ್ರಕಾಶಿಸುತ್ತಿರುವ ಹಂಸಪಕ್ಷಿಗಳ ಮೇಲೆ ಹತ್ತಿ ಬ್ರಹ್ಮನು ಹೊರಟನು

೧೦ ಚಂದ್ರಕಿರಣಗಳಂತೆ ಶುಭ್ರವಾದ ತೇಜಸ್ಸಿನಿಂದ ನಿಬಿಡವಾದ ದೇಹಕಾಂತಿಯಿಂದ ದಶದಿಕ್ಕುಗಳನ್ನೂ ಬೆಳಗಿಸುತ್ತಾ ಇದ್ದ, ತೃತೀಯನೇತ್ರನಾದ ಪರಮೇಶ್ವರನು ಆಕಾಶವನ್ನು ಭೇದಿಸಿಕೊಂಡು ಬ್ರಹ್ಮನ ಹಿಂದ ನಡೆದರು

೧೧ ಇಂದ್ರನ ಕಣ್ಣುಗಳಂತಿರುವ ಚಿತ್ರವಿಚಿತ್ರವಾದ ಗರಿಗಳನ್ನು ಕೆದರಿ

ವಿನಾಯಕಾನ್ಕರ್ತುಮನಾ ರಾಕ್ಷಸೇಂದ್ರಾನ್ವಿನಾಯಕಃ ।
ವಾಯುಮಂಡಲಮಾರೂಢಃ ಪ್ರಯಯಾವನುಮಾಧವಂ ॥ ೧೨ ॥

ವಹ್ನಿಜ್ವಾಲಾವಲೀಪುಂಜಸಮಕೇಸರಮಾಲಿನಾ ।
ಸಿಂಹೇನಾನು ಯಯೌ ದೇವೀ ಭದ್ರಕಾಲೀ ಜನಾರ್ದನಂ ॥ ೧೩ ॥

ವರಸ್ತ್ರೀಕುಚಸಂಕಾಶಕುಂಭೈರಾವಣಪೃಷ್ಠಗಃ ।
ಕಿರೀಟೀ ವಜ್ರಪಾಣಿಸ್ತಮನ್ವಯೌ ತ್ರಿದಶಾಧಿಪಃ ॥ ೧೪ ॥

ವಹ್ನಿಸ್ತಮನ್ವಯೌ ದೇವಂ ಶುಕಯಾನೇನ ಪಾರ್ಥಿವ ।
ಸೇಂದ್ರಗೋಪಗಣಾಕೀರ್ಣಶಾದ್ವಲಸ್ಥಲಶೋಭಿನಾ ॥ ೧೫ ॥

---

ಕೊಂಡಿರುವ ಬಹು ಸುಂದರವಾದೊಂದು ನವಿಲಿನ ಮೇಲೆ ಕುಳಿತು ಷಡಾನನ (ಆರುಮುಖ) ನಾದ ಕುಮಾರಸ್ವಾಮಿಯು ತನ್ನ ತಂದೆಯನ್ನು ಹಿಂಬಾಲಿಸಿ ಹೊರಟನು

೧೨ ದುಷ್ಟರಾದ ರಾಕ್ಷಸರೆಲ್ಲರನ್ನೂ ವಿನಾಯಕ (ದಿಕ್ಕಿಲ್ಲದವ ಅಥವಾ ಯಜಮಾನನಿಲ್ಲದವ) ರನ್ನಾಗಿಮಾಡಬೇಕೆಂದು ಆಲೋಚಿಸಿ ವಾಯುಮಂಡಲ ವನ್ನೇರಿ ಮಾಧವಮೂರ್ತಿಯ ಹಿಂದ ವಿನಾಯಕನು ತಾನು ಹೊರಟನು

೧೩ ಬೆಂಕಿಯ ಉರಿಗಳಂತಿರುವ ಕೇಸರ (ಜಟೆ) ಗಳಿಂದ ವಿರಾಜಮಾನ ವಾದ ಸಿಂಹದ ಮೇಲೆ ಕುಳಿತು, ಆ ಸಿಂಹವಾಹಿನಿಯಾದ ಬನಶಂಕರಿ (ಭದ್ರಕಾಳಿ) ಯು ಜನಾರ್ದನನ ಮಾರ್ಗವನ್ನನುಸರಿಸಿದಳು

೧೪ ಉತ್ತಮಸ್ತ್ರೀಯ ಕುಚಯುಗ್ಮಗಳಂತೆ ತೋರುತ್ತಿರುವ ಕುಂಭಸ್ಥಳ ದಿಂದ ಪ್ರಕಾಶಿಸುತ್ತಿರುವ ಐರಾವತವನ್ನೇರಿ ವಜ್ರಾಯುಧವನ್ನು ಧರಿಸಿದ, ದೇವೇಂದ್ರನು ಪರಮಾತ್ಮನನ್ನು ಹಿಂಬಾಲಿಸಿ ಹೊರಟನು

೧೫ ಯಜ್ಞೇಶ್ವರನು ತನ್ನ ವಾಹನವಾದ ಗಿಳಿಯ ಮೇಲೆ ಕುಳಿತು ಮಾಲಿ ವಧಕ್ಕಾಗಿ ಹೊರಟ ಮಧುಸೂದನನ ಹಿಂದೆ ಹೊರಟುದನ್ನು ನೋಡಿದರೆ, ಗೋವು ಗಳನ್ನು ಕಾದ ಗೋಪೀ ವಲ್ಲಭನು ಛತ್ರಿಯಂತೆ ಹಿಡಿದು ನಿಂತಿರುವ ಮಹೇಂದ್ರ ಪರ್ವತದ ಕೆಳಗೆ ಹಲ್ಲು ಮೇಯುತ್ತಿರುವ ಹಸುಗಳಿಂದ ಕೂಡಿದ ಹುಲ್ಲುಗಾವಲೋ ಏನೋ ಎಂಬಂತೆ ಕಾಣುತ್ತಿತ್ತು.

ಗಿರಿಕೂಟಸಮಾಕಾರಂ ಶೃಂಗಭೂಷಿತಮಸ್ತಕಂ ।
ವೈವಸ್ವತೋಽಪಿ ಮಹಿಷಮಾರುಹ್ಯಾನುಯಯೌ ಹರಿಂ ॥ ೧೬ ॥

ಶಂಕುಕರ್ಣೋ ಮಹಾಗ್ರೀವೋ ವರೇಭಸ್ಕಂಧಸಂಸ್ಥಿತಃ ।
ಪಶ್ಚಾದನುಯಯೌ ದೇವಂ ವಿರೂಪಾಕ್ಷೋ ಮಹಾಬಲಃ ॥ ೧೭ ॥

ಮಹಾಯಾನೇನ ರಮ್ಯೇಣ ಮನೋಮಾರುತರಂಹಸಾ ।
ವರುಣೋಽನುಯಯೌ ಪಶ್ಚಾತ್ಸ್ನಿಗ್ಧವೈದೂರ್ಯಸನ್ನಿಭಃ ॥ ೧೮ ॥

ಮನಃಶೀಘ್ರಗತಿರ್ದೇವೋ ವಾಯುಮಂಡಲಮಧ್ಯಗಃ ।
ವಾಯುಶ್ಚಾನುಯಯೌ ಪಶ್ಚಾದ್ವಾಯುಪೂರ್ಣಶುಭಾಂಶುಕಃ ॥ ೧೯ ॥

---

೧೬ ಒಂದು ದೊಡ್ಡ ಬೆಟ್ಟದ ಮೇಲಿರುವ ಎರಡು ಶಿಖರವೋ ಎಂಬಂತಿರುವ, ಎರಡು ಎತ್ತರವಾದ ಕೊಂಬುಗಳುಳ್ಳ ಒಂದು ಕೋಣದ ಮೇಲೆ ಕುಳಿತು ಯಮಧರ್ಮರಾಯನೂ ಸಹ ಶ್ರೀಹರಿಯನ್ನು ಹಿಂಬಾಲಿಸಿದನು

೧೭ ಎರಡು ಗೂಟಗಳಂತಿರುವ ಕಿವಿಗಳನ್ನುಳ್ಳ, ಅಗಲವಾದ ಕಂಠಪ್ರದೇಶದಿಂದ ಕೂಡಿದ ವಿರೂಪಾಕ್ಷನು ಒಂದು ಶ್ರೇಷ್ಠವಾದ ಆನೆಯ ಮೇಲೆ ಕುಳಿತು ಅವರೆಲ್ಲರ ಹಿಂದೆ ತಾನೂ ಪ್ರಯಾಣಮಾಡಿದನು

೧೮ ಮನೋಹರವಾದ ವೈಡೂರ್ಯಕಾಂತಿಯಿಂದ ಹೊಳೆಯುತ್ತಿರುವ ಪಾಶಹಸ್ತನಾದ ವರುಣನು ಬಹು ಸುಂದರವಾದ ಮಹಾಯಾನವನ್ನೇರಿ ಮಾರಮಣನ ಮಾರ್ಗವನ್ನನುಸರಿಸಿದನು

೧೯. ಮನಸ್ಸು ಎಷ್ಟು ವೇಗವಾಗಿ ಸಿಕ್ಕಿದ ಕಡೆ ಓಡಿಹೋಗುವುದೋ ಆ ವಿಧವಾದ ಮನೋವೇಗದಿಂದ ಕೂಡಿದ ವಾಯುವು, ವಾಯುಮಂಡಲವನ್ನು ಭೇದಿಸಿಕೊಂಡು ತಾನೂ ಸಹ ವಾಯುವೇಗದಿಂದ ಭಗವಂತನ ಹಿಂದೆ ಹೊರಟನು

ಧನದೋ ನರಯಾನೇನ ಸರ್ವರತ್ನೋಜ್ಜ್ವಲಾತ್ಮನಾ ।
ಗೋವಿಂದಮನುವವ್ರಾಜ ಶ್ರಿಯಾ ಪರಮಯಾ ಯುತಃ ॥ ೨೦ ॥

ಸಪ್ತಾಶ್ವಮೇಕಚಕ್ರಂ ಚ ರಥಮಾರುಹ್ಯ ಭಾನುಮಾನ್ ।
ತಥೈವಾನುಯಯೌ ದೇವಂ ಪ್ರಭಾಮಂಡಲದುರ್ದೃಶಃ ॥ ೨೧ ॥

ಚಂದ್ರಶ್ಛಂದಪ್ರಭಾವಾರೋ ದಶಭಿಸ್ತುರಗೋತ್ತಮೈಃ ।
ಮನೋಜವೇನ ಚ ತಥಾ ರಥೇನಾನುಯಯೌ ಹರಿಂ ॥ ೨೨ ॥

ತುರಂಗವರಮಾರುಹ್ಯ ಭಾಸ್ಕರಪ್ರತಿಮಾಕೃತಿಃ ।
ತಮನ್ವಯೌ ತದಾ ರಾಜನ್ಪ್ರಚಂಡೋ ರವಿನಂದನಃ ॥ ೨೩ ॥

ಚತುರ್ಭಿಃ ಕುಂಜರೈರ್ಯುಕ್ತಂ ರಥಮಾಸ್ಥಾಯ ಸತ್ವರಾ ।
ತಮನ್ವಯೌ ಧರಾದೇವೀ ದೇವಂ ತ್ರಿದಶಪೂಜಿತಂ ॥ ೨೪ ॥

---

೨೧ ತನ್ನನ್ನು ನೋಡುವ ಜನರ ಕಣ್ಣನ್ನು ಕುಕ್ಕುವಂತೆ ಇರುವ ತೇಜಸ್ಸಿನಿಂದ ವ್ಯಾಪ್ತನಾದ ಸೂರ್ಯನು, ಏಳು ಕುದುರೆಗಳನ್ನು ಕಟ್ಟಿದ ಒಂದೇ ಗಾಲಿಯುಳ್ಳ ತನ್ನ ರಥವನ್ನೇರಿ ದೇವೇಶ್ವರನನ್ನು ಅನುಸರಿಸಿ ಹೊರಟನು

೨೨. ಹತ್ತು ಕುದುರೆಗಳನ್ನು ಕಟ್ಟಿದ ದಿವ್ಯರಥವನ್ನೇರಿ ಚಂದನದ ತಂಪಿನಂತೆ ತಂಪಾದ ಕಿರಣಗಳುಳ್ಳ ಚಂದ್ರನು ಚಂದ್ರಮಂಡಲವನ್ನು ಬಿಟ್ಟು ತಾನೂ ಸಹ ಚಕ್ರಧಾರಿಯ ಹಿಂದೆ ಚಲಿಸಿದನು

೨೩ ಸೂರ್ಯನ ಮಗನಾದ ಶನೈಶ್ಚರನೂ ಸಹ, ತನ್ನ ತಂದೆಯಾದ ಭಾಸ್ಕರನಂತೆಯೇ ಭಾಸಮಾನನಾಗಿ, ಅವನಂತೆಯೇ ಆಕಾರವುಳ್ಳವನಾಗಿ ಕುದುರೆಯನ್ನೇರಿ ತನ್ನ ತಂದೆಯ ಹಿಂದೆಯೇ ತೆರಳಿದನು

೨೪ ನಾಲ್ಕು ಆನೆಗಳನ್ನು ಕಟ್ಟಿದ ಪರಮಸುಂದರವಾದ ರಥದ ಮೇಲೆ ಕುಳಿತ ಭೂದೇವಿಯೂ ಸಹ ತ್ರಿಲೋಕಪೂಜಿತನಾದ ಪರಮಪುರುಷನನ್ನನುಸರಿಸಿ ಬಹಳ ವೇಗವಾಗಿ ಪ್ರಯಾಣ ಬೆಳೆಸಿದಳು.

ಸಂಕಲ್ಪರಥಮಾರುಹ್ಯ ವ್ಯವಸಾಯ ಪುರಃಸರಃ ।
ಮನೋರಥೇನಾನುಯಯೌ ಕಾಮದೇವೋಽಪಿ ಕೇಶವಂ ॥ ೨೫ ॥

ಪುಷ್ಪೇಷೋರಪಿ ಯಸ್ಯಾಜ್ಞಾಂ ಬಿಭರ್ತಿ ಸಕಲಂ ಜಗತ್ ।
ಅನಾಲಸ್ಯಂ ಸಮಾರೂಢಾ ತಥಾ ದೇವೀ ಸರಸ್ವತೀ ॥ ೨೬ ॥

ಅನ್ವಯೌ ಪುಂಡರೀಕಾಕ್ಷಂ ಶರಣಾಗತವತ್ಸಲಂ ।
ಭೌಮಜ್ಞಜೀವಶುಕ್ರಾಶ್ಚ ರಾಹುಃ ಕೇತುಃ ಶನೈಶ್ಚರಃ ॥ ೨೭ ॥

ವಾಜಿಯುಕ್ತೈ ರಥೈಃ ಶೀಘ್ರಮನ್ವಯುಃ ಪುರುಷೋತ್ತಮಂ ।
ದೇವಾಶ್ಚೈಕೋನಪಂಚಾಶನ್ಮರುತಶ್ಚಾರುಮಂಡಲಾಃ ॥ ೨೮ ॥

---

೨೫   ಅನುಪಮಸುಂದರನಾದ ಅನಂಗ (ಮನ್ಮಥ) ನು ಸಂಕಲ್ಪವೆಂಬ ರಥವನ್ನು ಹತ್ತಿ ತನ್ನ ವ್ಯವಸಾಯುವನ್ನು ಕೈಗೊಳ್ಳಬೇಕೆಂದು ಚಿಂತಿಸಿ ಕೇಶವನನ್ನು ಅನುಸರಿಸಬೇಕೆಂಬ ಮನೋರಥದಿಂದ ಮಾರ್ಗಕ್ರಮಣಮಾಡಿದನು

೨೬   ಯಾವ ಪುಷ್ಪಬಾಣ (ಮನ್ಮಥ) ನ ಅಪ್ಪಣೆಯನ್ನು ಸಕಲ ಜಗತ್ತೂ ಸಹ ತಲೆಯ ಮೇಲೆ ಹೊತ್ತು ಸರ್ವದಾ ಸುತ್ತುತ್ತಿರುವುದೋ, ಅಂತಹ ಪಂಚಶರನ ಹಿಂದೆ ಸರಸ್ವತೀದೇವಿಯೂ ಸಹ ಅನಾಲಸ್ಯವೆಂಬ ರಥವನ್ನೇರಿ ಮಾಲಿ ಸಂಹಾರವನ್ನು ನೋಡುವುದಕ್ಕಾಗಿ ಪ್ರಯಾಣ ಬೆಳಸಿದಳು.

೨೭   ಈ ಮೇರೆ ಪರೋಕ್ಷಪ್ರಿಯ (ಅದೃಶ್ಯ) ರಾದ ಸಕಲ ಮುಖ್ಯ ಮುಖ್ಯ ದೇವತೆಗಳೆಲ್ಲರೂ ಹೊರಟಿರುವುದನ್ನು ನೋಡಿ, ಮಂಗಳ, ಬುಧ, ಗುರು, ಶುಕ್ರ, ರಾಹು, ಕೇತುವೇ ಮುಂತಾದ ಗ್ರಹರಾಜರೆಲ್ಲರೂ ಶರಣಾಗತವತ್ಸಲನಾದ ಪುಂಡರೀಕಾಕ್ಷನನ್ನು ತಾವೂ ಅನುಸರಿಸಿ ಹೊರಟರು.

೨೮   ನವಗ್ರಹಗಳು ಹೊರಟ ಬಳಿಕ ಅವರ ಹಿಂದೆ ನಲವತ್ತೊಂಭತ್ತು ಮಂದಿ ಮನೋಹರಮುಖಮಂಡಲರಾದ ಮರುದ್ದೇವತೆ (ಗಣ) ಗಳು, ತಮ್ಮ ತಮ್ಮ ಅಶ್ವ ರಥಗಳನ್ನೇರಿ ಪುರುಷೋತ್ತಮನ ಹಿಂದೆ ಹೊರಟರು.

ಅನುಜಗ್ಮುಃ ಸುರಾಃ ಕೃಷ್ಣಂ ವಾಯುಮಂಡಲಮಧ್ಯಗಾಃ ।
ಅನುಜಗ್ಮುಸ್ತಮಾದಿತ್ಯಾ ರಥೈಃ ಕಾಂಚನಸುಪ್ರಭೈಃ ॥ ೨೯ ॥

ವಸವೋಽಂಗಿರಸಃ ಸಾಧ್ಯಾ ವಿಶ್ವೇದೇವಾಸ್ತಥಾಽಶ್ವಿನೌ ।
ಭೃಗವಶ್ಚಾಶ್ವಸಂಯುಕ್ತೈ ರಥೈಸ್ತಂ ದೇವಮನ್ವಯುಃ ॥ ೩೦ ॥

ರುದ್ರಾಶ್ಚಾನುಯಯೌದೇವಂ ಬಲೋದಗ್ರೈಃ ಕಕುದ್ಮಿಭಿಃ ।
ತಥೈವಾನ್ಯೇ ಬಲೋದಗ್ರಾ ದೇವಾ ದೇವಾನುಯಾಯಿನಃ ॥ ೩೧ ॥

ಗರ್ದಭೈಃ ಶಿಂಶುಮಾರೈಶ್ಚ ಮಹೋಷ್ಟ್ರೈರ್ಮಹಿಷೋರಗೈಃ ।
ಸಿಂಹವ್ಯಾಘ್ರತರಕ್ಷ್ವೃಕ್ಷಗಜವಾನವಮರ್ಕಟೈಃ ॥ ೩೨ ॥

ಚಮರೈಃ ಸೃಮರೈಶ್ಚೈವ ಗೋಧಾಮಾರ್ಜಾರಮೂಷಕೈಃ ।
ವಿವಿಧೈಃ ಪಕ್ಷಿಯಾನೈಶ್ಚ ತೇಽನುಜಗ್ಮುರ್ಜನಾರ್ದನಂ ॥ ೩೩ ॥

---

೨೯ ವಾಯುಮಂಡಲ ಮಧ್ಯದಲ್ಲಿ ವಾಸಮಾಡುತ್ತಿರುವ ದೇವತೆಗಳೂ, ಸೂರ್ಯಮಂಡಲ ಮಧ್ಯದಲ್ಲಿ ವಾಸವಾಗಿರುವ ದೇವತೆಗಳೂ ಸಹ ಒಬ್ಬರನ್ನೊಬ್ಬರು ನೋಡುತ್ತಾ ಕುದುರೆ ಕಟ್ಟಿದ ತಮ್ಮ ತಮ್ಮ ಸುವರ್ಣ ರಥಗಳನ್ನೇರಿ ಕೃಷ್ಣನ ಹಿಂದೆ ಪ್ರಯಾಣಬೆಳೆಸಿದರು.

೩೦ ವಸುಗಳೂ, ಅಂಗಿರೋಗಣಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ಅಶ್ವಿನೀಕುಮಾರರೂ, ಭೃಗುವಂಶೀಯರೂ ಸಹ ತಮ್ಮ ತಮ್ಮ ರಥಗಳನ್ನು ಹತ್ತಿ ಮಾಲಿರಕ್ಕಸನ ಮಹಾಸಂಗರ ದೃಶ್ಯವನ್ನು ನೋಡಲು ಹೊರಟರು.

೩೧. ಏಕಾದಶರುದ್ರರೂ ಸಹ ಬಹು ವೇಗಶಾಲಿಗಳಾದ ಕುದುರೆಗಳನ್ನು ಕಟ್ಟಿದ ತೇರುಗಳ ಮೇಲೆ ತೆರಳಿದುದನ್ನು ನೋಡಿ ಉಳಿದುಕೊಂಡಿದ್ದ ಇನ್ನಿತರ ದೇವತೆಗಳೂ ಸಹ ತಾವೂ ಹೊರಟೇಬಿಟ್ಟರು.

೩೨-೩೩ ಮೇಲೆ ಬರೆದ ನಾನಾ ದೇವತೆಗಳಿಗೂ ಒಂದೊಂದು ವಾಹನವಿದ್ದೇ ಇರುತ್ತದೆ. ಆ ವಾಹನಗಳು ತಮ್ಮ ತಮ್ಮ ಯಜಮಾನರನ್ನನುಸರಿಸಿಕೊಂಡು ಅವರ ಆಜ್ಞಾನುಸಾರವಾಗಿ ನಡೆದುಕೊಳ್ಳುತ್ತವೆ ಇಂತಹ ಅನೇಕ ವಾಹನಗಳ ಹೆಸರನ್ನಿಲ್ಲಿ ವಿವರಿಸುವೆವು —ಕತ್ತೆ, ಕುದುರೆ, ಒಂಟೆ, ಕೋಣ, ಹಾವು, ಸಿಂಹ,

ಸಿದ್ಧಮಾರ್ಗೇಣ ಸಿದ್ಧಾಶ್ಚ ಪ್ರಯಯುರ್ಮುನಯಸ್ತಥಾ ।
ಸ್ತುವಂತಃ ಪುಂಡರೀಕಾಕ್ಷಂ ದೇವಸಂಘಭಯಾವಹಂ ॥ ೩೪ ॥

ಗೀತವಾದ್ಯೈಃ ಸುಮಧುರೈಃ ಸೇವಮಾನಾ ಜನಾರ್ದನಂ ।
ಪ್ರಹೃಷ್ಟಾಃ ಪ್ರಯಯುಸ್ತತ್ರ ಗಂಧರ್ವಾಪ್ಸರಸಾಂ ಗಣಾಃ ॥ ೩೫ ॥

ತಪಃ ಸತ್ಯಂ ಕ್ಷಮಾ ದಾನಂ ವ್ರತಾನಿ ವಿವಿಧಾನಿ ಚ ।
ಯಜ್ಞಾಂಗಾನಿ ಚ ಸರ್ವಾಣಿ ಕಾಲಸ್ಯಾವಯವಾಸ್ತಥಾ ॥ ೩೬ ॥

ಸಂವತ್ಸರಾಸ್ತಥಾ ಮಾಸಾಃ ಪಕ್ಷಾ ಚ ಕರಣೈಃ ಸಹ ।
ಯುಗಾಯನಮುಹೂರ್ತಾಶ್ಚ ಶಾಸ್ತ್ರಾಣಿ ವಿವಿಧಾನಿ ಚ ॥ ೩೭ ॥

---

ಹುಲಿ, ಕರಡಿ, ಆನೆ, ಕೋತಿ, ಸಿಂಗಳೀಕ, ಕೊಂಡಮುಸುಕ, ಚಮರೀಮೃಗ, ಹಲ್ಲಿ, ಬೆಕ್ಕು, ಇಲಿ, ನಾನಾವಿಧವಾದ ಹೆಸರೇ ಗೊತ್ತಿಲ್ಲದ ಹಕ್ಕಿಗಳನ್ನು ಹತ್ತಿ ಹತ್ತಿ ಒಬ್ಬರೂ ಬಿಡದೆ ದೇವತೆಗಳ ಗುಂಪಿಗೆ ಗುಂಪೇ ಜನಾರ್ದನನ ಹಿಂದೆ ಹೊರಟೇ ಹೊರಟರು

೩೪ ದೇವತೆಗಳಿಗೆ ಮಾಲಿಯಿಂದ ಬಂದಿರುವ ಮಹಾಭಯವನ್ನು ತಪ್ಪಿಸಿ ಕಾಪಾಡುವುದಕ್ಕೋಸ್ಕರ ಹೊರಟಿರುವ ಪುಂಡರೀಕಾಕ್ಷನನ್ನು ನಾನಾವಿಧವಾದ ಸ್ತೋತ್ರಗಳಿಂದ ಹೊಗಳುತ್ತಾ ಸಕಲ ಸಿದ್ಧಪುರುಷರೂ ಸಹ ಸಿದ್ಧಮಾರ್ಗದಿಂದ ಹೊರಟ ಜನಾರ್ದನನ ಜತೆಯನ್ನು ಸೇರಿಕೊಂಡರು ಸಿದ್ಧರು ಹೊರಟುದನ್ನು ನೋಡಿ ಋಷಿಗಳೂ ಬಂದು ಗುಂಪು ಕೂಡಿ ಹೊರಟರು

೩೫ ಗಂಧರ್ವರೂ ಅಪ್ಸರಸ್ತ್ರೀಯರೂ ಪರಮಸಂತೋಷಭರಿತರಾಗಿ ಮೃದು ಮಧುರವಾಗಿ ಹಾಡುತ್ತಾ, ಮಧುರಗೀತವಾದ್ಯಗಳಿಂದ ಗೋಪೀಜನವಲ್ಲಭನಾದ ಗೋವಿಂದನನ್ನು ಓಲೈಸುತ್ತಾ ಗುಂಪನ್ನು ಸೇರಿಕೊಂಡರು.

೩೬ ತಪಸ್ಸು, ಸತ್ಯ, ಕ್ಷಮೆ, ದಾನ, ನಾನಾವಿಧ ವ್ರತಗಳು, ಸಕಲ ಯಜ್ಞಗಳು ಸಕಲ ಯಜ್ಞಾಂಗಗಳೂ, ಕಾಲಾವಯವಗಳಾದ ವರ್ಷ, ತಿಂಗಳು, ಪಕ್ಷ, ಕರಣ, ಯುಗ, ಅಯನ, ಮುಹೂರ್ತ, ನಾನಾವಿಧ ಶಾಸ್ತ್ರ ರಾಶಿಗಳೂ ಸಹ ರೂಪವನ್ನು ಧರಿಸಿ ಮೂರು ಲೋಕದ ಧೊರೆಯ ಹಿಂದೆ ಹೊರಟರು

೩೮-೪೨ ಮತ್ತು ಆ ಪರಮಪುರುಷನ ಹಿಂದ ನಾನಾವಿಧವಾದ ಶರೀರ

**ಮೂರ್ತಿರ್ನಮಂತಿ ತಥಾಸ್ತ್ರಾಣಿ ಶಸ್ತ್ರಾಣಿ ಚ ಜಗತ್ಪತೇಃ ।**
**ಸಮುದ್ರಪಥತದ್ವೀಪಶಾಖಿನಾಂ ವಿಗ್ರಹಾಣಿ ಚ ॥ ೩೮ ॥**

**ವರ್ಷಾಣಾಂ ಚ ಶರೀರಾಣಿ ಪಿತೃಣಾಂ ಚ ತಥಾ ಗಣಾಃ ।**
**ನಕ್ಷತ್ರಾಣಿ ದಿಶಶ್ಚೈವ ವಿದಿಶಶ್ಚ ಮಹೀಪತೇ ॥ ೩೯ ॥**

**ದೇವಾ ವನಸ್ಪತಿಶ್ಚೈವ ಯಾಶ್ಚ ಲೋಕಸ್ಯ ಮಾತರಃ ।**
**ದೇವದೈತ್ಯಗಣಾ ಯೇ ಚ ತಥಾ ಪಿತೃಗಣಾಶ್ಚ ಯೇ ॥ ೪೦ ॥**

**ಗಂಧರ್ವಯಕ್ಷನಾಗಾನಾಂ ಗಣಾ ಯೇ ಚ ನರೇಶ್ವರ ।**
**ಘೋರಾವ್ಯಾಧಿಗಣಾಶ್ಚೈವ ಕಾಲಪಾಶೈಃ ಸುದಾರುಣೈಃ ॥ ೪೧ ॥**

**ಮೃತ್ಯುರ್ದಂಡಸ್ತಥಾ ಕ್ರೋಧೋ ಜರಾ ಚ ಮನುಜೇಶ್ವರ ।**
**ಅನ್ವಯುಃ ಪುಂಡರೀಕಾಕ್ಷಂ ರಕ್ಷೋಗಣವಧೈಷಿಣಂ ॥ ೪೨ ॥**

**ಜಯಶ್ರೀರಗ್ರತಸ್ತಸ್ಯ ಪ್ರಯಾತಿ ರಘುನಂದನ ।**
**ಸರಿತಶ್ಚ ತಥಾ ಯಾನ್ಯೈಃ ಸರ್ವಲೋಕಸ್ಯ ಮಾತರಃ ॥ ೪೩ ॥**

---

ಗಳನ್ನು ಧರಿಸಿ ಅಸ್ತ್ರಗಳೂ, ಶಸ್ತ್ರಗಳೂ, ಸಮುದ್ರ ಮಾರ್ಗಗಳೂ, ದ್ವೀಪಗಳೂ, ದ್ವೀಪಶಾಖೆಗಳೂ, ಪಿತೃಗಣಗಳೂ, ಗಂಧರ್ವಯಕ್ಷನಾಗರ ಗಣಗಳೂ, ನಕ್ಷತ್ರಗಳೂ, ದಿಕ್ಕುಗಳೂ, ವಿದಿಕ್ಕುಗಳೂ, ವನಸ್ಪತಿಗಳೂ, ಲೋಕಮಾತೃಕೆಯರೂ, ದೇವದಾನವ ಗಣಗಳೂ, ಭಯಂಕರವಾದ ವಿವಿಧ ವ್ಯಾಧಿಗಣಗಳೂ, (ಭಯಂಕರ ಕಾಲಪಾಶದಿಂದ ರಾಕ್ಷಸರ ಕತ್ತನ್ನು ಬಿಗಿದು ತರಲು) ಮೃತ್ಯುದೇವತೆಯೂ, ದಂಡ, ಕ್ರೋಧ, ಮುಪ್ಪು ಇತ್ಯಾದಿ ಗಣಗಳೆಲ್ಲಾ ರಕ್ಷೋ ಗಣಗಳನ್ನು ನಾಶಮಾಡುವುದಕ್ಕಾಗಿ ಹೊರಟ ಪುಂಡರೀಕಾಕ್ಷನಿಗೆ ತಮ್ಮ ತಮ್ಮ ಕೈಲಾದ ಸೇವೆಯನ್ನು ಮಾಡಿ ಲೋಕೋಪಕಾರ ಮಾಡುವುದಕ್ಕೋಸ್ಕರ ಅವನನ್ನನುಸರಿಸಿಕೊಂಡೇ ಪ್ರಯಾಣಮಾಡಿದವು

೪೩ ಅಗಸ್ತ್ಯರು ರಾಮನನ್ನು ಕುರಿತು ಹೇಳುತ್ತಾರೆ —ರಾಜಾಧಿರಾಜ ರಾಜಪರಮೇಶ್ವರ ಶ್ರೀ ಸೀತಾರಾಮಚಂದ್ರ ಮಹಾರಾಜ! ಈ ಮಾಲಿವಧೆಯ ಸಂಗತಿಯನ್ನು ಮನಸ್ಸಿಟ್ಟು ಕೇಳು! ಮಹಾನುಭಾವ! ಎಲ್ಲಕ್ಕಿಂತ ಮುಂದೆ

ಮಕರೇಣ ಯಮುನಾ ಗಂಗಾ ಕಾಲಿಂದೀ ಕಚ್ಛಪೇನ ತು
ಸಾರಸೇನಾಪಿ ಸರಯೂಃ ಶಿಂಶುಮಾರೇಣ ಗೋಮತೀ　　　　॥ ೪೪ ॥

ಗೋದಾವರೀ ಚ ಖಡ್ಗೇನ ಮಯೂರೇಣ ಸರಸ್ವತೀ ।
ಶತದ್ರುಃ ಶತದ್ರುಶ್ಚ ವಿಪಾಶಾ ತುರಗೇಣ ಚ　　　　॥ ೪೫ ॥

ಚಂದ್ರಭಾಗಾ ಚ ಸಿಂಹೇನ ದಂತಿನೇರಾವತೀ ತಥಾ ।
ಸಿಂಧುರ್ವ್ಯಾಘ್ರೇಣ ಮತ್ಸ್ಯೇನ ವಿತಸ್ತಾ ಚ ತಥಾ ಯಯೌ　　　　॥ ೪೬ ॥

ದೇವಿಕಾ ಚೈವ ಹಂಸೇನ ಪುರುಷೇಣ ಚ ಗಂಡಕೀ ।
ಮಹಿಷೇಣ ಪಯೋಷ್ಣೀ ಚ ಕಾವೇರೀ ವೃಷಭೇಣ ತು　　　　॥ ೪೭ ॥

---

ಗರುಡನ ಮೇಲೆ ಕುಳಿತು ಹೊರಟ ಜಲಜನಾಭನನ್ನು ಮೊದಲು ಜಯಲಕ್ಷ್ಮಿಯು ಸಂದರ್ಶಿಸಿ ಆವನಿಗೆ ದಾರಿಯನ್ನು ತೋರಿಸುತ್ತಾ ಅವನ ಮುಂದೆ ತಾನೇ ಮೊದಲು ಪ್ರಯಾಣಮಾಡಿದಳು
ಟಿಪ್ಪಣಿ

ಯತ್ರಯೋಗೀಶ್ವರಃ ಕೃಷ್ಣೋ ಯತ್ರ ಪಾರ್ಥೋಧನುರ್ಧರಃ ।
ತತ್ರಶ್ರೀರ್ವಿಜಯೋಭೂತಿ ರ್ಧ್ರುವಾನೀತಿರ್ಮತಿರ್ಮಮ ॥

ಎಲ್ಲಿ ಯೋಗೀಶ್ವರನಾದ ಮಹಾವಿಷ್ಣುವಿರುವನೋ, ಮತ್ತೆಲ್ಲಿ ಗಾಂಡೀವ ಧನುರ್ಧಾರಿಯಾಗಿ ಅರ್ಜುನನು ನಿಂತಿರುವನೋ, ಆ ಸ್ಥಳದಲ್ಲಿ ಜಯಲಕ್ಷ್ಮಿಯು ಸಿದ್ಧವಾಗಿ ನಿಂತಿರುತ್ತಾಳೆಂಬ ಪ್ರಮಾಣವಚನವನ್ನನುಸರಿಸಿ ಈ ಮಾಲಿಸಂಗರ ಸಂದರ್ಭದಲ್ಲಿ ವಿಜಯಲಕ್ಷ್ಮಿಯು ಮೊದಲೇ ಹೊರಟಳೆಂದು ತಿಳಿಯಬೇಕು.

೪೪-೪೯　ಇದೇ ರೀತಿಯಾಗಿ ಸಕಲ ನದಿಗಳೂ, ಸಕಲ ಲೋಕಮಾತೃಗಳೂ ಸಹ ತಮ್ಮ ತಮ್ಮ ಯಾನವನ್ನೇರಿ ಮಹಾವಿಷ್ಣುವಿನ ಹಿಂದೆ ಹೊರಟರು.

ಗಂಗೆಯು ತನ್ನ ವಾಹನವಾದ ಮೊಸಳೆಯ ಬೆನ್ನ ಮೇಲೆ ಕುಳಿತಳು ಯಮುನೆಯು ಆಮೆಯ ಮೇಲೆ ಕುಳಿತಳು. ಸರಯೂನದಿಯು ಸಾರಸ (ಹಂಸ) ದ ಮೇಲೇರಿದಳು ಗೋಮತೀನದಿಯು ಶಿಂಶುಮಾರವನ್ನೇರಿದಳು ಗೋದಾವರಿಯು

ಹಿರಣ್ವತೀ ಸುಪರ್ಣೇನ ಚಕ್ರೇಣೇಕ್ಷುಮತೀ ನದೀ ।
ಭುಜಗೇನ ಚ ಪರ್ಣಾಶಾ ವರಾಹೇಣ ಚ ಕೌಶಿಕೀ ॥ ೪೮ ॥

ವೇದಸ್ಮೃತಿರ್ಮಯೂರೇಣ ಸಾರಂಗೇಣ ಚ ನರ್ಮದಾ ।
ಜೀವಜೀವಕಮಾರೂಢಾ ಸೀತಾಪಿ ಪ್ರಯಯೌ ನದೀ ॥ ೪೯ ॥

ಹ್ರಾದಿನೀ ಚ ಸರೋರೂಢಾ ಸೃಮರೇಣ ಚ ಪಾವನೀ ।
ಶಶಕೇನಾಪಿ ಲೌಹಿತ್ಯಾ ನದೀ ಸಿಂಧುರ್ಗಜೇನ ಚ ॥ ೫೦ ॥

ಉರಭ್ರೇಣ ತಥಾ ಚಕ್ಷುಃ ಸಿತಾ ಚಾಜೇನ ರಾಘವ ।
ಗೌಮತೀ ಕುಕ್ಕುಟೇನಾಪಿ ಚಾಷೇಣ ಚ ದೃಷದ್ವತೀ ॥ ೫೧ ॥

---

ಖಡ್ಗಮೃಗದ ಮೇಲೆ ಹತ್ತಿದಳು ಸರಸ್ವತಿಯು ನವಿಲನ್ನು ಹತ್ತಿ ಕುಳಿತಳು ಶತದ್ರುವು ಎತ್ತಿನ ಮೇಲ ಕುಳಿತುಕೊಂಡಳು ವಿಪಾಶಾನದಿಯು ಕುದುರೆಯ ಮೇಲೆ ಕುಳಿತಳು ಚಂದ್ರಭಾಗೆಯು ಸಿಂಹವಾಹಿನಿಯಾದಳು. ಇರಾವತಿಯು ಆನೆಯ ಮೇಲೆ ಕುಳಿತಳು. ಸಿಂಧೂನದಿಯು ಹುಲಿಯನ್ನು ಹತ್ತಿದಳು ವಿತಸ್ತಾನದಿಯು ಮೀನಿನ ಬೆನ್ನನ್ನಡರಿದಳು ದೇವಿಕಾನದಿಯು ಹಂಸದ ಮೇಲೆ ಹತ್ತಿದಳು ಗಂಡಕೀನದಿಯು ಮನುಷ್ಯನ ಬೆನ್ನು ಹತ್ತಿದಳು ಪಯೋಷ್ಣೀನದಿಯು ಮಹಿಷದ ಮಸ್ತಕವನ್ನೇರಿದಳು ಕಾವೇರಿಯು ಎತ್ತಿನ ಬೆನ್ನಿನ ಮೇಲೆ ಹತ್ತಿ ಕೂತಳು. ಹಿರಣ್ವತಿಯು ಗರುಡನ ಮೇಲೆ ಹತ್ತಿ ಗರುಡವಾಹನೆಯಾದಳು ಇಕ್ಷುಮತೀ ನದಿಯು ಚಕ್ರವಾಕಪಕ್ಷಿಯ ಮೇಲೆ ಕುಳಿತಳು. ಪರ್ಣಾಶಾನದಿಯು ಹಾವಿನ ಮೇಲೆ ಹತ್ತಿದಳು ಕೌಶಿಕಿಯು ಹಂದಿಯ ಮೇಲೆ ಹತ್ತಿದಳು ವೇದಸ್ಮೃತೀ ನದಿಯು ನವಿಲಿನ ಮೇಲೆ ಕುಳಿತಳು ನರ್ಮದೆಯು ಜಿಂಕೆಯ ಮೇಲೇರಿ ಕುಳಿತಳು. ಸೀತಾನದಿಯು ಜೀವಮೃಗದ ಮೇಲೆ ಹತ್ತಿ ಹೊರಟಳು

೫೦. ಹ್ರಾದಿನೀನದಿಯು ಸರೋರೂಢೆಳಾಗಿಯೂ ಪಾವನಿಯು ಶಶಾ (ಮೊಲ) ರೂಢಳಾಗಿಯೂ, ರೋಹಿತೆಯೂ ಸಹ ಶಶಕಾರೂಢಳಾಗಿಯೂ, ಸಿಂಧೂ ನದಿಯು ಗಜಾರೂಢಳಾಗಿಯೂ ಹೊರಟರು

೫೧ ಚಕ್ಷುನದಿಯು ಕುರಿಯ ಮೇಲೂ, ಸಿತಾನದಿಯು ಆಡಿನ ಮೇಲೂ, ಗೌತಮೀನದಿಯು ಕೋಳಿಯ ಮೇಲೂ, ದೃಷದ್ವತೀನದಿಯು ಶಕುನದ ಹಕ್ಕಿಯ

ಸ್ವೈಃ ಸ್ವೈರ್ಯಾನೈಸ್ತಥೈವಾಸ್ಯಾಃ ಪ್ರಯಯುರ್ನಿಮ್ನಗಾ ಹರಿಂ ।
ದೇವಾನುಯಾತ್ರಾಘೋಷೇಣ ವಾದಿತ್ರಾಣಾಂ ರವೇಣ ಚ ॥ ೫೨ ॥

ಸ್ತೂಯಮಾನೋ ದ್ವಿಜಾಗ್ರ್ಯೈಶ್ಚ ಪ್ರಯಯೌ ಕಮಲೇಕ್ಷಣಃ ।
ತದ್ಬಲೋದ್ಯಮಪರ್ಯಂತಂ ದೇವಗಂಧರ್ವಸಂಕುಲಂ ॥ ೫೩ ।

ಆತಪತ್ರೈಃ ಪತಾಕಾಭಿಃ ಸ್ವಚಿಹ್ನೈಶ್ಚ ವಿರಾಜಿತಂ ।
ಕಿಂಕಿಣೀಶತಸಂಘೋಷಂ ಪ್ರಯಯಾವನುಕೇಶವಂ ॥ ೫೪ ॥

ರಶ್ಮ್ಯುತ್ತರೈರ್ದೇವವಿಭೂಷಣಾನಾಂ
ಪ್ರದೀಪ್ಯಮಾನಂ ಕನಕಾದಿಚಿತ್ರಂ ।

---

ಮೇಲೂ ಕುಳಿತು ಪರಮಾತ್ಮನ ಹಿಂದೆ ಹೊರಟರು

೫೨. ಇದರ ಮೇಲೆ ಇತರ ನದಿಗಳೂ ಸಹ ತಮ್ಮ ತಮ್ಮ ವಾಹನಗಳ ಮೇಲೆ ಹತ್ತಿಕೊಂಡು ಪ್ರಯಾಣಮಾಡಿದುವು. ಈ ಸಮರಯಾತ್ರಾಸಮಯದಲ್ಲಿ ದೇವ ವಾದ್ಯಗಳು ಮೊಳಗಿದುವು. ಈರೀತಿಯಾದ ವಾದ್ಯಗಳ ಧ್ವನಿಯಿಂದಲೂ, ಬ್ರಾಹ್ಮಣ ರಿಂದ ಪಾರಾಯಣಮಾಡಲ್ಪಡುತ್ತಿರುವ ವೇದಘೋಷಗಳಿಂದಲೂ ಕಮಲೇಕ್ಷಣನಾದ ಮಹಾವಿಷ್ಣುವು ಸ್ತೂಯಮಾನನಾಗಿ ಮಾಲಿಸಂಹಾರಕ್ಕಾಗಿ ಪ್ರಯಾಣಮಾಡಿದನು

೫೩-೫೪. ಮಹಾಬಲಶಾಲಿಗಳಾದ ದೇವತೆಗಳೂ, ಗಂಧರ್ವರೂ ಸಹ ಛತ್ರ ಚಾಮರಪತಾಕಾದಿಗಳಿಂದ ಸದ್ದುಮಾಡುತ್ತಿರುವ ರಥಗಳನ್ನಾರೋಹಿಸಿ ಹರಿಯ ಹಿಂದೆ ಹೊರಟರು

೫೫ ಕನಕರತ್ನಾದಿಗಳಿಂದ ಚಿತ್ರವಿಚಿತ್ರವಾಗಿ ನಿರ್ಮಾಣಮಾಡಲ್ಪಟ್ಟ ನಾನಾವಿಧವಾದ ಆಭರಣಗಳನ್ನು ಧರಿಸಿದ್ದ ದೇವತೆಗಳ ಬಲವು ಅನೇಕಾಭರಣಗಳಿಂದ ಕಾಂತಿಯುಕ್ತವಾದುದಾಗಿ ಅ ಪ್ರ ತಿ ಮ ವೀ ರ ನಾ ದ, ಲೋಕೈಕನಾಯಕನಾದ

ಬಲಂ ಯಯೌ ತತ್ರಿದಶೋತ್ತಮಾನಾಂ
ನಾರಾಯಣೇನಾಪ್ರತಿಮೇನ ಗುಪ್ತಂ ॥ ೫೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ದೇವಪ್ರಯಾಣವರ್ಣನೋನಾಮ
ಪಂಚದಶೋತ್ತರ ದ್ವಿಶತತಮೋಽಧ್ಯಾಯಃ

---

ನಾರಾಯಣನ ಮಹಾವೀರ್ಯದಿಂದ ಸಂರಕ್ಷಿತವಾಗಿ ಆ ಪರಮಪುರುಷನ ಓಂದೆ ಪ್ರಯಾಣ ಬೆಳೆಸಿದುವು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ದೇವಪ್ರಯಾಣ ವರ್ಣನೆಯೆಂಬ
ಹೆಸರಿನ ಇನ್ನೂರಹದಿನೈದನೆಯ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ಷೋಡಶೋತ್ತರದ್ವಿಶತತಮೋಽಧ್ಯಾಯಃ ॥

---

॥ ಅಗಸ್ತ್ಯ ಉವಾಚ ॥

ದೇವತಾನಾಂ ಸಮುದ್ಯೋಗಂ ಶ್ರುತ್ವಾ ಮಾಲಿಸುಮಾಲಿನೌ ।
ಚಕ್ರತುಃ ಪೃತನಾಂ ಘೋರಾಂ ತ್ರಿದಶೈರ್ಯುದ್ಧಕಾಂಕ್ಷಿಣೌ ॥ ೧ ॥

ತೌ ಕ್ರುದ್ಧೌ ಭ್ರಾತರೌ ಶ್ರೀಮಾನ್ಮಾಲ್ಯವಾನ್ವಾಕ್ಯಮಬ್ರವೀತ್ ।
ಆಶ್ರಯಸ್ತ್ರಿದಶೇಂದ್ರಾಣಾಂ ಸರ್ವಾತ್ಮಾ ಮಧುಸೂದನಃ ॥ ೨ ॥

ತೇನ ಯುದ್ಧಂ ನ ಕರ್ತವ್ಯಂ ಸ ತು ಪೂಜ್ಯೋ ಜಗತ್ಪತಿಃ ।
ಅಗ್ರೇ ತು ಪ್ರಣಿಪಾತೇನ ತಂ ಯಜಾಮೋ ಜಗತ್ಪತಿಂ ॥ ೩ ॥

---

### ಇನ್ನೂರ ಹದಿನಾರನೆಯ ಅಧ್ಯಾಯವು.

೧. ಶ್ರೀರಾಮಚಂದ್ರ ಪರಮಾತ್ಮನನ್ನು ಕುರಿತು ಅಗಸ್ತ್ಯಮಹರ್ಷಿಗಳು ಮತ್ತೂ ಹೇಳುತ್ತಾರೆ —ಮೇಲಿನ ಅಧ್ಯಾಯದಲ್ಲಿ ಹೇಳಿದಹಾಗೆ ಸಕಲದೇವತೆಗಳೂ ಮಾಲಿ-ಸುಮಾಲಿಗಳೊಡನೆ ಯುದ್ಧಮಾಡುವುದಕ್ಕಾಗಿ ವಿಷ್ಣುವನ್ನು ಮುಂದೆ ಬಿಟ್ಟು ಕೊಂಡು ಯುದ್ಧಕ್ಕೆ ಹೊರಟಿರುವರೆಂಬ ಸಂಗತಿಯು ಮಾಲಿ-ಸುಮಾಲಿಗಳ ಕಿವಿಗೆ ಬಿದ್ದೊಡನೆಯೇ ಅವರು ದೇವತೆಗಳೊಡನೆ ಯುದ್ಧಮಾಡುವುದಕ್ಕಾಗಿ ಭಯಂಕರ ವಾದ ಸೈನ್ಯವನ್ನು ಸಜ್ಜುಪಡಿಸಿದರು

೨-೬. ತನ್ನ ಅಣ್ಣಂದಿರಿಬ್ಬರೂ ಕ್ರೋಧಪರಿವೃತರಾಗಿ ಈರೀತಿ ಯುದ್ಧಕ್ಕೆ ಸಿದ್ಧರಾದುದನ್ನು ನೋಡಿ ಚಿಕ್ಕವನಾದ ಮಾಲ್ಯವಂತನು ತನ್ನ ಅಣ್ಣಂದಿರಿಗೆ ಹೇಳಿ

ಪ್ರಣಿಪಾತಪ್ರಸನ್ನೋ ಹಿ ಕಾಮಾನ್ದಾಸ್ಯತಿ ಕೇಶವಃ ।
ವಿಷ್ಣುರ್ಹಿ ಮಲಿನೇ ಚಿತ್ತೇsತ್ವಸ್ಮಾಕಂ ನೃಪ ಮರ್ಜಯಃ ॥ ೪ ॥

ಜೀವೇಮೋ ಸುಚಿರಂ ಕಾಲಂ ಸ್ಥಿತಾ ದೇವಸ್ಯ ಶಾಸನೇ ।
ಪ್ರಸೀದ ರಾಜನ್ಮಾ ಯುದ್ಧಂ ವ್ರಜ ದೇವೇನ ವಿಷ್ಣುನಾ ॥ ೫ ॥

ಯಕ್ಷಾಣಾಂ ರಾಕ್ಷಸಾನಾಂ ಚ ಕುರು ಶ್ರೇಯಸ್ತಥಾತ್ಮನಃ ।
ಏತದುಕ್ತಂ ಹಿತಂ ಭ್ರಾತ್ರಾ ರುರುಚೇ ನ ಚ ತಸ್ಯ ತತ್ ॥ ೬ ॥

ಮಹತಾ ಚ ಸ ಸೈನ್ಯೇನ ಪ್ರಯಯೌ ಯೇನ ಕೇಶವಃ ।
ತಮನ್ವಯೌ ಮಹಾತೇಜಾ ಸುಮಾಲೀ ರಾಕ್ಷಸಾಧಿಪಃ ॥ ೭ ॥

---

ದುದೇನೆಂದರೆ —ಎಲೈ ಭ್ರಾತೃಗಳಿರಾ! ಯಾವಾಗಲೂ ಮಹಾವಿಷ್ಣುವು ದೇವತೆಗಳಿಗೆ ಸಹಾಯಕನಾಗಿಯೇ ಇರುವನು. ಅವನು ಲೋಕೈಕಸಾಮ್ರಾಜ್ಯನಾದ ಸರ್ವಾತ್ಮನು ಅವನೊಡನೆ ಯುದ್ಧಮಾಡುವುದು ಸುತರಾಂ ಯೋಗ್ಯವಾದ ಕೆಲಸವಲ್ಲ ಅವನನ್ನು ನಾವೆಲ್ಲರೂ ಮೊದಲು ಹೋಗಿ ನೋಡಿ, ಆ ಜಗತ್ಪತಿಯ ಪಾದಕಮಲಗಳ ಮೇಲೆ ಅಡ್ಡಬೀಳೋಣ ಶರಣಾಗತವತ್ಸಲನಾದ ಆ ಭಗವಂತನು ನಮ್ಮ ವಿನಯಕ್ಕೆ ಮೆಚ್ಚಿ ನಾವು ಕೇಳಿದ ಇಷ್ಟಾರ್ಥಗಳನ್ನೆಲ್ಲಾ ಕೊಡುತ್ತಾನೆ ಹಾಗಲ್ಲದೆ ಹೋದರೆ ಮಲಿನಚಿತ್ತರಾದ ನಾವು ಆ ಮಹಾನುಭಾವನನ್ನು ಎಂದೆಂದಿಗೂ ಜಯಿಸಲಾರೆವು ಆದಕಾರಣದಿಂದ ಅವನೊಡನೆ ಸಂಧಿಮಾಡಿಕೊಂಡು ಅವನ ಆಜ್ಞಾನುಸಾರವಾಗಿಯೇ ಇದ್ದುಕೊಂಡು ನಾವೆಲ್ಲರೂ ಬಹುಕಾಲ ಬದುಕೋಣ. ಎಲೈ ನನ್ನ ದೊಡ್ಡಣ್ಣನಾದ ಮಾಲಿಯೇ! ನೀನು ಈಗ ಹಠಮಾಡಬೇಡ ನಡಿ! ನನ್ನ ಜತೆಯಲ್ಲಿ, ಮಹಾವಿಷ್ಣುವಿನ ಹತ್ತಿರಕ್ಕೆ ಈಗಲೇ ಹೋಗೋಣ ಈಗ ನೀನು ಯಕ್ಷರಾಕ್ಷಸವೃಂದಕ್ಕೂ ನಿನಗೂ ಹಿತವನ್ನುಂಟುಮಾಡಿಕೋ ಹೀಗೆಂದು ಹೇಳಿದ ತಮ್ಮನ ಮಾತು ಮಾಲಿಗೆ ಸುತರಾಂ ರುಚಿಸಲಿಲ್ಲ. ಇದು ಹಿತವಚನವೆಂದು ಅವನು ಅರಿಯಲಿಲ್ಲ

೭ ಕಡೆಗೆ ಯುದ್ಧಮಾಡುವುದೇ ಸರಿಯೆಂದು ನಿಶ್ಚಯಿಸಿ, ಮಾಲಿಯು ಮಹಾವಿಷ್ಣುವು ಸೈನ್ಯಸಮೇತನಾಗಿದ್ದ ಸ್ಥಳಕ್ಕೆ ಹೊರಟನು ಅವನನ್ನನುಸರಿಸಿ ಸುಮಾಲಿಯೂ ಅವನ ಹಿಂದೆ ಹೊರಟನು

ಪಿತೃತುಲ್ಯಶ್ಚ ಸಾಧೂನಾಂ ಜ್ಯೇಷ್ಠಭ್ರಾತಾ ಗುರುರ್ಮತಃ ।
ಆದೌ ವಾಚ್ಯಂ ಹಿತಂ ತಸ್ಯ ಕಾರ್ಯಂ ತದನುಚೇಷ್ಟಿತಂ ॥ ೮ ॥

ಏತಾಂ ಬುದ್ಧಿಂ ಸಮಾಸ್ಥಾಯ ನಿರ್ಯಾತೋ ಮಾಲ್ಯವಾನಪಿ ।
ತೇ ರಾಕ್ಷಸಾ ಸಹ ಭ್ರಾತ್ರಾ ಭೀಮನೇತ್ರಾಗ್ನಿಭೂಷಣಾಃ ॥ ೯ ॥

ಕೋಟೀಶತೇನ ಮುಖ್ಯಾನಾಂ ರಾಕ್ಷಸಾನಾಂ ವಿನಿರ್ಗತಾಃ ।
ನಾನಾವಿಧೋಗ್ರವಸನಾ ನಾನಾಪ್ರಹರಣಾಯುಧಾಃ ॥ ೧೦ ॥

ನಾನಾವಾದಿತ್ರಘೋಷೇಣ ಪ್ರಯಾತಾ ರಾಕ್ಷಸಾಧಿಪಾಃ ।
ನಾನಾಪ್ರಕಾರೈರ್ವಿವಿಧೈಃ ಪ್ರಾಣಿಭಿರ್ಬಲವತ್ತರೈಃ ॥ ೧೧ ॥

---

೮-೧೦ ತನ್ನ ಅಣ್ಣಂದಿರಿಬ್ಬರೂ ತನ್ನ ಮಾತನ್ನು ಲಕ್ಷಿಸಿ ಯುದ್ಧೋನ್ಮುಖರಾದುದನ್ನು ನೋಡಿ ಮಾಲ್ಯವಂತನು ಆಲೋಚಿಸಿದುದೇನೆಂದರೆ --ಜ್ಯೇಷ್ಠಭ್ರಾತಾ ಪಿತೃಸ್ಸಮಃ ಎಂಬ ನೀತಿವಾಕ್ಯದಂತೆ ತಂದೆಗೆ ಸದೃಶನಾದ ನನ್ನ ಅಣ್ಣನಿಗೆ ಯಾವ ನೀತಿಯನ್ನು ಸೂಚಿಸಬೇಕಾದ್ದಿತೋ ಅದನ್ನು ತಿಳಿಸಿದುದಾಯಿತು ಅವನು ಅವನ್ನು ಕೇಳದೆ ತನ್ನ ದಾರಿಯನ್ನೇ ಹಿಡಿದನು ನಾನು ವಯಸ್ಸಿನಲ್ಲಿ ಚಿಕ್ಕವನಾಗಿ ಅವನಿಗೆ ತಮ್ಮನಾಗಿರುವುದರಿಂದ ಅವನ ಸಹಾಯಕ್ಕಾಗಿ ಹೋಗುವುದು ಧರ್ಮವೆಂದಾಲೋಚಿಸಿ, ಆ ಅಣ್ಣಂದಿರಿಬ್ಬರ ಹಿಂದೆ ತಾನೂ ಹೊರಟನು ಭಯಂಕರವಾದ ನೇತ್ರಾಗ್ನಿಜ್ವಾಲೆಗಳಿಂದ ಆ ಮೂವರು ರಾಕ್ಷಸರೂ ಸಹ ಒಟ್ಟುಗೂಡಿ ಯುದ್ಧಕ್ಕೆ ಹೊರಟೊಡನೆ ನಾನಾವಿಧ ವಾದ್ಯಗಳು ಭೋರ್ಗರೆದುವು ಮುಖ್ಯ ಮುಖ್ಯರಾದ ರಾಕ್ಷಸರ ಸೈನ್ಯವು ಒಂದು ನೂರು ಕೋಟಿ ಪ್ರಮಾಣವುಳ್ಳದಾಗಿ ಪ್ರಯಾಣ ಮಾಡಿದವು

೧೧-೧೩ ಸಮರಾಂಗಣಕ್ಕೆ ಹೊರಟ ಸುರಾರಿಸೈನ್ಯವು ನಾನಾವಿಧವಾದ ಭಯಂಕರ ವಸನಗಳನ್ನು ಧರಿಸಿ, ನಾನಾವಿಧವಾಗಿ ಪ್ರಹರಿಸುವ ಆಯುಧಗಳನ್ನು ಕೈಯಲ್ಲಿ ಹಿಡಿದು, ವಿಧವಿಧ ವಾದ್ಯಗಳನ್ನು ಬಾರಿಸುತ್ತಾ, ಬಲವತ್ತರವಾದ ನಾನಾವಿಧವಾದ ಪ್ರಾಣಿಗಳ ಮೇಲೇರಿಕೊಂಡು, ಇಂದ್ರಾದಿದೇವತೆಗಳಿದ್ದಲ್ಲಿಗೆ ಹೊರಟರು. ಈ ಮೇರೆ ಅನೇಕಾನೇಕವಾದ ಅಸಂಖ್ಯ ರಾಕ್ಷಸಸೈನ್ಯವು ಒಟ್ಟುಗೂಡಿಕೊಂಡು ಉತ್ತರಾಭಿಮುಖವಾಗಿ ಹೊರಟು ಸಕಲ ದೇವತೆಗಳೂ ಅವರ ವಿಮಾನವನ್ನೇರಿದ್ದ

ವಾಹನೈಃ ಪ್ರಯಯುರ್ಘೋರಾ ರಾಕ್ಷಸಾಸ್ತ್ರಿದಶಾಧಿಪಂ ।
ಗಚ್ಛತಸ್ತು ಬಲೌಘಸ್ಯ ತದಾ ತಸ್ಯೋತ್ತರಾಂ ದಿಶಂ ।
ಬಭೂವಾಽಭಿಮುಖಂ ಘೋರಂ ವನಂ ತ್ರಿದಶಪಾಲಿತಂ ॥ ೧೨ ॥

ಹಿಮಾಚಲಸ್ಯೋತ್ತರದಿಗ್ವಿಭಾಗೇ
ಖಸ್ಥೇ ಬಲೇ ತೇ ಪುರುಷೌ ಪ್ರವೀರ ।
ಜಯಾರ್ಥಮಭ್ಯುದ್ಯತಚಾಪದಂಡೌ
ಪ್ರಚಕ್ರತುರ್ಯುದ್ಧಮದೀನಸತ್ತ್ವೌ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾರಾಯಣಾನು
ಶಾಸನೇ ರಾಕ್ಷಸಸೇನಾನಿರ್ಯಾಣವರ್ಣನೋನಾಮ
ಷೋಡಶೋತ್ತರ ದ್ವಿಶತತಮೋಽಧ್ಯಾಯಃ.

---

ಹಿಮವತ್ಪರ್ವತದ ತಪ್ಪಲಿನಲ್ಲಿದ್ದ, ತ್ರಿದಶಪಾಲಿತವಾದ ಭಯಂಕರವಾದ ಅರಣ್ಯ ಪ್ರದೇಶಕ್ಕೆ ಬಂದು ಅವರ ಅಭಿಮುಖರಾಗಿ ನಿಂತರಲ್ಲದೆ, ಸ್ವಲ್ಪವೂ ತಡಮಾಡದೆ ತಾವು ಬೇಗ ಜಯಶಾಲಿಗಳಾಗಬೇಕೆಂಬ ಕುತೂಹಲದಿಂದ ಧನುರ್ಬಾಣಗಳನ್ನು ಧರಿಸಿ, ದೇವವೃಂದದ ಮೇಲೆ ಬಾಣವೃಷ್ಟಿಯನ್ನು ಸುರಿಸುತ್ತಾ ಯುದ್ಧಕ್ಕಾರಂಭ ಮಾಡಿಯೇ ಬಿಟ್ಟರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಶೈಲೂಷನನ್ನು ಕುರಿತು ನಾರಾಯಣನನು
ಶಾಸನಪ್ರಕರಣದಲ್ಲಿ ರಾಕ್ಷಸಸೇನಾ ಪ್ರಯಾಣ ವರ್ಣನೆಯೆಂಬ
ಹೆಸರಿನ ಇನ್ನೂರ ಹದಿನಾರನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತದಶೋತ್ತರ ದ್ವಿಶತತಮೋಽಧ್ಯಾಯಃ ॥

॥ ಅಗಸ್ತ್ಯ ಉವಾಚ ॥

ತತಃ ಪ್ರಾವರ್ತತ ರಣಂ ಖಸ್ಥಯೋರ್ಬಲಯೋಸ್ತಯೋಃ ।
ನಾನಾಪ್ರಹರಣೋದಗ್ರಭುಜಯೋರ್ಜಯಮಿಚ್ಛತೋಃ ॥ ೧ ॥

ತದಾ ಬಲಾಭ್ರಸಂಚ್ಛನ್ನೇ ಗಗನೇ ಖಡ್ಗವಿದ್ಯುತಿ ।
ತಸ್ಮಿನ್ನೇವ ಕ್ಷಣೇ ಜಾತೋ ಭಾನುಮಾನ್ನೃಪ ವಿದ್ಯುತಿಃ ॥ ೨ ॥

ಚಲತ್ಖಡ್ಗಲತಾವಿದ್ಯುತ್ಸಮುದ್ಯೋತಿತವಿಗ್ರಹಾತ್ ।
ರಕ್ತವೃಷ್ಟಿಃ ಪಪಾತೋರ್ವ್ಯಾಂ ಬಲಮೇಘಾನುವಿಗ್ರಹಾತ್ ॥ ೩ ॥

---

### ಇನ್ನೂರ ಹದಿನೇಳನೆಯ ಅಧ್ಯಾಯವು.

೧ ಅಗಸ್ತ್ಯರು ರಾಮನನ್ನು ಕುರಿತು ಹೇಳುತ್ತಾರೆ —ಅಯ್ಯ ರಘುವೀರ ಸಮರ್ಥ! ಮುಂದ ನಡೆದುವನ್ನು ಹೇಳುವೆನು, ಕೇಳು ಆ ಬಳಿಕ ದೇವಾಸುರ ರೀರ್ವರಿಗೂ ಮಹತ್ತಾದ ಯುದ್ಧವು ಆರಂಭವಾಯಿತು. ಒಬ್ಬರನ್ನೊಬ್ಬರು ಜಯಿಸ ಬೇಕೆಂಬ ಕುತೂಹಲದಿಂದ ನಾನಾವಿಧ ಆಯುಧಗಳನ್ನು ಪರಸ್ಪರ ಪ್ರಯೋಗಿಸ ಲಾರಂಭಮಾಡಿದರು.

೨ ಬಲವಾದ ಮೇಘಗಳಿಂದ ವ್ಯಾಪ್ತವಾಗಿ ಆಕಾಶವನ್ನೇ ಮುಚ್ಚಿಕೊಂಡ ಮೇಘಮಂಡಲದಲ್ಲಿ ಪದೇ ಪದೇ ಫಳಾರನೆ ಮಿಂಚು ಹೊಳೆಯುವಂತೆ ಭಯಂಕರ ವಾದ ಈ ದೇವದಾನವ ರಣರಂಗರೂಪವಾದ ಆಕಾಶದಲ್ಲಿ ಸೈನ್ಯವೆಂಬ ಮಹಾಮೇಘ ಗಳು ಮುಸುಕಿದೊಡನೆ ಸೂರ್ಯನು ಕಾಂತಿಹೀನನಾದನು

೩ ಆ ಸೈನ್ಯರೂಪ ಮೇಘಮಧ್ಯದಲ್ಲಿ ಖಟ್ ಖಟ್ ಎಂದು ಸದ್ದಾಗುತ್ತಿರುವ ಹೊಳೆಯೊಳೆಯುತ್ತಿರುವ ಕತ್ತಿಗಳನ್ನು ನೋಡಿದರೆ ಮೇಘಗಳನ್ನು ಪದೇ ಪದೇ

**ತತಃ ಶೋಣಿತವರ್ಷೇಣ ಸಿಚ್ಯಮಾನೇ ಮಹೀತಲೇ ।**
**ಗ್ರಾಹವೃಷ್ಟಿರ್ಮಹತ್ಯಾಸೀಚ್ಛಾದಿತಂ ಭೂತಲಂ ಭಯಂ ॥ ೪ ॥**

**ಆಸೀದಗಮ್ಯಾ ವಸುಧಾ ಶೋಣಿತೌಘಪರಿಪ್ಲುತಾ ।**
**ರಜಸ್ವಲೇವ ಯುವತಿಸ್ತದಾ ತತ್ರ ನರಾಧಿಪ ॥ ೫ ॥**

**ಸ್ಫುರಮಾಣಾ ವಿದೃಶ್ಯಂತೇ ಬಾಹವಶ್ಚಂದನೋಕ್ಷಿತಾಃ ।**
**ಖಡ್ಗಪ್ರಹಾರಪತಿತಾಃ ಪಂಚಶೀರ್ಷಾ ಇವೋರಗಾಃ ॥ ೬ ॥**

**ಮುಖಾನಿ ದಂತಪೂರಾಣಿ ತಥಾ ಸರುಧಿರಾಣಿ ಚ ।**
**ವಿರೇಜುರ್ದಾಡಿಮಾನೀವ ಪಾಕಪ್ರಸ್ಫುರಿತಾನಿ ವಾ ॥ ೭ ॥**

---

ಮಿಂಚುಗಳು ಭೇದಿಸಿಕೊಂಡು ಸಿಡಿಲು ಹೊಡೆಯುವಂತೆ ಕಾಣುತ್ತಲಿದ್ದಿತು. ಖಡ್ಗ ರಾಶಿಯಿಂದ ಹೊರಟ ಏಟಿನಿಂದ ಕೆಳಕ್ಕುರುಳಿ ಬೀಳುತ್ತಿರುವ ಸೈನಿಕರ ಶಿರಸ್ಸುಗಳಿಂದ ಹೊರಟ ರಕ್ತಪ್ರವಾಹವನ್ನು ನೋಡಿದರೆ ಮೇಘಪಂಕ್ತಿಯನ್ನು ಭೇದಿಸಿದ ಸಿಡಿಲಿನಿಂದ ಹೊರಹೊರಟ ವೃಷ್ಟಿರೂಪ ಪ್ರವಾಹವೋ ಎಂಬಂತೆ ಕಾಣುತ್ತಿತ್ತು

೪ ಸಮರಾಂಗಣದಲ್ಲಿ ಶಿಲಾವೃಷ್ಟಿಯಾಗುತ್ತಲಿದೆಯೋ ಎಂಬಂತೆ ಬಾಣಗಳು ಬೀಳುತ್ತಿರುವುದನ್ನೂ, ಅದರಿಂದ ತುಂಬಿಹೋದ ಭೂಮಿಯಲ್ಲಿ ರಕ್ತವೃಷ್ಟಿಯಿಂದ ಕೆಸರಾದ ನೆಲವನ್ನು ನೋಡಿದರೆ ಬಹು ಭಯವಾಗುತ್ತಿತ್ತು

೫ ರಕ್ತಧಾರೆಗಳಿಂದ ಪರಿಪ್ಲುತವಾದ ಆ ರಣರಂಗವು ಅಗಮ್ಯವಾಗಿ (ತಿರುಗಾಡಲು ಸಾಧ್ಯವಾಗದೆ) ಇದ್ದುದನ್ನು ನೋಡಿದರೆ, ಅಲ್ಲಿ ಅಸ್ಪೃಶ್ಯಳಾದ (ಅಗಮ್ಯಳಾದ ಅಂದರೆ ಸಂಗಮಮಾಡಲನರ್ಹಳಾದ) ಒಬ್ಬ ಯುವತಿಯು, ರಜಸ್ವಲೆಯಾಗಿ ನಿಂತಿರುವಳೋ ಎಂಬಂತೆ ಕಾಣುತ್ತಲಿತ್ತು

೬. ಚಂದನಾನುಲಿಪ್ತವಾದ ಸೈನಿಕರ ಬಾಹುದಂಡಗಳು ಕತ್ತಿಯ ಏಟಿನಿಂದ ಕೆಳಗೆ ಬಿದ್ದು ಒದ್ದಾಡುವುದನ್ನು ನೋಡಿದರೆ, ಐದು ತಲೆಯುಳ್ಳ ಹಾವುಗಳು ಆ ರಣರಂಗದಲ್ಲಿ ಓಡಾಡುತ್ತಲಿವೆಯೋ ಎಂಬಂತೆ ಕಾಣುತ್ತಿತ್ತು

೭. ರಕ್ತದಿಂದ ವ್ಯಾಪ್ತವಾದ ಹಲ್ಲುಗಳಿಂದ ಕೂಡಿದ ಮುಖಗಳು ಕೆಳಕ್ಕುರುಳುವಾಗ ಆ ಬಾಯಿಗಳಿಂದ ಉದುರುತ್ತಿರುವ ಆ ರಕ್ತಾಕ್ತವಾದ ಹಲ್ಲುಗಳನ್ನು ನೋಡಿದರೆ ಚೆನ್ನಾಗಿ ಹಣ್ಣಾಗಿ ಬಿರಿದ ದಾಡಿಮಾ (ದಾಳಿಂಬರೆ) ಫಲದಿಂದ ಉದುರುವ ದಾಡಿಮಾ ಬೀಜಗಳೋ ಎಂಬಂತೆ ಕಾಣುತ್ತಿದ್ದುವು

ನಿಪತದ್ಭಿಸ್ತಥಾ ಛತ್ರೈಶ್ಚಾಮರೈರ್ವ್ಯಜನೈಸ್ತಥಾ ।
ವಿಚ್ಛಿನ್ನವಾಹನಾಂಗೈಶ್ಚ ಖಮಾಸೀದ್ವ್ಯಾಕುಲಂ ತಥಾ ॥ ೮ ॥

ಕಿರೀಟೈಃ ಕುಂಡಲೈರ್ಹಾರೈಃ ಕೇಯೂರೈರಂಗದೈಸ್ತಥಾ ।
ಪಾತ್ಯಮಾನೈಃ ಖಮಭವದ್ರಶ್ಮಿಪುಂಜವಿರಾಜಿತಂ ॥ ೯ ॥

ಕ್ಷುರಪ್ರವಿನಿಕೃತ್ತಾನಿ ರುಧಿರಾಕ್ತೇ ಮಹೀತಲೇ ।
ಲುಠಂತಿ ನಾಗಹಸ್ತಾನಿ ಭೋಗಿಭೋಗನಿಭಾನಿ ಚ ॥ ೧೦ ॥

ಅದೃಷ್ಟ್ವಾ ಪತಿತಾನೀಹ ಶಿರಾಂಸಿ ವಸುಧಾತಲೇ ।
ಹತ್ವಾ ವಂಶಾನ್ಸಮಾಜಗ್ಮುರನ್ವೇಷಂತ ಇವಾಸವಃ ॥ ೧೧ ॥

---

೮ ಆಕಾಶದಿಂದ ಬೀಳುತ್ತಿರುವ ಛತ್ರಚಾಮರವ್ಯಜನಗಳೂ, ತುಂಡು ತುಂಡಾಗಿ ಕತ್ತರಿಸಲ್ಪಟ್ಟ ರಥದ ಚೂರುಗಳೂ ಅಲ್ಲಿ ಗುಂಪು ಗುಂಪಾಗಿ ಕಾಣಿಸುತ್ತಾ ಆಕಾಶದಲ್ಲೆಲ್ಲಾ ವ್ಯಾಪಿಸಿದಂತೆ ಕಾಣುತ್ತಿದ್ದುವು

೯ ಮತ್ತು ತಲೆಗಳಲ್ಲಿ ಧರಿಸಿರುವ ಕಿರೀಟಗಳೂ, ಬೇರೆ ಬೇರೆ ಅಂಗಗಳಲ್ಲಿ ಧರಿಸಿದ್ದ ಆಭರಣಗಳಾದ ಕರ್ಣಕುಂಡಲ ರತ್ನಹಾರ, ಭುಜಪುರಿಗಳೇ ಮುಂತಾದುವುಗಳು ಮೇಲಿನಿಂದ ಕೆಳಗೆ ಬೀಳುತ್ತಲಿರುವಾಗ ಆ ಆಭರಣಕಾಂತಿಗಳು ಆಕಾಶವನ್ನೆಲ್ಲಾ ವ್ಯಾಪಿಸಿಕೊಂಡಿದ್ದಿತು

೧೦. ಕತ್ತಿಗಳಿಂದ ಕತ್ತರಿಸಲ್ಪಟ್ಟ ಆನೆಯ ಸೊಂಡಿಲುಗಳು ಆ ರಣರಂಗದಲ್ಲಿ ಉರುಳಾಡುತ್ತಿರುವುದನ್ನು ನೋಡಿದರ ಹೆಡೆಗಳನ್ನೆತ್ತಿಕೊಂಡು ಹಾವುಗಳು ಉಸಿರಾಡುವಂತೆ ಕಾಣುತ್ತಲಿದ್ದಿತು

೧೧ ಭೂತಲದಲ್ಲಿ ಕತ್ತಿಯ ಏಟಿನಿಂದ ಕತ್ತರಿಸಲ್ಪಟ್ಟು ಉರುಳಿಹೋದ ಶಿರಸ್ಸುಗಳಿಂದ ಹೊರಟುಹೋದ ಪ್ರಾಣಗಳು ಮೇಲಕ್ಕೆ (ಸ್ವರ್ಗಕ್ಕೆ) ಹಾರಿಹೋಗಿ ಅಲ್ಲಿ ತಮ್ಮ ರುಂಡಮುಂಡಗಳನ್ನು ಹುಡುಕುತ್ತಿವೆಯೋ ಎಂಬಂತೆ ಕಾಣಿಸುತ್ತಿತ್ತು (ಅಂದರೆ ಅನೇಕವಾದ ಶಿರಸ್ಸುಗಳು ಅಲ್ಲಿ ಕತ್ತರಿಸಲ್ಪಟ್ಟಿದ್ದವೆಂದರ್ಥ

ಶರೀರೈರ್ಭೂರ್ತಲಂ ಪ್ರಾಪ್ತಾ ದಿವಂ ಪ್ರಾಪ್ತಾಃ ಶರೀರಿಭಿಃ ।
ಅಂತರಿಕ್ಷೇ ವಿನಿಹಿತಾ ಲೋಕತ್ರಯಜಿಗೀಷವಃ ॥ ೧೨ ॥

ಛಿನ್ನರಾಕ್ಷಸಮೂರ್ಧಾನೋ ಗಲದ್ರುಧಿರಬಿಂದವಃ ।
ನ್ಯಪತನ್ನುತ್ತರಾದೇವ ಶ್ಯೇನೈರುಪಹೃತಾಶಯಾತ್ ॥ ೧೩ ॥

ಶ್ಯೇನಾನಾಂ ಭ್ರಮತಾಂ ತತ್ರ ರಾಕ್ಷಸಾಮಿಷಲಿಪ್ಸಯಾ ।
ಬಭೂವ ಸದೃಶಂ ರೂಪಂ ಶೀರ್ಷಾಣಾಂ ಭ್ರಮತಾಂ ತಥಾ ॥ ೧೪ ॥

ನಿಕೃತ್ತಾಂಗನಿಪಾತೇನ ಪತಿತಾ ಬಹವಸ್ತದಾ ।
ಸುಷುಪುರ್ಗಾಂ ಸಮಾಲಿಂಗ್ಯ ಕ್ರವ್ಯಾದಾ ರುಧಿರಾವಿಲಾಃ ॥ ೧೫ ॥

---

೧೨ ಶತ್ರು ರಾಕ್ಷಸರು ತಮ್ಮ ತಮ್ಮ ದೇಹಗಳನ್ನು ತ್ಯಾಗಮಾಡಿ ಭೂಮಿಯಲ್ಲಿ ಬಿಟ್ಟ ಸೂಕ್ಷ್ಮವಾದ ಪ್ರಾಣ (ಜೀವ) ಗಳಿಂದ ಆಕಾಶಕ್ಕೆ ಹಾರಿ ಅಲ್ಲಿರುವ ದೇವತೆಗಳನ್ನು ಕಂಡು ಅವರೊಡನೆ ಯುದ್ಧಮಾಡಿ ಜಯಿಸಬೇಕೆಂದು ಪ್ರಯತ್ನ ಮಾಡಿ ಅಲ್ಲಿಯೇ ಪೆಟ್ಟು ತಿಂದು ನೋತು ಮಾಯವಾಗುತ್ತಿದ್ದರು

೧೩ ಸೋರುತ್ತಿರುವ ರಕ್ತಗಳಿಂದ ಕೂಡಿದ ರಾಕ್ಷಸರ ಶಿರಸ್ಸುಗಳು ಭೂಮಿಗೆ ಬಿದ್ದೊಡನೆಯೇ ಆಕಾಶದಲ್ಲಿ ಹಾರಾಡುತ್ತಿದ್ದ ಗಿಡಗಗಳು ಆ ತಲೆಗಳಿಗೆರಗಿ ಅವುಗಳನ್ನು ಆಕ್ರಮಿಸಿ ಕೊಳ್ಳುತ್ತಿದ್ದುವು

೧೪ ರಾಕ್ಷಸರ ಮಾಂಸವನ್ನು ತಿನ್ನಲಾಶೆಯಿಂದ ಆಕಾಶದಲ್ಲಿ ಹಾರಾಡುತ್ತಿದ್ದ ಹದ್ದುಗಳನ್ನು ನೋಡಿದರ, ಅಲ್ಲಿ ಕತ್ತರಿಸಲ್ಪಟ್ಟು ಹಾರಾಡುತ್ತಿರುವ ರಾಕ್ಷಸರ ಅಸುರಹಿತ ಶಿರಸ್ಸುಗಳೋ ಎಂಬಂತೆ ತೋರುತ್ತಿತ್ತು

೧೫ ಕತ್ತರಿಸಲ್ಪಟ್ಟ ಅವಯವಗಳಿಂದ ಆ ರಾಕ್ಷಸರು ಭೂಮಿಯಲ್ಲಿ ಉರುಳುತ್ತಿರುವುದನ್ನು ನೋಡಿದರೆ, ರಕ್ತಪಾನಾಭಿಲಾಷಿಗಳಾದ ಆ ರಾಕ್ಷಸರು ಭೂಮಿಯಲ್ಲಿ ಹರಿಯುತ್ತಿರುವ ರಕ್ತವನ್ನು ಕುಡಿಯಲಾಶೆಯಿಂದ ಭೂಮಿಯನ್ನೇ ಆಲಂಗಿಸಿಕೊಳ್ಳುತ್ತಿರುವಂತೆ ತೋರುತ್ತಿದ್ದಿತು

ನಿಪತನ್ಮತ್ತಮಾತಂಗಪ್ರಸ್ಫುರತ್ಕುಂಭನಿರ್ಗತಾ ।
ಮುಕ್ತಾಫಲೈರ್ಜಹಾಸೋರ್ವೀ ಶೂರಾಲಿಂಗನನಿರ್ವೃತಾ ॥ ೧೬ ॥

ಹೃತಕುಂಜರದಂತಾಗ್ರವಿಲಗ್ನಾಂಗಾಸ್ತುರಂಗಮಾಃ ।
ಆಸೇದುಃ ಸುಚಿರೇಣೋರ್ವೀಂ ನಭಸ್ಯೇವ ಗತಾಸವಃ ॥ ೧೭ ॥

ಸಂಪ್ರಾಪ್ತರುಧಿರಾಂ ಭೂಮಿಂ ರಕ್ತಾಸ್ವಾಸ್ತು ನಿಶಾಚರಾಃ ।
ಯಯುಃ ಶರೀರೈರ್ನಿಹತಾಃ ಸಮರೇ ರುಧಿರಪ್ರಿಯಾಃ ॥ ೧೮ ॥

ವರ್ತಮಾನೇ ತಥಾ ಭೀಮೇ ಯುದ್ಧೇ ಭೀರುಭಯಂಕರೇ ।
ಲೋಕಪಾಲಶರವ್ರಾತಾನಿರ್ಭಿನ್ನಾ ರಜನೀಚರಾಃ ॥ ೧೯ ॥

---

೧೬ ಏಟು ತಿಂದು ಕೆಳಗೆ ಬೀಳುತ್ತಿರುವ ಮದಿಸಿದ ಆನೆಗಳ ಕುಂಭಸ್ಥಳದಲ್ಲಿನ ರತ್ನಗಳಿಂದ ವ್ಯಾಪ್ತಳಾದ ಭೂಮಿಯು ಅನೇಕ ಮಂದಿ ಶೂರರನ್ನಾಲಂಗಿಸಿಕೊಂಡು ಆನಂದಪಡುತ್ತಾ ರತ್ನಗಳೆಂಬ ಮುಕ್ತಾಫಲಗಳಿಂದ ಕೂಡಿ ನಗುತ್ತಿರುವಂತೆ ಕಾಣುತ್ತಿದ್ದಿತು

೧೭ ಏಟು ತಿಂದು ಕೆಳಗೆ ಬೀಳುತ್ತಿರುವ ಆನೆಗಳ ಕೊಂಬುಗಳ ಏಟಿಗೆ ಸಿಕ್ಕಿ ಅನೇಕ ಕುದುರೆಗಳು ಪ್ರಾಣಗಳನ್ನು ಮೇಲುಗಡೆಯೇ ಬಿಟ್ಟು, ದೇಹಗಳನ್ನು ಕೆಳಗೆ ಭೂಮಿಯ ಮೇಲೆ ಬಿಡುತ್ತ ಬಂದುವು

೧೮ ರಕ್ತಪಾನಾಭಿಲಾಷಿಗಳಾದ ರಾಕ್ಷಸರು ತಮ್ಮ ದೇಹಗಳನ್ನು ಬಿಟ್ಟು ಹೊರಕ್ಕೆ ಹೊರಡುತ್ತಿದ್ದಾಗ್ಯೂ ಸಹ ಭೂಮಿಯ ಮೇಲೆ ಹರಿಯುತ್ತಿರುವ ರಕ್ತಗಳ ಮೇಲಿನ ಆಶೆಯಿಂದ ಬಾಯಿಗಳಲ್ಲಿ ರಕ್ತಗಳನ್ನು ತುಂಬಿಕೊಂಡಿರುವಂತೆ ತೋರುತ್ತಿದ್ದುವೈ, ಅಲ್ಲಿ ರಕ್ತದಿಂದ ಯುಕ್ತವಾಗಿದ್ದ ಪ್ರಾಣಗಳನ್ನು ಬಿಟ್ಟ ರಕ್ಕಸರ ಮುಖಗಳು ಕೇಳೈ ರಾಮ ! ರಘುಕುಲಲಲಾಮ ! ರಣರಂಗಭೀಮ !

೧೯ ಈ ರೀತಿಯಾಗಿ ಭೀರುಭಯಂಕರವಾದ ದೇವಾಸುರ ಯುದ್ಧವು ನಡೆಯುತ್ತಿರುವಲ್ಲಿ, ಲೋಕಪಾಲರಾದ ಸಮಸ್ತ ದೇವತೆಗಳಿಂದ ಪರಾಜಿತರಾದ ರಕ್ಕಸರು, ದೇವತೆಗಳ ಬಾಣಗಳ ಏಟುಗಳನ್ನು ತಡೆಯಲಾರದೆ ಕತ್ತರಿಸುತ್ತಲಿರುವಲ್ಲಿ, ಉಳಿದ ಅನೇಕ ಮಂದಿ ರಾಕ್ಷಸರು ಬಾಣದೇಟುಗಳಿಗೆ ಹೆದರಿ ಹತ್ತು ದಿಕ್ಕು

ದುದ್ರುವುರ್ಭಯಸಂವಿಗ್ನಾಸ್ತದಾ ರಾಮ ದಿಶೋ ದಶ ।
ವಿಪದ್ರುತಂ ಬಲಂ ದೃಷ್ಟ್ವಾ ರಾಕ್ಷಸಾನಾಂ ದಿವೌಕಸೈಃ ॥ ೨೦ ॥

ಸುಮಾಲಿರ್ಮಾಲ್ಯವದ್ಗುಪ್ತೋ ಮಾಲೀ ದೇವಾನಥಾಬ್ರವೀತ್ ।
ಕಿರಂಚ್ಛರೌಘ್ಯೈರ್ವಿಮಲೈಸ್ತೈಲಧೌತೈಃ ಸಿತಾತಿತೈಃ ॥ ೨೧ ॥

ಸಾನುಜೇನ ರಣೇಮುಕ್ತ್ವಾ ಶರವೃಷ್ಟಿರ್ದುರಾಸದಾ ।
ಸಂಛಾದಯಾಮಾಸ ದಿಶಃ ಪ್ರದಿಶಶ್ಚ ದಿವೌಕಸಾಂ ॥ ೨೨ ॥

ಯಥಾಶಕ್ತಿಶರವ್ರಾತಾನ್ವಾರಯಂತೋಽಪಿ ದೇವತಾಃ ।
ರಾಕ್ಷಸೇಂದ್ರಶರೈರ್ಭಿನ್ನಾಃ ಕೇಶವಂ ಶರಣಂ ಯಯುಃ ॥ ೨೩ ॥

---

ಗಳಿಗೂ ಓಡಿಹೋಗುತ್ತಿದ್ದರು ಈ ವಿಧವಾಗಿ ದೇವತೆಗಳಿಗೆ ಹೆದರಿ ಓಡಿಹೋಗುತ್ತಿದ್ದ ತನ್ನ ಸೈನ್ಯವನ್ನು ನೋಡಿ ಮಾಲಿಯು, ತನ್ನ ತಮ್ಮಂದಿರಾದ ಸುಮಾಲಿಯನ್ನೂ ಮಾಲ್ಯವಂತನನ್ನೂ ಕರೆದುಕೊಂಡು ಮುಂದಕ್ಕೆ ನುಗ್ಗಿ, ಬಾಣ ವರ್ಷಗಳನ್ನು ಸುರಿಸುತ್ತಾ, ದೇವತೆಗಳನ್ನು ಕುರಿತು, ಎಲವೆಲವೋ! ದೇವತೆಗಳಿರಾ! ಗೆದ್ದೆವೆಂಬ ಹೆಮ್ಮೆಯನ್ನು ಬಿಟ್ಟು ಈಗ ನಾನು ಬಿಡುವ ಮೊನೆಯಾದ ಬಾಣಗಳೇಟುಗಳನ್ನು ತಡೆದುಕೊಳ್ಳಿ, ನೋಡೋಣವೆಂದು ಹೇಳಿ ಬಾಣವೃಷ್ಟಿಯನ್ನೇ ಕರೆದನು.

೨೨ ಮೇಲೆ ಹೇಳಿದಂತೆ ಮಾಲಿಯು ಹೇಳಿ ತನ್ನ ತಮ್ಮಂದಿರೊಡನೆ ಕೂಡಿದವನಾಗಿ ಬಾಣಗಳ ಮಳೆಗಳನ್ನೇ ಶತ್ರುಗಳ ಮೇಲೆ ಕರೆಯುತ್ತಾ ಬರಲು ಹತ್ತು ದಿಕ್ಕುಗಳಲ್ಲಿಯೂ ವ್ಯಾಪಿಸಿದ ಆ ಬಾಣಗಳು ದೇವತೆಗಳನ್ನು ಮುತ್ತಿಕೊಂಡವು

೨೩. ಈರೀತಿ ತಮ್ಮ ಮೇಲೆ ಮುಸುಕಿಕೊಂಡು ಬರುತ್ತಿರುವ ಬಾಣಗಳನ್ನು ದೇವತೆಗಳು ತಮ್ಮ ಶಕ್ತಿಮೀರಿ ತಡೆಯುತ್ತಿದ್ದಾಗ್ಯೂ ಅಸ್ತ್ರಗಳ ಏಟುಗಳು ಬಲವಾಗುತ್ತಲೇ ಇರಲು ದೇವತೆಗಳು ಆ ಬಾಣಗಳಿಂದ ಗಾಯಗೊಂಡವರಾಗಿ ಏನೂ ತೋರದೆ ಓಡಿ ಬಂದು ಕೇಶವನನ್ನು ಮರೆಹೊಕ್ಕರು

ಸ ನಿವಾರ್ಯ ತದಾ ಸರ್ವಂ ದೇವಸೈನ್ಯಂ ಪತತ್ರಿಣಾ ।
ಪ್ರತ್ಯುದ್ಯಯೌ ಯುಧಾ ಯೋಧ್ಧಾ ಧನುಷಾಂ ಸಪತತ್ರಿಣಾಂ ॥ ೨೪ ॥

ಏತಸ್ಮಿನ್ನೇವ ಕಾಲೇ ತು ರಕ್ಷಸಾಂ ಪೀನವಕ್ಷಸಾಂ ।
ವಿನಿವೃತ್ತಂ ಬಲಂ ಸರ್ವಮಮರೈಃ ಸಮರೋತ್ಸುಕಂ ॥ ೨೫ ॥

ತದ್ಬಲಂ ಸಕಲಂ ಚಕ್ರೇ ಶರೈಃ ಶಾರ್ಙ್ಗಪ್ರಚೋದಿತೈಃ ।
ಛಾದಯಾಮಾಸ ಸಮರೇ ಗೋಭಿಃ ಸೂರ್ಯ ಇವಾನಿಶಂ ॥ ೨೬ ॥

ನಾನಾಪ್ರಹರಣೋದಗ್ರಗರ್ಜಮಾನೋ ಜನಾರ್ದನಂ ।
ಸಂಛಾದಯಾಮಾಸ ತದಾ ಸರ್ವೈಃ ಪ್ರಹರಣೋತ್ಕರೈಃ ॥ ೨೭ ॥

---

೨೪ ಹೀಗೆ ಶರಣಾಗತರಾಗಿ ಬಂದ ದೇವತೆಗಳೆಲ್ಲರನ್ನೂ ಪರಮಪುರುಷನಾದ ನಾರಾಯಣನು ಗರುಡನ ರೆಕ್ಕೆಗಳಲ್ಲಿ ವಿಶ್ರಾಂತಿ ಹೊಂದುವಂತೆ ಹೇಳಿ ತಾನೇ ಬಾಣಒತ್ತಲಿಕೆ ಧನಸ್ಸುಗಳನ್ನು ಹಿಡಿದು ಯುದ್ಧಮಾಡಲಾರಂಭಿಸಿದನು

೨೫ ಯಾವಾಗ ಕೇಶವನೇ ಯುದ್ದಕ್ಕೆ ಹೊರಟನೋ ಅದನ್ನು ನೋಡಿ ಇನ್ನಿತರ ದೇವತೆಗಳೂ ಸಹ ತಾವೂ ಮುಂದೆ ನುಗ್ಗಿ ರಣೋತ್ಸಾಹದಿಂದ ಕೂಡಿದವರಾಗಿ, ರಾಕ್ಷಸರ ಸೈನ್ಯವನ್ನು ಹಿಂತಿರುಗಿಸಿ ಯುದ್ಧಕ್ಕೆ ಕರೆದರು

೨೬ ಎಲ್ಲರಿಗಿಂತ ಮುಂದೆ ನುಗ್ಗಿದ ಮಹಾವಿಷ್ಣುವು ತನ್ನ ಶಾರ್ಙ್ಗಧನುಸ್ಸಿನಿಂದ ಬಾಣಗಳನ್ನು ಹೂಡಿ ಹೂಡಿ ರಾಕ್ಷಸರ ಮೇಲೆ ಪ್ರಯೋಗಿಸುತ್ತಾ ಬರಲು, ಎತ್ತೆತ್ತಲೂ ಪ್ರಸರಿಸಿದ ಸೂರ್ಯಕಿರಣಗಳಂತೆ ಆ ಬಾಣಕಿರಣಗಳು ಅಸುರವೃಂದವನ್ನೆಲ್ಲಾ ಮುತ್ತಿಕೊಂಡುವು.

೨೭. ಈ ವಿಷ್ಣುವಿನ ಬಾಣಪ್ರಯೋಗಕ್ಕೆ ರಾಕ್ಷಸರೇನು ಹೆದರಿದರೇ? ಇಲ್ಲ ತಾವೂ ಸಹ ಆ ಬಾಣಗಳನ್ನು ಲಕ್ಷಿಸದೆ ಮುಂದೆ ನುಗ್ಗಿ ಅನೇಕವಾದ ಬಾಣಗಳನ್ನು ಪ್ರಯೋಗಿಸುತ್ತಾ ಅಲುತ್ತಾ, ಅಬ್ಬರಿಸುತ್ತಾ, ಗರ್ಜಿಸುತ್ತಾ ಆ ಮಹಾವಿಷ್ಣುವಿನ ಮೇಲೆ ಬೀಳುವುದಕ್ಕೆ ಬಂದರು ಮತ್ತು ಬಾಣವೃಷ್ಟಿಗಳಿಂದ ಜನಾರ್ದನನನ್ನು ಮುಚ್ಚಿಬಿಟ್ಟರು

ಸಂಛಾದ್ಯಮಾನೈಸ್ತೈರ್ಘೋರೈಃ ಕೇಶವೋ ರಜನೀಚರೈಃ ।
ಜಹಾರ ಶೀರ್ಷಾಣಿ ತದಾ ತೇಷಾಂ ಸಂನತಪರ್ವಭಿಃ ॥ ೨೮ ॥

ರಥನೀಡೇ ಧನುರ್ನ್ಯಸ್ಯ ಮಾಲೀ ರಾಕ್ಷಸಪುಂಗವಃ ।
ಸುಪರ್ಣಂ ತಾಡಯಾಮಾಸ ಗದಯಾ ಭೀಮವೇಗಯಾ ॥ ೨೯ ॥

ಗದಾಪ್ರಹಾರಾಭಿಹತಸ್ತಾರ್ಕ್ಷ್ಯಃ ಪರಪುರಂಜಯಃ ।
ಪರಾಙ್ಮುಖಂ ರಣಾಚ್ಚಕ್ರೇ ವೇದನಾರ್ತೋ ಜನಾರ್ದನಂ ॥ ೩೦ ॥

ಪರಾಙ್ಮುಖೇ ತದಾ ತಾರ್ಕ್ಷ್ಯೇ ಪರಿವೃತ್ತಾನನೋ ಹರಿಃ ।
ಶೀರ್ಷಂ ಜಹಾರ ಚಕ್ರೇಣ ರಾಕ್ಷಸೇಂದ್ರಸ್ಯ ಮಾಲಿನಃ ॥ ೩೧ ॥

---

೨೮. ಈ ಮೇರೆ ತನ್ನನ್ನೇ ಆಕ್ರಮಿಸಿದ ಆಕ್ರವ್ಯಾದರನ್ನು ನೋಡಿ ಆ ಕೇಶವನು ಕ್ರೋಧತಪ್ತನಾಗಿ ಮೊನೆಯಾದ ಬಾಣಗಳನ್ನು ಅವರ ಮೇಲೆ ಪ್ರಯೋಗಿಸಿ ಆ ರಜನೀಚರರ ತಲೆಗಳ ರಾಶಿಯನ್ನು ದಿಂಡನ್ನು ಕೊಚ್ಚುವಂತೆ ಕೊಚ್ಚಿ ಕತ್ತರಿಸಿ ಬೀಳಿಸಿದನು

೨೯ ತನ್ನ ಸೈನ್ಯವು ನಾಶವಾಗುತ್ತಿರುವುದನ್ನು ನೋಡಿದ ಆ ಮಾಲಿಯು, ರಥವೆಂಬ ಗೂಡಿನಲ್ಲಿಟ್ಟಿದ್ದ ಧನುಸ್ಸನ್ನು ತೆಗೆದುಕೊಂಡು ಅದನ್ನೆಡಗೈಯಲ್ಲಿ ಹಿಡಿದು, ಬಲಗೈಯಲ್ಲಿ ಗದೆಯೊಂದನ್ನು ತಗೆದು ಹಿಡಿದು, ಭಯಂಕರ ವೇಗಶಾಲಿಯಾದ ಆ ಗದಯಿಂದ ವಿಷ್ಣುರಥವೆನಿಸಿದ ಗರುದನನ್ನು ಬಲವಾಗಿ ಪ್ರಹಾರಮಾಡಿಬಿಟ್ಟನು

೩೦. ಆ ಗದೆಯ ಏಟನ್ನು ತಡೆಯಲಾರದೆ ಆ ಗರುಡನು ಬಹಳ ನೋವಿನಿಂದ ಕೂಡಿದವನಾಗಿ ವೇದನೆಯಿಂದ ಅಳುತ್ತಾ, ಜನಾರ್ದನನ ಮುಖವನ್ನು ನೋಡುತ್ತಾ ಆ ರಣರಂಗದಿಂದ ಹಿಂತಿರುಗಿ ಓಡಿಹೋಗಲುಪಕ್ರಮಿಸಿದನು

೩೧ ಪರಮಭಕ್ತನಾದ ಗರುಡನಿಗುಂಟಾದ ವೇದನೆಯನ್ನು ನೋಡಿ ಆ ಪರಮಾತ್ಮನು, ಆ ವೇದನೆಯು ಅವನದಲ್ಲವೆಂದೂ ಅದು ತನಗಾದ ವೇದನೆಯೆಂದೂ ತಿಳಿದವನಾಗಿ, ಆ ಗರುಡನು ಹಿಂತಿರುಗಿ ಹೋಗುವುದನ್ನು ತಪ್ಪಿಸಿ ಅವನ ಮುಖವನ್ನು ರಣರಂಗದ ಕಡೆಗೆ ತಿರುಗಿಸಿದವನಾಗಿ, ಇನ್ನು ಕಾಲವಿಳಂಬದಿಂದ ಪ್ರಯೋಜನವಿಲ್ಲವೆಂದು ನಿರ್ಧರಿಸಿ, ತನ್ನ ಸ್ಫುರತ್ಸಹಸ್ರಾರುಶಿಖೆಗಳಿಂದ ಅತಿ ತೀವ್ರವಾದುದಾಗಿಯೂ, ಸೂರ್ಯಕೋಟಿ ಪ್ರಭೆಗಳಿಂದ ಕೂಡಿದುದಾಗಿಯೂ ರಕ್ಕಸರ ಅಸು

ಸಕುಂಡಲಂ ಚಾರುಕಿರೀಟಜುಷ್ಟಂ
ನಿಶಾಚರೇಶಸ್ಯ ಶಿರಃ ಪೃಥಿವ್ಯಾಂ ।
ನಿಪಾತಿತಂ ವೀಕ್ಷ್ಯ ಮುದಾನ್ವಿತಾಸ್ತಾ
ನಾರ್ಯೋ ಬಭೂವುಸ್ತ್ರಿದಶೋತ್ತಮಾನಾಂ ॥ ೩೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾರಾಯಣಾನುಶಾಸನೇ
ಮಾಲಿರಾಕ್ಷಸವಧವರ್ಣನೋ ನಾಮ
ಸಪ್ತದಶೋತ್ತರ ದ್ವಿಶತತಮೋಽಧ್ಯಾಯಃ.

---

ಗಳನ್ನು ಹೀರುವುದಕ್ಕಾಗಿಯೇ ಹುಟ್ಟಿಯೂ ಇರುವ ಸುದರ್ಶನಚಕ್ರವನ್ನು ಮಾಲಿಯ ಮೇಲೆ ಪ್ರಯೋಗಿಸಿ ಅವನ ತಲೆಯನ್ನು ಕತ್ತರಿಸಿಬಿಟ್ಟನು

೩೨ ಸುಂದರವಾದ ಕರ್ಣಕುಂಡಲಗಳಿಂದಲೂ, ಮನೋಹರವಾದ ಕಿರೀಟದಿಂದಲೂ ಪ್ರಕಾಶಮಾನವಾಗಿದ್ದ ಆ ಮಾಲಿಯ ಶಿರಸ್ಸು ಚಕ್ರದಿಂದ ನಿಕೃತ್ತವಾಗಿ ನೆಲದ ಮೇಲೆ ಬಿದ್ದುದನ್ನು ನೋಡಿದೊಡನೆಯೇ ದೇವನಾರಿಯರು ಪರಮಾನಂದದಿಂದ ನರ್ತಿಸಲಾರಂಭಿಸಿದರು (ಅಂದರೆ ಸಂತೋಷಭರಿತರಾದರು )

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಮಾಲಿ ರಾಕ್ಷಸವಧೆಯ ವರ್ಣನೆಯೆಂಬ
ಹೆಸರಿನ ಇನ್ನೂರ ಹದಿನೇಳನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮೇಖಂಡೇ

## ॥ಅಷ್ಟಾದಶೋತ್ತರದ್ವಿಶತತಮೋಽಧ್ಯಾಯಃ॥

॥ ಅಗಸ್ತ್ಯ ಉವಾಚ ॥

ಹತೇ ಮಾಲಿನಿ ದೇವೇನ ಸ್ವಾಂತಿತಃ ಪಕ್ಷಿರಾಡಸೌ ।
ಜಹಾರ ಪಕ್ಷವಾತೇನ ನಿವೃತ್ತೋ ರಕ್ಷಸಾಂ ಬಲಂ ॥ ೧ ॥

ತೇ ತಾರ್ಕ್ಷ್ಯಪಕ್ಷಪಾತೇನ ಶುಷ್ಕಪರ್ಣಚಯೋ ಯಥಾ ।
ದ್ರುತಾ ರಾಕ್ಷಸಶಾರ್ದೂಲಾಸ್ತದಾ ರಾಮ ದಿಶೋ ದಶ ॥ ೨ ॥

### ಇನ್ನೂರ ಹದಿನೆಂಟನೆಯ ಅಧ್ಯಾಯವು.

೧. ಅಗಸ್ತ್ಯರು ರಘುಕುಲತಿಲಕನಾದ ಶ್ರೀ ಸೀತಾರಾಮಮೂರ್ತಿಯನ್ನು ಕುರಿತು ಹೇಳುತ್ತಾರೆ —ಮಾಲಿಯನ್ನು ಸಂಹರಿಸಿದೊಡನೆಯೇ ಶ್ರೀಮನ್ಮಹಾವಿಷ್ಣುವು ಇತ್ತ ಕಡೆ ತಿರುಗಿ ಮಾಲಿಯ ಗದೆಯ ಏಟಿನಿಂದ ಬಾಧೆಪಡುತ್ತಿದ್ದ ಗರುಡನನ್ನು ಸಂತವಿಸಿ ಮೈದಡವಿದೊಡನೆಯೇ ಆ ಗರುಡನು ಹರ್ಷಾನ್ವಿತನಾಗಿ ತನ್ನ ರೆಕ್ಕೆಗಳನ್ನು ಕೊಡವಿಕೊಂಡು ಮೇಲಕ್ಕೆದ್ದನು ಆಗ ಕೊಡವಿಕೊಂಡ ರೆಕ್ಕೆಗಳಿಂದುತ್ಪನ್ನವಾದ ಗಾಳಿಯಿಂದ ಹತಶೇಷವಾದ ರಾಕ್ಷಸಸೈನ್ಯವು ತೂರಿಕೊಂಡು ಬಹು ದೂರ ಹಿಂದಕ್ಕೆ ಸರಿದುಹೋಯಿತು

೨. ಆಗ ಗರುಡನ ರೆಕ್ಕೆಯ ಕೊಡವೋಣದಿಂದುಂಟಾದ ಗಾಳಿಯಿಂದ ಚೆದರಿಹೋದ ಆ ಹತಶೇಷ ಸೈನ್ಯವನ್ನು ನೋಡಿದುದೇ ಆದರೆ ಗಾಳಿಯ ಬಡಿತಕ್ಕೆ ಸಿಕ್ಕಿದ ಮರಗಳ ಪಕ್ಷ(ಕೊಂಬೆ ಅಥವಾ ಶಾಖೆ) ಗಳಿಂದ ಉದುರುತ್ತಿರುವ ಹಣ್ಣೆಲೆಗಳಂತೆ ತರಗೆಲೆ) ಕಾಣಿಸಿದುವು

ಅವಿಂದಮಾನಾಸ್ತೇ ಶರ್ಮ ವಾಸುದೇವಭಯಾರ್ದಿತಾಃ ।
ಪಾತಾಲತಲಮಾಸೇದುಃ ಸರ್ವ ಏವ ಪೃಥಕ್ಪೃಥಕ್ ॥ ೩ ॥

ತ್ರಿದಶಾನ್ಸಾಂತ್ವಯಿತ್ವಾ ಚ ವಿಷ್ಣುಸ್ತ್ರಿದಶಪೂಜಿತಃ ।
ಅಂತರ್ಧಾನಂ ಯಯೌ ತತ್ರ ಸರ್ವೇಷಾಮೇವ ಪಶ್ಯತಾಂ ॥ ೪ ॥

ಲಂಕಾಪಿ ಶೂನ್ಯಾ ರಾಜೇಂದ್ರ ದತ್ತಾ ವೈಶ್ರವಣಾಯ ಸಾ ।
ಸ್ವಯಂ ವಿಶ್ರವಸಸ್ತಸ್ಯ ರಾವಣೇನ ಹೃತಾ ಬಲಾತ್ ॥ ೫ ॥

ವಿಭೀಷಣಾಯ ಸಾ ದತ್ತಾ ತ್ವಯಾ ಹತ್ವಾ ಚ ರಾವಣಂ ।
ರಾಮ ವಿಷ್ಣುಃ ಸಮುತ್ಪನ್ನಸ್ತ್ವಂ ವಧಾಯೇಹ ರಕ್ಷಸಾಂ ॥ ೬ ॥

---

೩ ಆ ರಾಕ್ಷಸರೆಲ್ಲರೂ ವಾಸುದೇವನನ್ನು ನೋಡಿ ಬಹಳವಾಗಿ ಹೆದರುತ್ತಾ ತಮ್ಮ ಸುಖವು ಇಂದಿಗೆ ಪೂರೈಸಿತೆಂದು ಹೇಳಿಕೊಳ್ಳುತ್ತಾ, ಬೇರೆಬೇರೆಯಾಗಿ ಬೇರೆ ಬೇರೆ ದಾರಿಯಲ್ಲಿ ಹೊರಟು ಪಾತಾಳವನ್ನು ಸೇರಿಕೊಂಡರು.

೪ ಆ ಬಳಿಕ ಮಹಾವಿಷ್ಣುವು ತನ್ನ ಜತೆಯಲ್ಲಿ ಬಂದಿದ್ದ ಸಕಲ ದೇವತೆಗಳನ್ನೂ ಸಮಾಧಾನಮಾಡಿ ಸ್ವರ್ಗಕ್ಕೆ ಕಳುಹಿಸಿ, ತಾನೂ ಸಹ ಅವರಿಂದ ಪೂಜಿತನಾಗಿ ಅವರೆಲ್ಲರೂ ನೋಡುತ್ತಿದ್ದ ಹಾಗೆಯೇ ಅಂತರ್ಧಾನನಾದನು

೫ ಮಹಾಬಾಹುವಾದ ಶ್ರೀರಾಮಚಂದ್ರ ಪರಮಾತ್ಮ! ಕೇಳು ಆಗ ಲಂಕಾಪಟ್ಟಣವು ಮಾಲಿ ಮುಂತಾದವರ ವಿಯೋಗದಿಂದ ಶೂನ್ಯವಾಗಲು ಆ ಲಂಕೆಯನ್ನು ಮಹಾವಿಷ್ಣುವು ಕುಬೇರನಿಗೆ ಕೊಟ್ಟನು ಅಲ್ಲಿ ಸುಖವಾಗಿದ್ದ ತನ್ನ ಅಣ್ಣ ಕುಬೇರನನ್ನು ಬೆದರಿಸಿ ರಾವಣನು ಅದನ್ನು ಕಿತ್ತುಕೊಂಡನು

೬ ಆ ರಾವಣನನ್ನು ನೀನು ಸಂಹರಿಸಿ ಆ ಲಂಕಾಧಿಪತ್ಯವನ್ನು ನೀನೇ ವಿಭೀಷಣನಿಗೆ ವಹಿಸಿದೆಯಷ್ಟೆ! ಆದುದರಿಂದಲೈ ಜಗದಭಿರಾಮನಾದ ಶ್ರೀರಾಮನೇ! ಆ ಮಾಲಿಯನ್ನು ಆಗ ಸಂಹರಿಸಿದ ಆ ಮಹಾವಿಷ್ಣುವೇ ನೀನಯ್ಯ! ಈಗ ಅವನೇ ನೀನಾಗಿ (ರಾಮನಾಗಿ) ಹುಟ್ಟಿ ರಾವಣಾದಿ ರಾಕ್ಷಸರನನ್ನು ಸಂಹರಿಸಿರುವಿಯ್ಯೆ! ಮಹಾನುಭಾವ! ನೀನು ಯಾವಾಗಲೂ ರಾಕ್ಷಸರ ಸಂಹಾರಕ್ಕಾಗಿ ಪದೇ ಪದೇ ಅವತಾರಮಾಡುತ್ತಿರುತ್ತೀಯೆ!

**ತ್ವಯೈವ ಯುದ್ಧೇ ನಿಹತಾ ಯೇ ತು ಮಾತುಲಸಂಕಟಾಃ ।**
**ಪೌಲಸ್ತ್ಯರಾಕ್ಷಸಾ ಯೇ ತು ತೇ ಹತಾಃ ಸಾಂಪ್ರತಂ ತ್ವಯಾ ॥ ೭ ॥**

**ಹರ್ತಾ ನ ವಿದ್ಯತೇ ರಾಮ ರಕ್ಷಸಾಂ ಕೇಶವಂ ವಿನಾ ।**
**ದೃಷ್ಟೋऽಸ್ಮಿ ಭಾಷಿತಶ್ಚೇತಿ ಪ್ರಯಯೌ ಸ ಯಥಾಗತಂ ॥ ೮ ॥**

**॥ ನಾಡಾಯನ ಉವಾಚ ॥**

**ಏವಮುಕ್ತ್ವಾ ತತೋऽಗಸ್ತ್ಯೋ ಯಥಾಗತಮರಿಂದಮ ।**
**ತಸ್ಮಾದ್ಯುದ್ಧಂ ನ ಮೇ ರಾಜನ್ನದ್ಯ ವೈ ತವ ರೋಚತೇ ॥ ೯ ॥**

---

೭. ಮಹಾತುಂಟರಾದ ಕಂಸನೇ ಮೊದಲಾದ ಸೋದರಮಾವಂದಿರ ದುಷ್ಟ ಸೈನ್ಯವನ್ನು ಕೃಷ್ಣಾವತಾರದಲ್ಲಿ ಸಂಹರಿಸುವವನೂ ನೀನೇ. ಈಗ ಪೌಲಸ್ತ್ಯ (ರಾವಣ) ನೇ ಮುಂತಾದ ರಾಕ್ಷಸರನ್ನೆಲ್ಲಾ ನೀನು ಸಂಹರಿಸಿ ಲೋಕೋಪಕಾರವನ್ನು ಮಾಡಿರುತ್ತೀಯೆ

೮. ರಾಮ! ನೀನೇ ಚತುರ್ದಶಭುವನಾಂತರ್ಗತನಾದ ಮಹಾವಿಷ್ಣುವಯ್ಯಾ! ಇದರಲ್ಲಿ ಸಂಶಯವಿಲ್ಲ. ನಿನ್ನಿಂದಲೇ ಯಾವಾಗಲೂ ರಾಕ್ಷಸರ ವಿನಾಶವಾಗುತ್ತಲಿವೆ ನಿನ್ನಿಂದ ಹತನಾಗದ ದುಷ್ಟರಾಕ್ಷಸನೇ ಇಲ್ಲ. ರಾಮ! ಪ್ರಸಂಗಾನುಪ್ರಸಂಗದಿಂದ ನಿನ್ನನ್ನು ನೋಡಿಯಾಯಿತು. ನಿನ್ನ ಸಂಗಡ ಮಾತನಾಡಿಯಾಯಿತು. ನಾನು ಯಾವಾಗಲೂ ನಿನ್ನ ಮಂತ್ರವನ್ನು ಜಪಿಸುತ್ತಿರುವ ಪರಮಭಕ್ತನಾಗಿರುವುದರಿಂದ ಇಂತಹ ಭಾಗ್ಯವನ್ನು ನೀನು ನನಗೆ ಕರುಣಿಸಿರುವಿಯೈ! ಶ್ರೀರಾಮ! ನಾನಿನ್ನು ಹೊರಡುತ್ತೇನೆ. ಅನುಗ್ರಹವಿರಲೆಂದು ಹೇಳಿ ಅಗಸ್ತ್ಯರು ಹೊರಟುಹೋದರು.

ನಾಡಾಯನರು ಶೈಲೂಷ ಗಂಧರ್ವನನ್ನು ಕುರಿತು ಹೇಳುತ್ತಾರೆ —

## (ನಾಡಾಯನ ನೀತಿ)

೯. ಶೈಲೂಷ! ನನ್ನ ಮಾತನ್ನು ಕೇಳು. ಅಗಸ್ತ್ಯರು ರಾಮನನ್ನು ಕುರಿತು ಈ ರೀತಿ ಹೇಳಿದ ಬಳಿಕ ತಾವು ಬಂದ ದಾರಿಯಲ್ಲೇ ಹಿಂತಿರುಗಿದರಷ್ಟೆ? ಹೀಗೆಲ್ಲಾ ಹಿಂದೆ ನಡೆದಿರುವುದರಿಂದ ಈಗ ನೀನು ಭರತನೊಡನೆ ಯುದ್ಧಕ್ಕೆ ಹೋಗುವುದು ತರವಲ್ಲವೆಂದು ನನಗೆ ತೋರುತ್ತದೆ

ಉತ್ಸಾಹಶಕ್ತ್ಯಾ ಸಂಪನ್ನೋ ಮಂತ್ರಶಕ್ತ್ಯಾ ಚ ರಾಘವಃ ।
ಪ್ರಭುಶಕ್ತ್ಯಾ ತಥಾ ಯುಕ್ತೋ ದೇವಶಕ್ತ್ಯಾ ತಥೈವ ಚ ॥ ೧೦ ॥

ಸಾಧುಸಾಧ್ಯೇಷು ಕಾರ್ಯೇಷು ಕಃ ಕುರ್ಯಾದ್ವಿಗ್ರಹಂ ಬುಧಃ ।
ಕೇವಲಂ ಕೋಪಮಾಸ್ಥಾಯ ವಿಗ್ರಹಂ ನೃಪದೋಷದಂ ॥ ೧೧ ॥

ಕಾಮಕ್ರೋಧೌ ಜಿತೌ ಯೇನ ತೇನಾತ್ಮಾ ವಿಜಿತಸ್ತಥಾ ।
ಯೇನಾತ್ಮಾ ವಿಜಿತಸ್ತೇನ ವಿಜಿತೇಯಂ ವಸುಂಧರಾ ॥ ೧೨ ॥

ರಾಜ್ಞೋಽವಿಜಿತಚಿತ್ತಸ್ಯ ಪರಚಕ್ರಜಯಃ ಕುತಃ ।
ನ ಚಕ್ರಸ್ಯ ಜಯಂ ಕರ್ತುಂ ಶಕ್ನೋತ್ಯವಿಜಿತೇಂದ್ರಿಯಃ ॥ ೧೩ ॥

---

೧೦ ವಿಷ್ಣುಶಕ್ತಿಯಿಂದುತ್ಪನ್ನನಾಗಿರುವ ಈ ಭರತನು ಉತ್ಸಾಹ, ಮಂತ್ರ ಶಕ್ತಿ, ಪ್ರಭುಶಕ್ತಿ, ದೇವಶಕ್ತಿಗಳಿಂದ ಕೂಡಿರುವನೆಂದು ತಿಳಿದುಕೋ

೧೧ ಸಾಧುಗಳಿಂದ ಸಾಧ್ಯವಾದ ಸಾಮಶಕ್ತಿಯಿಂದ ಕೆಲಸಮಾಡಿ ಒದಕ ಬೇಕಲ್ಲದೆ ಯಾವನು ತಾನೇ ಕಾಲು ಕರೆದುಕೊಂಡು ಜಗಳ(ಯುದ್ಧ)ಕ್ಕೆ ನಿಂತಾನು? ಯೋಚಿಸಯ್ಯ ! ಶೈಲೂಷ! ಬರೀ ಕೋಪವನ್ನೇ ಮುಂದುಮಾಡಿಕೊಂಡು ಮಾಡುವ ಯುದ್ಧವು ನೃಪರಿಂದಾಗುವ ದೋಷವೆಂದು ತಿಳಿ

೧೨ ಯಾವ ಮನುಷ್ಯನಿಂದ ಕಾಮಕ್ರೋಧಗಳೆರಡೂ ಜಯಿಸಲ್ಪಟ್ಟಿರುವುವೋ ಆ ಮನುಷ್ಯನು ತನ್ನಿಂದ ತಾನೇ ಜಯಿಸಲ್ಪಟ್ಟವನೆಂದು ಭಾವಿಸು ಯಾವನು ಈರೀತಿ ತನ್ನನ್ನು ತಾನೇ ಜಯಿಸಿರುವನೋ ಅಂತಹ ಜಿತೇಂದ್ರಿಯನಿಂದ ಜಗವೆಲ್ಲವೂ ಜಿತವಾಗಿದೆಯೆಂದು ತಿಳಿ.

೧೩. ತನ್ನ ಮನಸ್ಸನ್ನೇ ತಾನು ಗೆಲ್ಲದಿರುವ ಮನುಷ್ಯನು ಪರಚಕ್ರವನ್ನು ಗೆಲ್ಲುವನೆಂಬುದು ತಿಳಿಗೇಡಿತನವಲ್ಲವೇ? ಅಜಿತೇಂದ್ರಿಯನಾದ (ಕಾಮಾಧಿಗಳಿಗೆ ಧೀನನಾದ) ಪುರುಷನು ಪರಚಕ್ರ (ಶತ್ರುಸೈನ್ಯ) ವನ್ನೆಂದಿಗೂ ಗೆಲ್ಲಲಾರನು

ನಾವಜ್ಞಾ ಕಸ್ಯಚಿತ್ಕಾರ್ಯಾ ಬಲೋ ವಾ ಬಹುಮನ್ಯತೇ ।
ನಿತ್ಯಂ ಲೋಕೇ ಹಿ ದೃಶ್ಯಂತೇ ಶಕ್ತೇಭ್ಯಃ ಶಕ್ತಿಮತ್ತರಾಃ ॥ ೧೪ ॥

ಯಥಾಶಕ್ತಿ ಚಿಕೀರ್ಷಂತಿ ಯಥಾಶಕ್ತಿ ಚ ಕುರ್ವತೇ ।
ನ ಕಿಂಚಿದವಮನ್ಯಂತೇ ನರಾಃ ಪಂಡಿತಬುದ್ಧಯಃ ॥ ೧೫ ॥

ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರಪರಿಶೋಷಣೌ ।
ಯಶ್ಚಾಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥ ೧೬ ॥

ದ್ವಾವಿಮೌ ಪುರುಷೌ ಲೋಕೇ ಸ್ವರ್ಗಸ್ಯೋಪರಿ ತಿಷ್ಠತಃ ।
ಪ್ರಭುಶ್ಚ ಕ್ಷಮಯಾ ಯುಕ್ತೋ ದರಿದ್ರಶ್ಚ ಪ್ರದಾನವಾನ್ ॥ ೧೭ ॥

---

೧೪ ಯಾವನೇ ಆಗಲಿ ತಾನೇ ಬಲಿಷ್ಠನೆಂದು ತಿಳಿದು ಉದಾಸೀನನಾಗಿರ ಬಾರದು ಅವನಿಗಿಂತ ಬಲಶಾಲಿಗಳಾದರು ಬಹು ಜನರಿದ್ದೇ ಇರುತ್ತಾರೆ ಪ್ರತಿ ದಿನವೂ ನಾವು ಶಕ್ತಿವಂತರನ್ನೂ, ಅವರಿಗಿಂತಿನ್ನೂ ಹೆಚ್ಚಾದ ಶಕ್ತಿವಂತರಾದ ಜನ ರನ್ನೂ ನೋಡುತ್ತಲೇ ಇದ್ದೇವೆ

೧೫ ಪಂಡಿತ ಬುದ್ಧಿಯುಳ್ಳವ (ಪ್ರಾಜ್ಞರು) ರು ಯಥಾಶಕ್ತಿಯಾಗಿ ಲೋಕೋಪ ಕಾರಕ್ಕಾಗಿ ದುಡಿಯುತ್ತಾರೆ ಅವರಂತೆ ಕೆಲಸಮಾಡುತ್ತಾರೆ ಆದರೆ ಅವರು ಯಾರನ್ನು ಜರಿಯುವುದಿಲ್ಲ

೧೬-೧೭ ಕೇಳು ಶೈಲೂಷ! ಈಗ ನಾನು ಇಬ್ಬರು ಕೇಡಿಗರ ಹೆಸರನ್ನು ಹೇಳುತ್ತೇನೆ ಇವರಿಬ್ಬರೂ ಲೋಕಕಂಟಕರಾದವರು, ಕಠಿನಚಿತ್ತರು ವ್ಯರ್ಥ ವಾಗಿ ಪರಪೀಡೆಮಾಡುತ್ತಾ ತಮ್ಮ ದೇಹವನ್ನೇ ಶೋಷಿಸಿಕೊಳ್ಳತಕ್ಕವರು. ಅವ ರಾರೆನ್ನುವಿಯೋ—ಪ್ರತಿಕ್ಷಣವೂ ಪರಿಪರಿಯಾದ ಬಯಕೆಗಳನ್ನು ಬಯಸುತ್ತಿರುವ ಬಡವನೊಬ್ಬ ತನಗೇನೇನೂ ಯಾರ ಮೇಲೂ ಅಧಿಕಾರವಿಲ್ಲದೆ ಇದ್ದಾಗ್ಯೂ ರೇಗಿಕೊಳ್ಳುತ್ತಿರುವ ಹೀನಮನುಷ್ಯನೊಬ್ಬ

**ಕಃ ಕುರ್ಯಾದ್ದುರ್ಬಲೇ ಕ್ರೋಧಂ ಸ್ವಭಾವಾದೇವ ನಿರ್ಜಿತೇ ।**
**ಬಲವತ್ಯಪಿ ಕಃ ಕ್ರೋಧಂ ಕುರ್ಯಾತ್ಪ್ರಾಣಹರಂ ನರಃ ॥ ೧೮ ॥**

**ಅಪಹಾರಪ್ರವೃತ್ತಸ್ಯ ಕೋಪಸ್ತೇಜಸ್ವಿನೋಚ್ಯತೇ ।**
**ಯಸ್ಮಾತ್ತಸ್ಮಾದ್ಬುಧೈಃ ಕೋಪಃ ಕೋಪಂ ಕೃತ್ವಾ ವಿನಿರ್ಜಿತಃ ॥ ೧೯ ॥**

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ ೨೦ ॥**

---

ಟಿಪ್ಪಣಿ —ಈ ಸಂದರ್ಭದಲ್ಲಿ ವಾಚಕರು ಈ ನೀತಿಗೆ ಅನುಸಾರವಾದ ಎರಡು ಗಾದೆಗಳನ್ನು ಮನಸ್ಸಿನಲ್ಲಿಟ್ಟಿರಬೇಕು "ಬಡವನ ಕೋಪ ದವಡೆಗೆ ಮೂಲ", "ಕೆರೆಯಮೇಲೆ ಕೋಪಮಾಡಿದ ಹಾಗ"

೧೮ ಈಗ ಇನ್ನಿಬ್ಬರು ಸತ್ಪುರುಷರ ಹೆಸರನ್ನು ಹೇಳುತ್ತೇನೆ ಕೇಳು. ಇವರಿಬ್ಬರೂ ಸ್ವರ್ಗಲೋಕದಮೇಲೆಯೇ ವಾಸಮಾಡುವವರೆಂಬುದು ಮನಸ್ಸಿನಲ್ಲಿರಲಿ ಮೊದಲನೆಯವನು ಕ್ಷಮಾ (ಶಾಂತಿ) ಶಾಲಿಯಾದ ಮಹಾರಾಜನು ಎರಡನೆಯವನ ಹೆಸರನ್ನು ಕೇಳು ದಾನಶೌಂಡನಾದ ದರಿದ್ರನೇ ಆ ಎರಡನೆಯ ಮಹಾನುಭಾವ

೧೯ ಸ್ವಭಾವವಾಗಿಯೇ ಅಶಕ್ತನಾಗಿದ್ದ ಸ್ವಭಾವವಾಗಿ ಮೊದಲೇ ತನ್ನಿಂದ ಸೋತುಹೋಗಿರುವ ಮನುಷ್ಯನಮೇಲೆ ಯಾವನು ತಾನೇ ಕೋಪಮಾಡಿಯಾನು ? ಆ ಕೋಪದಿಂದ ಪ್ರಯೋಜನವು ತಾನೇ ಏನಿದೆ ? ಅದರಂತೆ ತನಗಿಂತ ಪ್ರಬಲವಾದ ಶತ್ರುವಿನಮೇಲೆ ತಾನೇ ಕೋಪಮಾಡುವವನು ತನ್ನ ಪ್ರಾಣಕ್ಕೆ ತಾನೇ ಸಂಚಕಾರ ತಂದುಕೊಂಡಹಾಗೆ

೨೦. ಅಪ್ಪಾ ಶೈಲೂಷಾ ! ಇನ್ನೂ ಒಂದು ಬುದ್ಧಿವಾದವನ್ನು ಹೇಳುವೆನು ಕೇಳು. ತನ್ನನ್ನು ತಾನೇ ಹಾಳುಮಾಡಿಕೊಂಡು ನರಕದ ದಾರಿಗೆ ನುಗ್ಗುವವರಿಗೆ ಮೂರು ದಾರಿಗಳಿವೆ ಅವಾವೆನ್ನುವಿಯೋ — ಕಾಮ, ಕ್ರೋಧ, ಲೋಭ ಆದ್ದರಿಂದ ಈ ಮೂರು ದಾರಿಗಳನ್ನೂ ಬಿಟ್ಟು ಅಲ್ಲಿ ನುಗ್ಗದೆ ಹಿಂತಿರುಗಬೇಕು (ಇದೇ ಶ್ಲೋಕವನ್ನೇ ಭಗವದ್ಗೀತೆಯಲ್ಲಿಯೂ ವಿವರಿಸಿರುತ್ತಾರೆ )

ಅನುಬಂಧಂ ಚ ಸಂಪ್ರೇಕ್ಷ್ಯ ವಿಪಾಕಂ ಚೈವ ಕರ್ಮಣಾಂ ।
ಉತ್ಥಾನಮಾತ್ಮನಶ್ಚೈವ ತತಃ ಕರ್ಮ ಸಮಾರಭೇತ್ ॥ ೨೧ ॥

ನ ರಾಜ್ಯಂ ಲಬ್ಧಮಿತ್ಯೇವಂ ವರ್ತಿತವ್ಯಂ ಚ ಸಾಂಪ್ರತಂ ।
ಶ್ರಿಯಂ ಹ್ಯವಿನಯೋ ಹಂತಿ ಜರಾರೂಪಮಿವೋತ್ತಮಂ ॥ ೨೨ ॥

ತ್ಯಕ್ತ್ವಾ ಜನಪದೇ ವಾಸಂ ಯಾಹಿ ರಾಜನ್ಹಿಮಾಚಲಂ ।
ಅವಿಷಹ್ಯತಮಂ ಹತ್ವಾ ರಾವಣಂ ಲೋಕರಾವಣಂ ।
ಲಂಕಾಂ ತ್ಯಕ್ತ್ವಾ ಧನಾಧ್ಯಕ್ಷಂ ಪಶ್ಯ ಕೈಲಾಸಮಾಶ್ರಿತಂ ॥ ೨೩ ॥

೨೧ ತನ್ನ ಕೆಲಸದ ಅನುಬಂಧ (ಜವಾಬ್ದಾರಿ) ವನ್ನೂ ಕರ್ಮದ ಪರಿಪಾಕವನ್ನೂ ಯೋಚಿಸುತ್ತಾ ತನ್ನನ್ನು ಉದ್ಧಾರಮಾಡಿಕೊಳ್ಳುವ ಮಾರ್ಗವನ್ನು ಹುಡುಕಿ ಅದರಲ್ಲಿ ಪ್ರವೇಶಿಸುವುದೇ ಸ್ವರ್ಗಮಾರ್ಗದ ಬಾಗಿಲು ಇದನ್ನಾಲೋಚಿಸಿಕೊಂಡು ಕೆಲಸಮಾಡಬೇಕು.

೨೨ ಈಗ ನನಗೆ ಇಂತಹ ರಾಜ್ಯಭೋಗವು ಲಬ್ಧವಾಗಿದೆಯೆಂದು ಮನಸ್ವೀ ನಡೆಯಬಾರದು ಸೌಂದರ್ಯವನ್ನು ಮುಪ್ಪು ಮುರಿದುಹಾಕುವಂತೆ ಅವಿನಯವು ಐಶ್ವರ್ಯವನ್ನು ನಾಶಮಾಡಿಬಿಡುವುದು.

೨೩ ಎಲೈ ಶೈಲೂಷಗಂಧರ್ವರಾಜನೇ !—ಈ ಮನುಷ್ಯಲೋಕದ ವಾಸವನ್ನು ಸಾಕುಮಾಡು ಹಿಮಾಲಯಕ್ಕೆ ಹೊರಟುಹೋಗಿ ನಿನ್ನ ಹಿತವನ್ನು ನೀನು ಸಾಧಿಸಿಕೋ.

೨೪ ಸಹಿಸಲಶಕ್ಯವಾದ ಪರಾಕ್ರಮವುಳ್ಳ ತನ್ನ ತಮ್ಮ ರಾವಣನು ಮೇಲೆ ಬಿದ್ದುಬಂದುದನ್ನು ನೋಡಿ ವಿವೇಕಿಯಾದ (ಕುಬೇರ) ನು, ಲಂಕಾವಾಸವನ್ನೇ ತ್ಯಾಗಮಾಡಿ ಕೈಲಾಸಕ್ಕೆ ಹೋಗಿ ಧನಾಧ್ಯಕ್ಷನಾಗಿ ಇರುವುದನ್ನು ನೋಡಿಯೇ ಇದೀಯೆ !

ಸ ರಾವಣೋ ರಾಘವಸಾಯಕಾರ್ತ-
ಸ್ತ್ಯಕ್ತ್ವಾ ಶ್ರಿಯಂ ಭೂಮಿತಲೇ ವಿಪನ್ನಃ ।
ಧನಾಧಿಪೋಽದ್ಯಾಪಿ ವಿಶಾಲಕೀರ್ತಿಃ ।
ಕರೋತಿ ರಾಜ್ಯಂ ಕ್ಷಣದಾಚರಾಣಾಂ ॥ ೨೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ರಾಕ್ಷಸಪಾತಾಲ
ಪ್ರವೇಶವರ್ಣನೋನಾಮಾಷ್ಟಾದಶೋತ್ತರ
ದ್ವಿಶತತಮೋಽಧ್ಯಾಯಃ.

---

೨೪. ಆ ರಾವಣನು ಅಣ್ಣನಿಂದ ಲಂಕೆಯನ್ನು ಕಿತ್ತುಕೊಂಡು ಎಷ್ಟುದಿನ ಬದುಕಿದ ನೆಂಬುದನ್ನು ಯೋಚಿಸು ಅವನು ರಾಮನ ಬಾಣದೇಟಿನಿಂದ ಹತನಾಗಿ ಸಕಲ ರಾಜ್ಯಕೋಶಗಳನ್ನೂ ಐಶ್ವರ್ಯಗಳನ್ನೂ ಕಳದುಕೊಂಡು ಕಡೆಗೆ ತಾನೂ ಪ್ರಾಣವನ್ನು ಬಿಟ್ಟುಹೋದನು ಕುಬೇರನು ಆಗ ಕೋಪಿಸದೆ ವಿನಯವಾಗಿದ್ದು ಜಾಣತನದಿಂದ ಕೆಲಸಮಾಡಿದುದರಿಂದ ಈದಿನಕ್ಕೂ ರಾಕ್ಷಸರ ರಾಜನಾಗಿ ಧನಾಧಿಪತಿಯಾಗಿ ಕೈಲಾಸ ದಲ್ಲಿ ಇಂದಿಗೂ ಸುಖವಾಗಿದಾನೆ ಎಂಬುದನ್ನು ನೀನೇ ತಿಳಿದಿರುವುದರಿಂದ ನಿನಗೆ ನಾನಿ ನ್ನೇನೂ ತಿಳಿಸಲಶಕ್ತನಾಗಿರುವೆನೆಂದು ನಾರಾಯನನು ಶೈಲೂಷನಿಗೆ ಹೇಳಿದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದ ರೂಪವಾದ ರಾಕ್ಷಸ
ಪಾತಾಳ ಪ್ರವೇಶವೆಂಬ ಹೆಸರಿನ ಇನ್ನೂರ
ಹದಿನೆಂಟನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ಏಕೋನವಿಂಶೋತ್ತರ ದ್ವಿಶತತಮೋಧ್ಯಾಯಃ॥

॥ ಶೈಲೂಷ ಉವಾಚ ॥

ಕಥಂ ವೈಶ್ರವಣೇ ದತ್ತಾ ಪುರಾ ಲಂಕಾ ದ್ವಿಜೋತ್ತಮ ।
ಕಥಂ ಚಾಪಹೃತಾ ತಸ್ಯ ರಾವಣೇನ ಮಹಾತ್ಮನಾ ॥ ೧ ॥

ಚರಿತಂ ರಾವಣಸ್ಯಾಹಂ ಶ್ರೋತುಮಿಚ್ಛಾಮಿ ತತ್ತ್ವತಃ ।
ತ್ರೈಲೋಕ್ಯಂ ವಿಜಿತಂ ಯೇನ ತಪಸಾ ಪೌರುಷೇಣ ಚ ॥ ೨ ॥

॥ ನಾರಾಯಣ ಉವಾಚ ॥

ಬ್ರಹ್ಮಣೋ ಮಾನಸಃ ಪುತ್ರಃ ಪುಲಸ್ತ್ಯೋ ವಿದಿತಸ್ತಥಾ ।
ತಸ್ಯಾಸೀದ್ವಿಶ್ರವಾ ನಾಮ ಪುತ್ರಸ್ತ್ರೈಲೋಕ್ಯವಿಶ್ರುತಃ ॥ ೩ ॥

---

### ಇನ್ನೂರ ಹತ್ತೊಂಭತ್ತನೆಯ ಅಧ್ಯಾಯವು.

೧ ಶೈಲೂಷನು ಇಷ್ಟಕ್ಕೇ ಬಿಡದ ನಾರಾಯಣನನ್ನು ಕುರಿತು ಇನ್ನೂ ಪ್ರಶ್ನೆ ಮಾಡುತ್ತಾನೆ --ಅಯ್ಯಾ ಬ್ರಾಹ್ಮಣೋತ್ತಮ ! ನೀನೀಗ ಕುಬೇರನ ಕಥೆಯನ್ನು ಹೇಳಿದಯಷ್ಟೆ ಅದನ್ನು ಸ್ವಲ್ಪ ವಿಸ್ತರಿಸಿ ಹೇಳಬೇಕು ಕುಬೇರನಿಗ ಲಂಕಾಧಿಪತ್ಯವನ್ನು ಮೊದಲು ಕೊಟ್ಟವರಾರು ? ಆಮೇಲೆ ಅದು ರಾವಣನಿಂದ ಹೇಗೆ ಅಪಹರಿಸಲ್ಪಟ್ಟಿತು ?

೨ ಅಂತಹ ಬಲಶಾಲಿಯಾದ ರಾವಣನ ಕಥೆಯನ್ನು ವಿಸ್ತಾರವಾಗಿ ಕೇಳಬೇಕೆಂದು ನನಗೆ ಆಸೆಯುಂಟಾಗಿದೆ ಯಾವವಿಧವಾದ ತಪಸ್ಸಿನಿಂದ ಅದಂತಹ ಪೌರುಷದಿಂದ ಆ ಮಹಾನುಭಾವನಾದ ರಾವಣನು ತ್ರಿಲೋಕವನ್ನೂ ಹೇಗೆ ಜಯಿಸಿದನೋ ಅದನ್ನಷ್ಟು ಹೇಳಯ್ಯಾ ವಿಪ್ರವಸಂತ !

### ರಾವಣಾಸುರನ ಚರಿತ್ರೆ.

೩ ಶೈಲೂಷನ ಮಾತನ್ನು ಕೇಳಿ ನಾರಾಯಣಋಷಿಯು ಹೇಳುತ್ತಾನೆ —

ಪೌತ್ರೀ ಬೃಹಸ್ಪತೇಃ ಪತ್ನೀ ಭರದ್ವಾಜಸುತಾ ಶುಭಾ ।
ಬಭೂವ ತಸ್ಯ ರಾಜೇಂದ್ರ ನಾಮ್ನಾ ವೈ ದೇವವರ್ಣಿನೀ ॥ ೪ ॥

ತಸ್ಯಾಂ ಸ ಜನಯಾಮಾಸ ಪುತ್ರಂ ವೈಶ್ರವಣಂ ಪ್ರಭುಂ ।
ಆರಾಧಿತಃ ಸುತಪಸಾ ಪ್ರಾದಾತ್ತಸ್ಯ ಪಿತಾಮಹಃ ॥ ೫ ॥

ಯಕ್ಷೇಶತ್ವಂ ಧನೇಶತ್ವಂ ಲೋಕಪಾಲತ್ವಮೇವ ಚ ।
ಪುಷ್ಪಕಂ ಚ ತಥಾ ಯಾನಂ ಕಾಮಗಂ ಕಾಮರೂಪಿಣಂ ॥ ೬ ॥

---

ಬ್ರಹ್ಮನಿಗೆ ಪುಲಸ್ತ್ಯನೆಂಬ ಹೆಸರುಳ್ಳ ಒಬ್ಬ ಮಾನಸಪುತ್ರನಿದ್ದನೆಂದುಕೇಳಿರುವೆಯಷ್ಟೆ? ಆ ಪುಲಸ್ತ್ಯನಿಗೆ ಮೂರು ಲೋಕಗಳಲ್ಲಿಯೂ ಹೆಸರನ್ನು ಸಂಪಾದಿಸಿದ್ದ ವಿಶ್ರವನೆಂಬ ಮಗನಿದ್ದನು.

೪ ಭಾರದ್ವಾಜಮಹರ್ಷಿಗಳಿಗೆ ದೇವವರ್ಣಿನೀ ಎಂಬ ಬಲು ಚೆಲುವೆಯಾದ ಮಗಳೊಬ್ಬಳಿದ್ದಳು ಈ ಭಾರದ್ವಾಜರು ಬೃಹಸ್ಪತ್ಯಾಚಾರ್ಯರ ಮಕ್ಕಳೆಂದು ನಿನಗೆ ಹೇಗೂ ಗೊತ್ತೇ ಇದೆಯಷ್ಟೆ ? ಈ ಭಾರದ್ವಾಜರ ಮಗಳನ್ನು ಪುಲಸ್ತ್ಯಪುತ್ರ ವಿಶ್ರವನಿಗ ಕೊಟ್ಟು ಲಗ್ನವಾಗಿತ್ತು

೫-೬ ಆ ದೇವವರ್ಣಿನಿಯು ಹೊಟ್ಟೆಯಲ್ಲಿ ವಿಶ್ರವಋಷಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ವೈಶ್ರವಣ (ಕುಬೇರ) ನೆಂದು ನಾಮಕರಣವಾಯಿತು ಈ ವೈಶ್ರವಣನು ಮಹಾತಪಸ್ವಿಯಾಗಿದ್ದನು ಇವನು ಬಹುಕಾಲ ಬ್ರಹ್ಮ (ತನ್ನ ಮುತ್ತಾತ) ನನ್ನು ಕುರಿತು ಭಕ್ತಿಯಿಂದ ತಪಸ್ಸುಮಾಡಲು ಆ ಪಿತೃಪಿತಾಮಹನು ಪ್ರೀತಿಯಿಂದ ತನ್ನ ಮರಿಮಗ ಕುಬೇರ(ವೈಶ್ರವಣನಿಗೆ) ನಿಗೆ ಯಕ್ಷರಮೇಲಿನಧೊರತನ ವನ್ನೂ ಧನಾಧಿಪತ್ಯವನ್ನೂ ದಿಕ್ಪಾಲಕತ್ವವನ್ನೂ ಕೊಟ್ಟನಲ್ಲದೆ, ಇಚ್ಛಾಮಾತ್ರದಿಂದ ಎಲ್ಲೆಲ್ಲಿಬೇಕಾದರೂ ಹೋಗುವ ಶಕ್ತಿಯುಳ್ಳ ಒಂದು ಕಾಮರೂಪಿಯಾದ ಪುಷ್ಪಕ ವಿಮಾನವೆಂಬ ಹೆಸರಿನ ಆಕಾಶವಿಮಾನವನ್ನೂ ಸಹ ಕೊಟ್ಟನು

ಪುತ್ರಂ ಲಬ್ಧವರಂ ರಾಜನ್ವಿಶ್ರವಾ ಅಭ್ಯಭಾಷತ ।
ತ್ರಿಕೂಟೇ ಪರ್ವತಶ್ರೇಷ್ಠೇ ನಿರ್ಮಿತಾ ವಿಶ್ವಕರ್ಮಣಾ ॥ ೭ ॥

ಲಂಕಾ ನಾಮ ಪುರೀ ರಮ್ಯಾ ದೇವರಾಜಕೃತೇ ಪುರಾ ।
ಹೃತ್ವಾ ತಾಂ ದೇವರಾಜಸ್ಯ ಸುಕೇಶತನಯೈಃ ಪುರಾ ॥ ೮ ॥

ಅಧ್ಯಾಸಿತಾ ಮಹಾರಾಜ ತೇಷಾಂ ಜ್ಯೇಷ್ಠಂ ತು ಮಾಲಿನಂ ।
ನಿಪಾತ್ಯ ವಾಸುದೇವೇನ ತೇ ತು ವಿದ್ರಾವಿತಾಸ್ತತಃ ॥ ೯ ॥

ಪಾತಾಲತಲಮಾಶ್ರಿತ್ಯ ತೇ ವಸಂತೀಹ ನಿರ್ಭಯಾಃ ॥ ೧೦ ॥

ತಾಂ ತ್ವಂ ಲಂಕಾಂ ಸಮಾಸಾದ್ಯ ವಸ ಯಕ್ಷಸಮನ್ವಿತಃ ।
ಧರ್ಮೇಣ ಪಾಲಯನ್ರಾಜ್ಯಂ ಸತತಂ ರಾಕ್ಷಸೇಶ್ವರ ॥ ೧೧ ॥

೭-೧೧ ತನ್ನ ಮಗನಿಗೆ ತನ್ನ ಪಿತಾಮಹನು ಕರುಣಿಸಿದ ವರಗಳನ್ನು ಕೇಳಿ ವಿಶ್ರವನು ಬಹಳ ಸಂತೋಷಪಡುತ್ತಾ ಮಗನನ್ನು ಕುರಿತಿಂತೆಂದನು —ಮಗು ! ನೀನು ನಿನ್ನ ಮುತ್ತಾತನಿಂದ ಒಳ್ಳೆಯ ವರಗಳನ್ನು ಪಡೆದುದನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ ನಿನಗೆ ಇನ್ನು ಮುಂದೆ ವಾಸಮಾಡಲು ಅನುಕೂಲ ವಾಗಿರುವ ಸುಂದರವಾದ ಪ್ರದೇಶವನ್ನು ಹೇಳುತ್ತೇನೆ ನೀನು ಅಲ್ಲಿ ಹೋಗಿ ವಾಸ ಮಾಡು ಆ ಸ್ಥಳವಾವುದೆನ್ನುವಿಯೋ ಕೇಳು ಪೂರ್ವದಲ್ಲಿ ತ್ರಿಕೂಟವೆಂಬ ಒಂದು ಪರ್ವತದ ಮೇಲುಗಡೆಯಲ್ಲಿ ದೇವೇಂದ್ರನ ವಾಸಕ್ಕೋಸ್ಕರ ವಿಶ್ವಕರ್ಮನು ಒಂದು ಸುಂದರವಾದ ನಗರವನ್ನು ನಿರ್ಮಾಣಮಾಡಿ ಅದಕ್ಕೆ ಲಂಕೆಯೆಂದು ಹೆಸರಿಟ್ಟನು ಆದರೆ ಇಂದ್ರನು ಆ ಲಂಕೆಯಲ್ಲಿ ಬಹುದಿವಸ ವಾಸಮಾಡುವುದಕ್ಕಾಗಲಿಲ್ಲ ಸುಕೇಶನ ಮಕ್ಕಳಾದ ಮಾಲಿ-ಸುಮಾಲಿ-ಮಾಲ್ಯವಂತರೆಂಬ ಮೂರುಮಂದಿಯೂ ಇಂದ್ರನ ಮೇಲೆ ಬಿದ್ದು ಅವನನ್ನೋಡಿಸಿ ಆ ಲಂಕೆಯನ್ನಾಕ್ರಮಿಸಿಕೊಂಡು ಅಲ್ಲಿ ನಿಂತರು ಆಗ ಅಲ್ಲಿ ಅನೇಕ ರಾಕ್ಷಸರು ಬಂದು ಸೇರಿಬಿಟ್ಟರು ಈ ಮಾಲಿಯ ಪೊಂಡಾಟವು ಮಹತ್ತರವಾದ ಮೇರೆ ಮೀರಿಹೋಗಲು ಮಹಾವಿಷ್ಣುವು ಮಾಲಿಯನ್ನು ಮರ್ದಿಸಿ ಶಮನನ ಮನೆಗೆ ಕಳುಹಿಸಿಕೊಟ್ಟನು ಮಾಲಿಯು ಮಾಯವಾದಮೇಲೆ ಮೃತ ಶೇಷರಾದ ರಕ್ಕಸರು ಓಡಿಹೋಗಿ ಸಾಗರದ ಮಡುವಿನ ಮಧ್ಯದಲ್ಲಿ ಮುಳುಗಿಕೊಂಡ ವರಾಗಿ ಪಾತಾಳತಲದಲ್ಲಿ ಬೆತುಕೊಂಡುಬಿಟ್ಟರು ಈಗ ಅವರು ಅಲ್ಲಿ ದಿಗಿಲಿಲ್ಲದೆ ಬದುಕಿಕೊಂಡಿದ್ದಾರೆ.

**ಧರ್ಮೇ ತೇ ದೀಯತಾಂ ಬುದ್ಧಿಃ ಸರ್ವಾವಸ್ಥಸ್ಯ ಸರ್ವದಾ ।**
**ಧರ್ಮಾದರ್ಥಶ್ಚ ಕಾಮಶ್ಚ ಧರ್ಮಮೂಲಮಿದಂ ಜಗತ್ ॥ ೧೨ ॥**

**ಶ್ರುತ್ವಾ ಪಿತುರ್ವಾಕ್ಯಮದೀನಸತ್ತ್ವೋ**
**ಲಂಕಾಂ ಸಮಾಸಾದ್ಯ ಧನಾಧಿನಾಥಃ ।**

---

೧೧-೧೨ ಈಗ ಆ ಲಂಕೆಯಲ್ಲಿ ಯಾರೂ ಇಲ್ಲ ಆ ಲಂಕೆಗೆ ಈಗ ನೀನು ಹೋಗಿ ಅದನ್ನು ಅಧೀನಮಾಡಿಕೊಂಡು ನಿನ್ನ ಪ್ರಜೆಗಳಾದ ಯಕ್ಷರನ್ನು ಅಲ್ಲಿ ಇಟ್ಟು ಕೊಂಡು ಅವರಿಗೆ ದೊರೆಯಾಗಿ ಸುಖವಾಗಿ ಬಾಳಪ್ಪ! ದೊರೆತನ ಬಂತೆಂದು ಧರ್ಮ ವನ್ನು ಬಿಟ್ಟೀಯೆ, ಜೋಕೆ ಯಾವಾಗಲೂ ಧರ್ಮಾತ್ಮನಾಗಿಯೇ ಇದ್ದುಕೊಂಡು ರಾಜ್ಯವನ್ನಾಳಪ್ಪ ಮಗು ಧರ್ಮವೆಂದು ಹೇಳಿದೆನಲ್ಲ ಅದರ ವಿಚಾರವನ್ನು ಇನ್ನೊಂದುಸ್ವಲ್ಪ ಹೇಳುವೆನು ಕೇಳು ನಿನ್ನ ಬುದ್ಧಿ ಯಾವಾಗಲೂ ಧರ್ಮದಲ್ಲಿಯೇ ತಗಲಿಕೊಂಡಿರಲಿ ಸಕಲವಿಧವಾದ ಅವಸ್ಥೆ (ಎಚ್ಚರ, ಕನಸು, ನಿದ್ರೆ) ಗಳಲ್ಲೂ ಯಾವಾಗಲೂ ಧರ್ಮವನ್ನು ಬಿಡಬೇಡ ಧರ್ಮದಿಂದಲೇ ಅರ್ಥ (ಧನ) ವೂ, ಕಾಮವೂ ಲಭಿಸುವುವು ಎಷ್ಟು ಮಾತನಾಡಿದರೇನು? ಈ ಪ್ರಪಂಚವೇ ಧರ್ಮ ಮೂಲವೆಂದು ತಿಳಿದರೆ ಸಾಕು ಇಂತು ಮಗನಿಗೆ ವಿಶ್ರವನು ಹೇಳಿದನು

೧೩ ಪರಮಸಾತ್ತ್ವಿಕನಾದ ವೈಶ್ರವಣನು ತನ್ನ ತಂದೆಯು ಹೇಳಿದ ಧರ್ಮಸಮ್ಮತವಾದ ಉಪದೇಶವಾಕ್ಯಗಳನ್ನು ಕೇಳಿ ಅವನಿಗೆ ಅಡ್ಡಬಿದ್ದು ಲಂಕಾಪಟ್ಟಣಕ್ಕೆ ಪ್ರಯಾಣಬೆಳಸಿದನು ಆ ಕುಬೇರನು ಅಲ್ಲಿ ಧನಾಧ್ಯಕ್ಷನಾಗಿ ಧರ್ಮದಿಂದ ರಾಜ್ಯ

ಧರ್ಮೇಣ ಲೋಕಂ ಸ ತು ರಂಜಯಾನ
ಶ್ಚಕಾರ ರಾಜ್ಯಂ ಕ್ಷಣದಾಚರಾಣಾಂ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನಾನುಶಾಸನೇ
ಲಂಕಾಕಥಾಯಾಂ ವೈಶ್ರವಣಾಖ್ಯಾನವರ್ಣನೋ
ನಾಮೈಕೋನವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.

---

ಪರಿಪಾಲನೆಮಾಡುತ್ತಾ ಸಕಲ ಯಕ್ಷರಾಕ್ಷಸವೃಂದಕ್ಕೂ ಅಚ್ಚುಮೆಚ್ಚಾಗಿದ್ದುಕೊಂಡು ರಾಜ್ಯವನ್ನಾಳುತ್ತಿದ್ದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ಶೈಲೂಷನನ್ನು
ಕುರಿತು ನಾಡಾಯನನ ಅನುಶಾಸನ ಪ್ರಸ್ತಾವದಲ್ಲಿ
ಲಂಕಾಕಥಾ ಸಂದರ್ಭದಲ್ಲಿ ವೈಶ್ರವಣನ ಚರಿತ್ರೆ
ಎಂಬ ಹೆಸರಿನ ಇನ್ನೂರ ಹತ್ತೊಂಭತ್ತನೆಯ
ಅಧ್ಯಾಯವು ಮುಗಿಯಿತು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ॥

---

॥ ನಾಡಾಯನ ಉವಾಚ ॥

ಏತಸ್ಮಿನ್ನೇವ ಕಾಲೇ ತು ಸುಮಾಲೀ ವಸುಧಾತಲಂ ।
ಚಚಾರಾದಾಯ ತನಯಾಂ ಕೈಕಸೀಂ ನಾಮ ನಾಮತಃ ॥ ೧ ॥

ಚರನ್ಸ ವಸುಧಾಂ ಸ್ಫೀತಾಂ ದದರ್ಶಾಥ ನರಾಧಿಪಂ ।
ಪುಷ್ಪಕಂ ಯಾನಮಾರೂಢಂ ಶ್ರಿಯಾ ಪರಮಯಾ ಯುತಂ ॥ ೨ ॥

---

### ಇನ್ನೂರ ಇಪ್ಪತ್ತನೆಯ ಅಧ್ಯಾಯವು.

೧ ನಾಡಾಯನ ಋಷಿಗಳು ಶೈಲೂಷನನ್ನು ಕುರಿತು ಹೇಳುತ್ತಾರೆ — ಶೈಲೂಷ ! ಮುಂದೆ ನಾನು ಹೇಳುವ ರಾವಣಾಸುರನ ಕಥೆಯನ್ನು ಮನಸ್ಸಿಟ್ಟು ಕೇಳಯ್ಯ ! ಕುಬೇರನು ಸುಖವಾಗಿ ಲಂಕಾಪಟ್ಟಣದಲ್ಲಿ ರಾಜ್ಯವಾಳುತ್ತಿದ್ದ ಸಮಯ ದಲ್ಲಿಯೇ ಮಾಲಿಯ ತಮ್ಮ ಸುಮಾಲಿಯು, ಮದುವೆಯಿಲ್ಲದೆ ಕನ್ಯಾವಸ್ಥೆಯಲ್ಲಿಯೇ ಇದ್ದ ತನ್ನ ಮಗಳಾದ ಕೈಕಸೆಯೆಂಬ ಹುಡುಗಿಯನ್ನು ಕರೆದುಕೊಂಡು ಭೂಮಂಡಲ ದಲ್ಲೆಲ್ಲಾ ಸಂಚರಿಸುತ್ತಿದ್ದನು

೨. ಹೀಗೆ ಭೂಸಂಚಾರಮಾಡುತ್ತಿದ್ದಾಗ ಅಷ್ಟೈಶ್ವರ್ಯಸಂಪನ್ನನಾದ ಕುಬೇರನು ಪುಷ್ಪಕವಿಮಾನದ ಮೇಲೆ ಕುಳಿತುಕೊಂಡು ಹೋಗುತ್ತಿದ್ದುದು ಸುಮಾಲಿಯ ಕಣ್ಣಿಗೆ ಬಿತ್ತು

ತಂ ದೃಷ್ಟ್ವಾ ಕೈಕಸೀಂ ವಾಕ್ಯಂ ಚೋವಾಚ ರಜನೀಚರಃ ।
ಪುತ್ರೀಪ್ರದಾನಕಾಲಸ್ತೇ ನ ಕಶ್ಚಿತ್ತ್ವಾಂ ವೃಣೋತಿ ವಾಂ ॥ ೩ ॥

ಅಪ್ರಾರ್ಥಿತಪ್ರದಾನಂ ಚ ಧರ್ಷಣಾಭಯಶಂಕಯಾ ।
ನ ಕರೋಮಿ ವಿಶಾಲಾಕ್ಷಿ ತವಾರ್ಥಂ ವರವರ್ಣಿನಿ ॥ ೪ ॥

ಕಷ್ಟಂ ಕನ್ಯಾಪಿತೃತ್ವಂ ಹಿ ನರಾಣಾಂ ಮಾನಕಾಂಕ್ಷಿಣಾಂ ।
ಧ್ರುವಂ ಕನ್ಯಾಪಿತೃತ್ವಂ ಹಿ ಶಕ್ರಸ್ಯಾಪಿ ಪ್ರಧರ್ಷಣಂ ॥ ೫ ॥

ಮಾತುಃ ಕುಲಂ ಪಿತೃಕುಲಂ ಯತ್ರ ಕನ್ಯಾ ಪ್ರದೀಯತೇ ।
ಕುಲತ್ರಯಂ ಸಂತರೀತಂ ಕನ್ಯಾಂ ಕೃತ್ವೇಹ ತಿಷ್ಠತಿ ॥ ೬ ॥

---

೩ ಕುಬೇರನ ಐಶ್ವರ್ಯವನ್ನೂ ಅವನ ವೈಖರಿಯನ್ನೂ ನೋಡಿ ಸುಮಾಲಿಯು ತನ್ನ ಮಗಳಾದ ಕೈಕಸಿಯನ್ನು ಕುರಿತು ಈ ಮಾತನ್ನು ಹೇಳಿದನು —ಮಗಳೇ! ನಿನಗ ವಿವಾಹ ವಯಸ್ಸು ಪ್ರಾಪ್ತವಾಗಿದೆ. ಇದಕ್ಕಾಗಿ ನಾನು ನಿನ್ನನ್ನು ಕರೆದು ಕೊಂಡು ವರಾನ್ವೇಷಣೆಗಾಗಿ ಎಷ್ಟೋ ಕಡೆ ಸುತ್ತಿ ಸುತ್ತಿ ಸಾಕಾಯಿತು ಆದರೂ ನಿನ್ನನ್ನು ಇದುವರಿಗೆ ಯಾರೂ ತಾವಾಗಿ ಒಂದು ವರಿಸಲಿಲ್ಲ

೪ ನಾನೇ ಹೋಗಿ ಯಾರನ್ನಾದರೂ ಪ್ರಾರ್ಥಿಸೋಣವೆಂದರೆ, ಎಲ್ಲಿ ಯಾರು ನನ್ನನ್ನು ತಿರಸ್ಕರಿಸಿಬಿಡುವರೋ? ಎಂಬ ಭಯವುಂಟಾಗಿದೆ ಅಮ್ಮ! ನಿನ್ನ ಮದುವೆಗಾಗಿ ಇನ್ನು ನಾನು ಇನ್ನೇನೂ ಹೆಚ್ಚಾಗಿ ಪ್ರಯತ್ನ ಮಾಡಲಾರೆನಮ್ಮ!

೫. ಅಯ್ಯೋ! ಕನ್ಯಾಪಿತೃತ್ವವು ಎಂತಹ ಕಷ್ಟದಾಯಕವಪ್ಪ! ಅದರಲ್ಲೂ ಮಾನವಾಗಿ ಸಂಸಾರಮಾಡಿಕೊಂಡಿರುವವರಿಗಿರುವ ಕಷ್ಟವನ್ನು ಹೇಳಲು ಸಾಧ್ಯವೇ ಇಲ್ಲ ಇಂದ್ರನ ಪದವಿಯಂತಹ ಅಧಿಕಾರ ಪದವಿಯಲ್ಲಿರುವ ಪುಣ್ಯಶಾಲಿಗೂ (ಇಂದ್ರನಿಗೂ ಸಹ) ಕನ್ಯಾಪಿತೃತ್ವವೆಂಬುದು ಬಹಳ ಲಾಘವನ್ನುಂಟುಮಾಡಿಬಿಡು ತಕ್ಕುದಾಗಿದೆ

೬. ಯಾವ ಮನುಷ್ಯನು ಒಂದೇ ಒಂದು ಕನ್ಯಾದಾನವನ್ನು ಮಾಡುವನೋ ಅಂತಹವನ ಮಾತೃಕುಲ, ಪಿತೃಕುಲವೇ ಮುಂತಾದ ಕುಲತ್ರಯಗಳೂ ನಿಸ್ಸಂಶಯ ವಾಗಿ ಉದ್ಧಾರವಾಗುತ್ತವೆ

ತೇನಾಹಂ ತ್ವಾಂ ನ ದಾಸ್ಯಾಮಿ ಸಾ ತ್ವಂ ಗಚ್ಛ ಸ್ವಯಂ ಶುಭೇ ।
ಭರ್ತಾರಂ ವರಯಸ್ವಾಶು ಮುನಿಂ ವಿಶ್ರವಸಂ ವಿಭುಂ ॥ ೭ ॥

ಯತಃ ಸೋಽಯಂ ಧನಾಧ್ಯಕ್ಷಃ ಶ್ರಿಯಾ ಪರಮಯಾ ಯುತಃ ।
ತಾದೃಶಂ ತನಯಂ ತಸ್ಮಾಜ್ಜನಯಿಷ್ಯಸಿ ಜಾಮಿನಿ ॥ ೮ ॥

ಜಗಾಮ ಕೈಕಸೀ ರಾಜಂಸ್ತತೋ ವಿಶ್ರವಸಂ ಮುನಿಂ ।
ರೌದ್ರೇ ಮುಹೂರ್ತೇ ಸಂಪ್ರಾಪ್ತೇ ಸಂಧ್ಯಾಯಾಂ ನೃಪಸತ್ತಮ ॥ ೯ ॥

ಸಾಽಭಿವಂದ್ಯ ತತಃ ಪಾದೌ ತಸ್ಯ ವಿಶ್ರವಸೋ ಮುನೇಃ ।
ಬಭೂವ ಪುರತಸ್ತನ್ವೀ ವ್ರೀಡಮಾನೇವ ಲಜ್ಜಯಾ ॥ ೧೦ ॥

---

೭ ಮಗಳೇ! ನಿನಗೆ ನಾನು ಗಂಡನನ್ನು ಗೊತ್ತುಮಾಡಲಾರೆನಾದ್ದರಿಂದ ನೀನಾಗಿ ಹೋಗಿ ಸ್ವಯಂವರಮಾಡಿಕೊಂಡು ನಿನಗೆ ಬೇಕಾದ ಪತಿಯನ್ನು ಸಂಪಾದಿಸಿಕೋ! ನೋಡು ನಾನೊಂದು ವರವನ್ನು ತೋರಿಸುತ್ತೇನೆ ನಾನು ಅವನ ಬಳಿಗೆ ಬರುವುದಿಲ್ಲ ನೀನೇ ಅವನ ಬಳಿಗೆ ಹೋಗಿ, ನನ್ನನ್ನು ನೀನು ಮದುವೆ ಮಾಡಿಕೊಳ್ಳಬೇಕೆಂದು ಕೇಳಿಕೋ ಆ ವರನಾರೆನ್ನುವಿಯೋ—ಅವನೇ ಮಹಾತಪಸ್ವಿಯಾದ ವಿಶ್ವವಸಮುನಿಯು.

೮. ಈ ವಿಶ್ವವಸನನ್ನೇ ನೀನು ಮದುವೆಮಾಡಿಕೊಂಡೆಯಾದರೆ, ಈ ಪುಷ್ಪಕವಿಮಾನದ ಮೇಲೆ ಹೋಗುತ್ತಿರುವ ಕುಬೇರನನ್ನು ನೋಡಿದೆಯಷ್ಟೆ? ಅವನಂತಹ ಮಗನೇ ನಿನ್ನ ಹೊಟ್ಟೆಯಲ್ಲಿ ಹುಟ್ಟಿ ತ್ರಿಲೋಕಾಧಿಪತಿಯಾಗುತ್ತಾನೆ, ನೋಡು.

೯ ಹೀಗೆ ಹೇಳಿ ಆ ಸುಮಾಲಿಯು ತನ್ನ ಮಗಳನ್ನು ವಿಶ್ವವಸ್ಸಿನ ಆಶ್ರಮದ ಬಳಿ ಬಿಟ್ಟು ಹೊರಟುಹೋದನು ಆಗ ಸಂಧ್ಯಾಕಾಲವಾಗಿತ್ತು ಪಶ್ಚಿಮದಿಕ್ಕು ಕೆಂಪು ಬಣ್ಣದಿಂದ ಕೂಡಿ ಭಯಂಕರವಾಗಿ ಕಾಣಿಸುತ್ತಿತ್ತು ಅಂತಹ ರೌದ್ರಮುಹೂರ್ತದಲ್ಲಿ ಕೈಕಸಯು ವಿಶ್ರವಸಋಷಿಯ ಹತ್ತಿರಕ್ಕೆ ಹೋದಳು

೧೦ ಅಲ್ಲಿಗೆ ಹೋದೊಡನೆ ಆ ಋಷಿಯ ಕಾಲುಗಳನ್ನು ಹಿಡಿದುಕೊಂಡು ನಮಸ್ಕಾರಮಾಡಿ ಅವನ ಮುಂದೆ ನಾಚಿಕೆಯಿಂದ ಯಾವ ಮಾತನ್ನೂ ಆಡದೆ ಸುಮ್ಮನೆ ನಿಂತುಕೊಂಡಳು

ಉವಾಚ ತಾಂ ಮುನಿಃ ಪ್ರಹ್ವಾಂ ಕೈಕಸೀಂ ಚಾರುಹಾಸಿನೀಂ ।
ವಿಜ್ಞಾತಸ್ತ್ವದಭಿಪ್ರಾಯೋ ಮಯ್ಯಾದ್ಯ ವರವರ್ಣಿನಿ ॥ ೧೧ ॥

ಪುತ್ರಾರ್ಥಂ ತ್ವಮನುಪ್ರಾಪ್ತಾ ಮತ್ಸಮೀಪಮನಿಂದಿತೇ ।
ಪುತ್ರಾರ್ಥಂ ತ್ವಮನುಪ್ರಾಪ್ತಾ ತಾದೃಶಂ ಜನಯಿಷ್ಯಸಿ ॥ ೧೨ ॥

ಏವಮುಕ್ತ್ವಾ ತ್ವಥೋಕ್ತಾ ಸಾ ತತ್ರೋವಾಸ ಸುಖಂ ತದಾ ।
ತತಃ ಕಾಲೇನ ಸಾ ಪುತ್ರಂ ಜನಯಾಮಾಸ ಭಾಮಿನೀ ॥ ೧೩ ॥

ದಶಾಸ್ಯಂ ವಿಂಶತಿಭುಜಮೇಕದೇಹಂ ಮಹಾಬಲಂ ।
ನಾಮ ತಸ್ಯ ಪಿತಾ ಚಕ್ರೇ ದಶಗ್ರೀವೇತಿ ಬುದ್ಧಿಮಾನ್ ॥ ೧೪ ॥

---

೧೧ ಬಲು ಚೆಲುವೆಯಾಗಿದ್ದ ಆ ಸುಂದರಿಯು ನಾಚಿಕೆಯಿಂದ ಕತ್ತು ಬಗ್ಗಿಸಿ ತನ್ನ ಮುಂದೆ ನಿಂತಿರುವುದನ್ನು ನೋಡಿ ವಿಶ್ರವಸನಿಂತೆಂದನು — ಎಲೆ ಹುಡುಗಿ! ನಿನ್ನ ಮನಸ್ಸು ನನಗೆ ಚೆನ್ನಾಗಿ ಗೊತ್ತಾಯಿತು ನೀನು ನನ್ನನ್ನು ಮದುವೆಮಾಡಿಕೊಳ್ಳಬೇಕೆಂದಿರುವಿಯಲ್ಲವೇ?

೧೨ ನನ್ನಿಂದ ನಿನಗೆ ಮಕ್ಕಳಾಗಬೇಕೆಂಬ ಆಶೆಯು ತುಂಬಿರುವಂತೆ ತೋರುತ್ತದೆ ಆದರೆ ನನ್ನ ಒಳಿಗೆ ನೀನು ಬಂದಿರುವ ಮುಹೂರ್ತವು ಬಹಳ ಭಯಂಕರವಾದುದಾಗಿರುವುದರಿಂದ ಮೊದಲು ನನ್ನಿಂದ ನಿನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನು ತ್ರಿಲೋಕಭೀಕರನಾಗಿ ಪರಿಣಮಿಸುವನು

೧೩. ಈ ರೀತಿ ವಿಶ್ರವಸನು ನುಡಿದ ಮಾತನ್ನು ಕೇಳಿ ಕೈಕಸಿಯು, ತನ್ನನ್ನು ಈ ಮುನಿಯು ಮುಖ್ಯವಾಗಿ ಒಪ್ಪಿಕೊಂಡು ಮದುವೆಮಾಡಿಕೊಂಡದ್ದೇ ಸಾಕೆಂದು ಸಂತೋಷಪಡುತ್ತಾ, ಸ್ವಾಮಿ! ನೀವು ಹೇಳಿದಂತೆ ಆಗಲಿ ನಿಮ್ಮ ಮಾತಿಗೆ ನಾನು ಎದುರಾಡುವುದಿಲ್ಲ. ನನ್ನನ್ನು ಸುಖವಾಗಿ ಇಟ್ಟುಕೊಂಡಿದ್ದರೆ ಸಾಕೆಂದು ಹೇಳಿ, ಆ ಕೈಕಸೆಯು ಋಷಿಯೊಡನೆ ಬೇಕಾದ ಭೋಗಗಳನ್ನನುಭವಿಸುತ್ತಾ ಇರುವಲ್ಲಿ, ಕೈಕಷಿಯು ಗರ್ಭವನ್ನು ಧರಿಸಿ ಒಬ್ಬ ಮಗನನ್ನು ಪ್ರಸುವಿಸಿದಳು.

೧೪. ಆಗ ಕೈಕಸಿಯ ಹೊಟ್ಟೆಯಲ್ಲಿ ಹುಟ್ಟಿದ ಮಗು ಬಹು ವಿಚಿತ್ರವಾಗಿತ್ತು ಆ ಮಗುವಿಗೆ ಹತ್ತು ತಲೆ, ಇಪ್ಪತ್ತು ತೋಳು, ಕತ್ತಿನಿಂದ ಕೆಳಗೆ ನೋಡಿದರೆ ಒಂದೇ

**ತತೋ ದ್ವಿತೀಯಂ ತನಯಂ ಮಹಾಕಾಯಂ ಸುಷಾವ ಸಾ ।**
**ಕುಂಭಕರ್ಣೇತಿ ತಸ್ಯಾಪಿ ನಾಮ ಚಕ್ರೇ ತದಾ ಪಿತಾ　　॥ ೧೫ ॥**

**ತತ್ರ ಶೂರ್ಪಣಖಾಂ ಕನ್ಯಾಂ ಜನಯಾಮಾಸ ಸಾ ತದಾ ।**
**ತತಃ ಕದಾಚಿತ್ಸಾ ಪುತ್ರಂ ಕೇಕಸೀ ಜ್ಯೇಷ್ಠಮಬ್ರವೀತ್　　॥ ೧೬ ॥**

**ದರ್ಶಯಂತೀ ಧನಾಧ್ಯಕ್ಷಂ ಸವ್ರೀಡೇವ ಪರಂತಪ ।**
**ಪಶ್ಯ ಸ್ವೀಯಾಗ್ರಜಸ್ಯಾಸ್ಯ ಶ್ರಿಯಂ ಭ್ರಾತುರ್ದಶಾನನ　　॥ ೧೭ ॥**

**ಸ ತ್ವಂ ಯತ್ನಮಧಾಸ್ಥಾಯ ಭವ ವೈಶ್ರವಣೋಪಮಃ ।**
**ಏವಮುಕ್ತಸ್ತು ಗೋಕರ್ಣಂ ಪ್ರಯಯೌ ಭ್ರಾತೃಭಿಃ ಸಹ　　॥ ೧೮ ॥**

---

ದೇಹ ಆದರೆ ಆ ಮಗುವು ಬಹು ಗಟ್ಟಿಮುಟ್ಟಾಗಿ ನೋಡುವುದಕ್ಕೆ ಚೆನ್ನಾಗಿತ್ತು ಆ ಮಗುವನ್ನು ನೋಡಿ ಅವರ ತಂದೆಯಾದ ವಿಶ್ರವಸುವು ಅವರ ರಚನೆಗೆ ತಕ್ಕಂತೆ ತನ್ನ ಬುದ್ಧಿಯನ್ನು ಪ್ರಯೋಗಿಸಿ ದಶಗ್ರೀವನೆಂದು ನಾಮಕರಣಮಾಡಿದನು

೧೫ ಈ ದಶಗ್ರೀವನು ಹುಟ್ಟಿದ ಕೆಲವು ಕಾಲ ಕಳೆದ ಮೇಲೆ ಕೈಕಸಿಗ ಇನ್ನೊಂದು ಗಂಡು ಮಗುವಾಯಿತು ಅದಕ್ಕೋ ಬಹು ದೊಡ್ಡ ದೇಹ, ದಪ್ಪ ಹೊಟ್ಟೆ, ಕಿವಿಗಳೇ ದೊಡ್ಡ ಗುಡಾಣದ ಹಾಗೆ ಹೀಗೆ ಹುಟ್ಟಿದ ಮಗುವನ್ನು ನೋಡಿ ಆ ಎರಡನೆಯ ಮಗನಿಗೆ ವಿಶ್ರವಋಷಿಯು ಕುಂಭಕರ್ಣನೆಂದು ನಾಮಕರಣ ಮಾಡಿದನು

೧೬ ಮೂರನೆಯದಾಗಿ ಒಂದು ಹೆಣ್ಣು ಮಗುವನ್ನು ಕೈಕಸಿಯು ಹೆತ್ತಳು ಅದರ ಉಗುರು ದೊಡ್ಡ ಮೊರ (ಅರಮನೇ ಬಾಗಿನದ ಮೊರ) ದಂತೆ ಅಗಲವಾಗಿದ್ದು ದನ್ನು ನೋಡಿ ತಂದೆಯು ತದನುರೂಪವಾಗಿ ಶೂರ್ಪನಖಿಯೆಂಬ ಅನ್ವರ್ಥನಾಮವನ್ನು ಇಟ್ಟನು

೧೭-೧೮ ಮಕ್ಕಳು ದಿನೇ ದಿನೇ ದೊಡ್ಡವರಾಗುತ್ತ ಬಂದುದನ್ನು ನೋಡಿ ತಾಯಿಯಾದ ಕೈಕಸಿಯು ಮಕ್ಕಳ ಮೇಲಿನ ಪ್ರೇಮದಿಂದ ಹಿರಿಯ ಮಗನನ್ನು ತನ್ನ ಹತ್ತಿರ ಕರೆದು, ಅವನ ತಲೆದಡವಿ ಈ ಮಾತನ್ನು ಹೇಳಿದಳು —ಮಗು ' ನೋಡು, ನಿನ್ನ ಅಣ್ಣ ಹೇಗಿದ್ದಾನೆ, ನೋಡಪ್ಪ ಅವನ ಐಶ್ವರ್ಯವನ್ನು ನೋಡು. ಲೋಕದ ಹಣವೆಲ್ಲಾ ಅವನ ಕೈಯಲ್ಲೇ ಇದೆ ಅವನಿಗೆ ಧನಾಧ್ಯಕ್ಷನೆಂಬ ಹೆಸರು

ಶೀರ್ಣಪರ್ಣಾಶನಸ್ತತ್ರ ಚಕಾರ ಸುಮಹತ್ತಪಃ ।
ಪೂರ್ಣೇ ವರ್ಷಸಹಸ್ರೇ ತು ಶಿರಶ್ಛಿತ್ತ್ವಾ ದಶಾನನಃ ॥ ೧೯ ॥

ಜುಹಾವಾಗ್ನೌ ಮಹಾಭಾಗ ಏಕೈಕಂ ತಪಸಾ ಕೃಶಃ ।
ಗ್ರೀಷ್ಮೇ ಪಂಚತಪಾ ಭೂತ್ವಾ ವರ್ಷಾಸ್ವಾಕಾಶಶಾಯಿಕಃ ॥ ೨೦ ॥

ಆರ್ದ್ರವಾಸಸ್ತ್ವ ಶಿಶಿರೇ ಕುಂಭಕರ್ಣೋऽಪ್ಯತಪ್ಯತ ।
ವಿಭೀಷಣಸ್ತತಃ ಕಾಲೇ ಷಷ್ಠೇ ಷಷ್ಠೇ ಫಲಾಶನಃ ॥ ೨೧ ॥

ಬೇರೆ ಬಂದಿದೆ ನೀನೂ ಪ್ರಯತ್ನಮಾಡಿ ನಿನ್ನ ಅಣ್ಣನಂತೆ ಐಶ್ವರ್ಯವಂತನಾಗಿ ಅವನ ಸರಿಸಮನಾಗಿ ಬದುಕಬೇಕಪ್ಪ ಎಂದು, ಸ್ವಲ್ಪ ನಾಚಿಕೆಯಿಂದ ಕುಬೇರನ ಕಡೆಗೆ ಮಗನನ್ನು ತಿರುಗಿಸಿ ಬೆಟ್ಟುಟ್ಟು ತೋರಿಸುತ್ತಾ ಹೇಳಿದಳು ತಾಯಿಯ ಬಾಯಿಯಿಂದ ಈ ಮಾತು ಹೊರಟೊಡನೆಯೇ ಬಹು ಚಟುವಟಿಕೆಯುಳ್ಳ ಆ ದಶಗ್ರೀವನೂ ಹಾಗೇ ಆಗಲಮ್ಮ! ಅದರಂತೆಯೇ ಆಶೀರ್ವಾದ ಮಾಡೆಂದು ತಾಯಿಗ ಹೇಳಿ, ಆ ಕೂಡಲೆ ತಪಸ್ಸಿಗೋಸ್ಕರ ತನ್ನ ತಮ್ಮನನ್ನು ಜತೆಯಲ್ಲಿ ಕರಮುಕೊಂಡು, ನೀನೂ ಬಾರೋ! ಹೋಗೋಣ, ತಪಸ್ಸಿನಿಂದ ದೇವರನ್ನು ಮೆಚ್ಚಿಸಿ ಹಣಗಾರ ರಾಗೋಣ ಅಮ್ಮನ ಮನಸ್ಸಿಗೆ ಸಂತೋಷವನ್ನುಂಟುಮಾಡೋಣವೆಂದು ಹೇಳಿ, ಮಾತೃವಾಕ್ಯಕ್ಕೆ ಮರುಮಾತನಾಡದೆ ತಪಸ್ಸಿಗೋಸ್ಕರ ಗೋಕರ್ಣ ಮಹಾಕ್ಷೇತ್ರಕ್ಕೆ ಅರೆನಿಮಿಷ ತಡ ಮಾಡದೆ ಹೊರಟೇಬಿಟ್ಟನು

೧೯-೨೦ ಅಲ್ಲಿ ದಶಗ್ರೀವನು ಒಣಗಿದ ತರಗೆಲೆಗಳನ್ನು ತಿಂದುಕೊಂಡು ಭಯಂಕರವಾದ ತಪಸ್ಸಿಗೆ ಕುಳಿತನು ಒಂದು ಸಾವಿರ ವರ್ಷಗಳು ಈ ಮೇರೆ ತಪಸ್ಸನ್ನು ಮಾಡಿ ಆ ವರ್ಷ ಸಹಸ್ರಾಬ್ದ್ಯದಲ್ಲಿ ತನ್ನ ತಲೆಗಳನ್ನು ಒಂದೊಂದನ್ನಾಗಿ ಕತ್ತರಿಸಿ ಅವುಗಳನ್ನು ಅಗ್ನಿಜ್ವಾಲೆಯಲ್ಲಿ ಹೋಮಮಾಡುತ್ತ ಬಂದನು ತಪಸ್ಸಿನಿಂದ ಕೃಶನಾದ ಆ ರಾವಣನು ಬಿಸಿಲುಗಾಲದಲ್ಲಿ ಪಂಚಾಗ್ನಿಮಧ್ಯದಲ್ಲಿ ಕುಳಿತು, ವರ್ಷ ಋತುವಿನಲ್ಲಿ ಬಯಲಲ್ಲಿ ಕುಳಿತು ತಪಸ್ಸನ್ನು ಮಾಡಿದನು

೨೧ ದಶಗ್ರೀವನ ಜತೆಯಲ್ಲಿ ಬಂದಿದ್ದ ಕುಂಭಕರ್ಣನೂ ಸಹ ಅಣ್ಣನ ಮಾದರಿಯನ್ನನುಸರಿಸಿ ಚಳಿಗಾಲದಲ್ಲಿ ಒದ್ದೆ ಬಟ್ಟೆಯನ್ನುಟ್ಟುಕೊಂಡು ತಪಸ್ಸು ಮಾಡುತ್ತಲಿದ್ದನು ಕೈಕಸೆಯ ಕಿರೀಮಗ ವಿಭೀಷಣನೂ ಈ ಅಣ್ಣಂದಿರ ಜತೆ ಯಲ್ಲಿಯೇ ಬಂದು ಫಲಾಹಾರಮಾಡುತ್ತಾ ತಪಸ್ಸುಮಾಡುತ್ತಿದ್ದನು

ಪರಿಚರ್ಯಾಂ ತದಾ ತೇಷಾಂ ಚಕ್ರೇ ಶೂರ್ಪಣಖಾ ಸ್ವಸಾ ।
ದಶವರ್ಷಸಹಸ್ರಾಂತೇ ತದಾ ಕಾಲೇ ದಶಾನನಃ ॥ ೨೨ ॥

ದಶಮಂ ಮಸ್ತಕಂ ವಹ್ನೌ ಜುಹೂಷತಿ ಯದಾ ಪ್ರಭೋ ।
ತತಸ್ತಂ ದೇಶಮಾಗಮ್ಯ ಬ್ರಹ್ಮಾ ವಚನಮಬ್ರವೀತ್ ॥ ೨೩ ॥

॥ ಬ್ರಹ್ಮೋವಾಚ ॥

ವರಂ ವರಯ ಭದ್ರಂತೇ ಪರಿತುಷ್ಟೋಽಸ್ಮಿ ಪುತ್ರಕ ।
ತಪಸಾ ತೇ ಸುತಪ್ತೇನ ಸತ್ತ್ವೇನ ವಿಪುಲೇನ ಚ ॥ ೨೪ ॥

೨೨ ಶೂರ್ಪನಖಿಯು ತನ್ನ ಸಹೋದರರು ತಪಸ್ಸಿಗೆ ಹೊರಟೊಡನೆ ತಾನೂ ಸಹ ಮನೆಯಲ್ಲಿ ನಿಲ್ಲದೆ ಅವರೊಡನೆ ಓಡಿ ಬಂದುಬಿಟ್ಟಳು ಗೋಕರ್ಣದ ಸಮುದ್ರ ತೀರದಲ್ಲಿ ತಪಸ್ಸುಮಾಡುತ್ತಿದ್ದ ಆ ತನ್ನ ಅಣ್ಣಂದಿರಿಗೆ ಇವಳು ಸೇವೆಮಾಡುತ್ತಾ ಇದ್ದಳು ಹೀಗೆಯೇ ಹತ್ತು ಸಾವಿರ ವರ್ಷಗಳು ಕಳೆದುಹೋದುವು

೨೩ ಹತ್ತು ಸಾವಿರ ವರ್ಷದವರಿಗೆ ದಶಗ್ರೀವನು ಒಂಭತ್ತು ತಲೆಯನ್ನು ಕಡಿದು ಹೋಮಮಾಡಿಬಿಟ್ಟಿದ್ದನು ಹತ್ತು ಸಾವಿರ ವರ್ಷದ ಕೊನೆಯಲ್ಲಿ ಉಳಿದಿದ್ದ ಇನ್ನೊಂದು ತಲೆಯನ್ನೂ ಕತ್ತರಿಸಿ ಅಗ್ನಿಗೆ ಆಹುತಿಕೊಡಬೇಕೆಂದು ನಿಶ್ಚಯಿಸಿ ಕತ್ತಿನ ಬಳಿಗೆ ಕತ್ತಿಯನ್ನು ತರುತ್ತಿರುವಷ್ಟರಲ್ಲಿ ಸತ್ಯಲೋಕದಲ್ಲಿದ್ದ ಬ್ರಹ್ಮನು ವೇಗವಾಗಿ ಬಂದು ಆ ಕತ್ತಿಯನ್ನು ತನ್ನ ಕೈಯಿಂದ ಕಿತ್ತಿಸಿದ, ಆ ಕೈಕಸಿಯ ಕೂಸನ್ನು ಕುರಿತು, ಆ ಬ್ರಹ್ಮನು ಇಂತೆಂದನು

೨೪ ಬ್ರಹ್ಮನು ಹೇಳುತ್ತಾನೆ — ಎಲೋ ಮಗು ! ನಿನ್ನ ತಪಸ್ಸಿಗೆ ಮೆಚ್ಚಿಕೊಂಡಿದ್ದೇನೆ ನಿನಗೆ ಮಂಗಳವಾಗಲಿ ನಿನ್ನ ಬಹುಕಾಲದ ತಪಸ್ಸಿಗಾಗಿ ಬಹು ಸಂತೋಷಪಟ್ಟು ನಾನು, ಮಹಾತಪಸ್ವಿಯಾದ ನಿನಗೆ ಬೇಕಾದ ವರಗಳನ್ನು ಕೊಡುತ್ತೇನೆ ಸಂಕೋಚವಿಲ್ಲದೆ ಕೇಳಿಕೊ

॥ ನಾರಾಯಣ ಉವಾಚ ॥

ದೇವಾದೀನಿ ಸ ಭೂತಾನಿ ಕೀರ್ತಯಾಮಾಸ ರಾಕ್ಷಸಃ ।
ಸರ್ವಾಣ್ಯೇವಾವಿಶೇಷೇಣ ವರ್ಜಯಿತ್ವಾ ತು ಮಾನುಷಂ ॥ ೨೫ ॥

ಸಂಕೀರ್ತ್ಯ ತೇಭ್ಯೋಽವಧ್ಯತ್ವಂ ವರಯಾಮಾಸ ಭೂಮಿಪ ।
ತ್ರೈಲೋಕ್ಯವಿಷಯಂ ಚೈವ ತಚ್ಚ ತಸ್ಯ ದದೌ ಪ್ರಭುಃ ॥ ೨೬ ॥

ಛಂದಯಿತ್ವಾ ವರೇಣಾಥ ದಶಗ್ರೀವಂ ನಿಶಾಚರಂ ।
ನ್ಯಸ್ಯ ಸರಸ್ವತೀಂ ವಕ್ತ್ರೇ ಕುಂಭಕರ್ಣಂ ಸ ರಾಕ್ಷಸಂ ॥ ೨೭ ॥

---

೨೫ ನಾರಾಯಣ ಋಷಿಗಳು ವಜ್ರಲೂಷನ ಕಡೆ ತಿರುಗಿಕೊಂಡು ಹೇಳು ತ್ತಾರೆ --ಅಯ್ಯಾ ! ಗಂಧರ್ವರಾಜ ! ಅಡ್ಡಿಜ್ಞಾನವಿಡದೆ ಮುಂದಿನ ಕಥೆಯನ್ನು ಕೇಳಯ್ಯಾ ದಶಗ್ರೀವನು ತನಗೆ ವರವನ್ನು ಕೊಡುವುದಕ್ಕಾಗಿ ಸಿದ್ಧವಾಗಿ ಬಂದು ನಿಂತಿದ್ದ ಬ್ರಹ್ಮನನ್ನು ಕುರಿತು, ದೇವತೆಗಳನ್ನಾರಂಭಿಸಿ ಎಂಭತ್ತು ನಾಲ್ಕು ಲಕ್ಷ ಜೀವ ರಾಶಿಗಳ ಹೆಸರನ್ನೂ ಒಂದೂ ಬಿಡದೆ ಬೇರೆ ಬೇರೆಯಾಗಿ ಹೇಳಿ ಈ ಪ್ರಾಣಿಗಳೊಂದ ರಿಂದಲೂ ತನಗೆ ಮರಣವಾಗದಂತೆ ವರವನ್ನು ಕೊಡೆಂದು ಹೇಳುತ್ತಾ ಬಂದು ಕಡೆಗೆ ಮನುಷ್ಯಜೀವಿಯ ಹೆಸರನ್ನು ಮರೆತೇಬಿಟ್ಟನು ಅಥವಾ ಹುಲುಮನುಜರಿಂದೇ ನಾದೀತೆಂಬ ತುಚ್ಛಭಾವನೆಯಿಂದ ಎಟ್ಟಿರೂ ಬಿಟ್ಟಿರಬಹುದು. ಅಂತೂ ಮನುಷ್ಯ ರೆಂದರ ರಾಕ್ಷಸರಿಗೆ ಅದೊಂದು ತಿನ್ನುವ ತಿಂಡಿಯೆಂದೂ ಭಾವನೆ

೨೬ ಸರಿ ! ಬ್ರಹ್ಮನಿಗಿನ್ನೇನು ಕೆಲಸ ? ತಪಸ್ಸುಮಾಡಿದರ ವರವನ್ನು ಕೊಡುತ್ತಿರುವುದೇ ಅವನ ಕೆಲಸ ತನ್ನ ಕಾರ್ಯವನ್ನು ತಾನು ಮಾಡಿಯೇ ಬಿಟ್ಟನು ದಶಗ್ರೀವನಿಗೆ ಸಕಲ ಪ್ರಾಣಿಗಳಿಂದ ಅವಧ್ಯತ್ವವನ್ನೂ, ಮೂರು ಲೋಕದ ಆಧಿಪತ್ಯವನ್ನೂ ಅನುಗ್ರಹಮಾಡಿ ಕೊಟ್ಟೇಬಿಟ್ಟನು.

೨೭ ಈ ಪ್ರಕಾರವಾಗಿ ದಶಗ್ರೀವನಿಗೆ ವರವನ್ನು ಕೊಟ್ಟು ಸಂತೋಷಪಡಿ ಸಿದ ಬಳಿಕ ಕುಂಭಕರ್ಣನ ನಾಲಿಗೆಯಲ್ಲಿ ತನ್ನ ಪತ್ನಿಯಾದ ಸರಸ್ವತೀದೇವಿಯನ್ನು ನಿಲ್ಲಿಸಿ ಅವನ ನಾಲಿಗೆಯಲ್ಲಿ ನಿದ್ದೆಮಾಡಬೇಕೆಂಬ ಮಾತನ್ನು ಹೊರಡಿಸಿ ಅದೇ ಮೇರೆ ಬ್ರಹ್ಮನು ವರವನ್ನು ಕೊಟ್ಟನು.

ವರೇಣಛಂದಯಾಮಾಸ ತದಾಗತ್ಯ ವಿಭೀಷಣಂ ।
ಸ ವವ್ರೇ ನಿತ್ಯಕಾಲಂ ತು ಮತಿಂ ಧರ್ಮೇ ಸನಾತನೀಂ ॥ ೨೮ ॥

ತೇನ ತಸ್ಯ ತದಾ ತುಷ್ಟಸ್ತ್ವಮರತ್ವಂ ದದೌ ಪ್ರಭುಃ ।
ವರೇಣಚ್ಛಂದಯಿತ್ವಾ ತಾನ್ಬ್ರಹ್ಮಾ ಸ್ವಭವನಂ ಗತಃ ॥ ೨೯ ॥

ವರಲಬ್ಧಂ ದಶಗ್ರೀವಂ ಜ್ಞಾತ್ವಾ ರಕ್ಷೋ ಗಣಸ್ತದಾ ।
ಪಾತಾಲಾತ್ತು ವಿನಿಷ್ಕ್ರಮ್ಯ ಮಹಾರಾಜ್ಯೇಽಭ್ಯಷೇಚಯತ್ ॥ ೩೦ ॥

ಸ ತು ರಾಜ್ಯಂ ತದಾ ಲಬ್ಧ್ವಾ ಪ್ರೇಷಯಾಮಾಸ ರಾಕ್ಷಸಾನ್ ।
ಕುಬೇರಾಯ ತದಾ ದೂತಂ ಪ್ರಹಸ್ತಂ ನಾಮ ನಾಮತಃ ॥ ೩೧ ॥

---

೨೮-೨೯ ಆ ಬಳಿಕ ಪರಮವೈಷ್ಣವನಾದ ವಿಭೀಷಣನ ಬಳಿಗೆ ಬಂದು, ಅವನು ಕೇಳಿಕೊಂಡಂತೆ ಯಾವಾಗಲೂ ಸನಾತನ ಧರ್ಮವನ್ನು ವಿಾರಿ ನಡೆಯು ವಂತೆ ವರವನ್ನು ಕೊಟ್ಟು, ಅವನ ಧರ್ಮಬುದ್ಧಿಗೆ ಮೆಚ್ಚಿ ಅವನಿಗೆ ಅಮರತ್ವವನ್ನೂ ಚಿರಜೀವಿತ್ವವನ್ನೂ ಸಹ ಕರುಣಿಸಿದವನಾಗಿ, ಈ ಪ್ರಕಾರವಾಗಿ ಮೂರು ಮಂದಿ ಸಹೋದರರಿಗೂ ವರವನ್ನು ಕೊಟ್ಟು, ಬಳಿಕ ಬ್ರಹ್ಮನು ಸ್ವಸ್ಥಾನಕ್ಕೆ ಪ್ರಯಾಣ ಬೆಳೆಸಿದನು

೩೦ ದಶಗ್ರೀವನು ವರಪಡೆದ ಸಂಗತಿಯು ಆ ಕೂಡಲೇ ಮೂರು ಲೋಕ ಗಳಲ್ಲಿಯೂ ಹಬ್ಬಿಹೋಯಿತು ಈ ವೃತ್ತಾಂತವನ್ನು ಪಾತಾಳದಲ್ಲಿದ್ದ ರಾಕ್ಷಸ ರೆಲ್ಲಾ ಕೇಳಿ ಪರಮಸಂತೋಷಯುಕ್ತರಾಗಿ ಆ ಪಾತಾಳವನ್ನು ಬಿಟ್ಟು ಭೂಲೋಕಕ್ಕೆ ಬಂದು ಆ ರಾತ್ರಿಂಚರನಿಗೆ ಮಹಾರಾಜ್ಯಾಭಿಷೇಕವನ್ನು ಮಾಡಿದನು

೩೧ ಈ ಮೇರೆ ತ್ರಿಲೋಕಾಧಿಪತ್ಯವನ್ನೂ ಸಂಪಾದಿಸಿದ ಬಳಿಕ ಆ ದಶಗ್ರೀವನು ಕುಬೇರನ ಪಟ್ಟಣಕ್ಕೆ (ಲಂಕೆಗೆ) ಪ್ರಹಸ್ತನೆಂಬ ಮಂತ್ರಿಯೊಡನೆ ಅನೇಕ ಮಂದಿ ರಾಕ್ಷಸರನ್ನು ದೌತ್ಯಕ್ಕಾಗಿ ಕಳುಹಿಸಿ ಈ ಮಾತನ್ನು ಹೇಳುವಂತೆ ತಿಳಿಸಿದನು

ರಾಕ್ಷಸಾನಾಮಧೀವಾಸೋ ಲಂಕೇಯಂ ನಿರ್ಮಿತಾ ಪುರಾ।
ತಾಂ ತ್ಯಜಸ್ವ ಧನಾಧ್ಯಕ್ಷ ಸಾಮ್ನೈವ ಮಮ ಮಾ ಚಿರಂ ॥ ೩೨ ॥

ಪ್ರಹಸ್ತವಚನಂ ಶ್ರುತ್ವಾ ಧನಾಧ್ಯಕ್ಷೋ ಮಹಾಮತಿಃ ।
ದಶಗ್ರೀವಂ ವರೋನ್ಮತ್ತಂ ಜ್ಞಾತ್ವಾ ತತ್ಯಾಜ ತಾಂ ಪುರೀಂ ॥ ೩೩ ॥

ಕೈಲಾಸಂ ಪರ್ವತಂ ಗತ್ವಾ ತದಾ ಚಕ್ರೇ ಪುರೀಂ ಶುಭಾಂ ।
ಅಲಕಾಂ ನಾಮ ರಾಜೇಂದ್ರ ಯತ್ರಾಸ್ತೇ ಸ ಸುಖೀ ಸದಾ ॥ ೩೪ ॥

ದಶಗ್ರೀವೋ ಮಹಾರಾಜ ತ್ರಿಲೋಕವಿಜಯಂ ತಥಾ ।
ಚಕ್ರೇ ಲಂಕಾಮಥಾಸಾದ್ಯ ವರದಾನಾತ್ಸ್ವಯಂಭುವಃ ॥ ೩೫ ॥

೩೨ ಪ್ರಹಸ್ತನು ಲಂಕಾಪಟ್ಟಣಕ್ಕೆ ಹೋಗಿ ಕುಬೇರನ ಸಂಗಡ ದಶಗ್ರೀವನ ಸಂದೇಶವನ್ನು ವಿವರಿಸಿದನು ---ಎಲೋ ಧನಾಧ್ಯಕ್ಷ! ನೀನು ವಾಸಮಾಡುತ್ತಿರುವ ಲಂಕಾಪಟ್ಟಣವು ಪೂರ್ವದಲ್ಲಿ ವಿಶ್ವಕರ್ಮನಿಂದ ರಾಕ್ಷಸರ ವಾಸಕ್ಕೋಸ್ಕರವಾಗಿಯೇ ನಿರ್ಮಾಣವಾಡಲ್ಪಟ್ಟಿರುವುದು. ಆದುದರಿಂದ ಈಗ ನೀನು ಒಳ್ಳೇ ಮಾತಿನಿಂದ ಲಂಕಾಪಟ್ಟಣವನ್ನು ಕೂಡಲೆ ಬಿಟ್ಟು ಹೊರಟುಹೋಗಬೇಕು

೩೩ ಈ ಪ್ರಕಾರವಾಗಿ ಹೇಳಿದ ಪ್ರಹಸ್ತನ ಮಾತನ್ನು ಕೇಳಿ ಬಹಳ ಬುದ್ಧಿಶಾಲಿಯಾದ ಕುಬೇರನು, ದಶಗ್ರೀವನು ಬ್ರಹ್ಮನ ವರಬಲದಿಂದ ಕೊಬ್ಬಿ ಈ ಮಾತನ್ನು ಹೇಳಿ ಕಳುಹಿಸಿರುವನೆಂದು ತಿಳಿದವನಾಗಿ, ಲಂಕಾನಗರವನ್ನು ಆ ಕ್ಷಣವೇ ತ್ಯಾಗಮಾಡಿ ಹೊರಟನು.

೩೪ ಲಂಕಾನಗರಿಯಿಂದ ಹೊರಟ ಕುಬೇರನು ಕೈಲಾಸಪರ್ವತಕ್ಕೆ ಪ್ರಯಾಣಮಾಡಿ, ಅಲ್ಲೊಂದು ಸುಂದರವಾದ ಪಟ್ಟಣವನ್ನು ಕಟ್ಟಿಸಿದನು ಅದಕ್ಕೆ ಅಲಕಾಪಟ್ಟಣವೆಂದು ನಾಮಕರಣಮಾಡಿ ಆ ಪಟ್ಟಣದಲ್ಲಿ ಇಂದಿಗೂ ಸುಖವಾಗಿ ವಾಸಮಾಡಿಕೊಂಡಿರುತ್ತಾನೆ

೩೫ ಎಲೈ ಶೈಲೂಷಮಹಾರಾಜನೇ! ಕೇಳ, ತ್ರಿಲೋಕವಿಜಯಿಯಾದ ದಶಗ್ರೀವನು, ಬ್ರಹ್ಮನ ವರದಾನ ಬಲದಿಂದ ಲಂಕಾಪಟ್ಟಣವನ್ನು ತನ್ನ ಸ್ವಾಧೀನಮಾಡಿಕೊಂಡು ಅಲ್ಲಿ ತನ್ನ ಆಧಿಪತ್ಯವನ್ನು ವಿಸ್ತರಿಸಿದನು

**ಮಂದೋದರೀ ನಾಮ ಭಾರ್ಯಾಂ ತದಾ ಲೇಭೇ ಮಯಾತ್ಮಜಾಂ ।**
**ತಸ್ಯಾಂ ಸ ಜನಯಾಮಾಸ ಮೇಘನಾದಂ ತಥಾ ಸುತಂ ॥ ೩೬ ॥**

**ತ್ರಿಲೋಕವಿಜಯೀ ಶ್ರೀಮಾನ್ ದೇವಬ್ರಾಹ್ಮಣಕಂಟಕಃ ।**
**ನಿಹತಃ ಸ ತು ಕಾಲೇನ ವಿಷ್ಣುನಾ ನರರೂಪಿಣಾ ॥ ೩೭ ॥**

**ರಾಘವೇಣ ಮಹಾರಾಜ ರಾಮೇಣಾಕ್ಲಿಷ್ಟಕರ್ಮಣಾ ।**
**ಲಂಕಾಂ ತ್ಯಕ್ತ್ವಾ ಧನಾಧ್ಯಕ್ಷಃ ಕೈಲಾಸೇ ಪರ್ವತೋತ್ತಮೇ ॥ ೩೮ ॥**

**ಅದ್ಯಾಪಿ ಪಾಲಯನ್ನಾಸ್ತೇ ರಾಜ್ಯಂ ನಿಹತಕಂಟಕಂ ।**
**ತಸ್ಮಾತ್ತ್ವಮಪಿ ರಾಜೇಂದ್ರ ತ್ಯಕ್ತ್ವಾ ದೇಶಮಿಮಂ ಸ್ವಯಂ ।**
**ಹಿಮವಂತಮಥಾಸಾದ್ಯ ವಸ ವೈಶ್ರವಣೋಪಮಃ ॥ ೩೯ ॥**

೩೬ ದೇವಶಿಲ್ಪಿಯಾದ ಮಯನು ಈ ದಶಗ್ರೀವನ ಪರಾಕ್ರಮವನ್ನೂ, ಘೋರತನವನ್ನೂ ನೋಡಿ ಪರಮಾನಂದಭರಿತನಾಗಿ ಪರಮಸುಂದರಿಯಾದ ತನ್ನ ಮಗಳು ಮಂಡೋದರಿಯನ್ನು ಅವನಿಗೆ ಮದುವೆಮಾಡಿಕೊಟ್ಟನು ಮದುವೆ ಯಾದ ಮೇಲೆ ಮಂಡೋದರಿಯ ಹೊಟ್ಟೆಯಲ್ಲಿ ಮೇಘನಾದನೆಂಬ ಮಗನು ಹುಟ್ಟಿದನು

೩೭ ಶೈಲೂಷ! ಈ ಮುಂದಿನ ಮಾತನ್ನು ಮನಸ್ಸಿಟ್ಟು ಕೇಳು ಈ ಮೇರೆ ದಶಗ್ರೀವನು ತ್ರಿಲೋಕವಿಜಯಿಯಾಗಿ ಬಹುಕಾಲ ರಾಜ್ಯಭಾರಮಾಡಿದ್ದಾಗ್ಯೂ, ದೇವಬ್ರಾಹ್ಮಣ ಕಂಟಕನಾಗಿದ್ದುದರಿಂದ ಮನುಷ್ಯರೂಪವನ್ನು ಧರಿಸಿದ ಮಹಾ ವಿಷ್ಣುವಿ (ರಾಮ) ನಿಂದ ಮರಣವನ್ನು ಹೊಂದಲಿಲ್ಲವೇ?

೩೮. ಧನಾಧ್ಯಕ್ಷನಾದ ಕುಬೇರನು ಆ ಲಂಕೆಯನ್ನೇ ಬಿಟ್ಟು ಧರ್ಮನಿರತ ನಾಗಿಯೇ ಇದ್ದು, ಯಾರ ತಂಟೆಗೂ ಹೋಗದೆ ಅಲಕಾನಗರಿಯನ್ನು ಕೈಲಾಸಪರ್ವತ ದಲ್ಲಿ ನಿರ್ಮಿಸಿಕೊಂಡು, ಈ ಹೊತ್ತಿಗೂ ಅಲ್ಲಿ ಯಾವ ಶತ್ರುಭಯವೂ ಇಲ್ಲದೆ ಸುಖ ವಾಗಿರುವುದನ್ನು ಸ್ವಲ್ಪ ನೀನೇ ಯೋಚಿಸಿ ನೋಡು ಈ ಮಾತನ್ನು ಕೇಳಿದ ಮೇಲಾದರೂ ನೀನು ಈ ಮನುಷ್ಯರಾಜ್ಯವನ್ನು ಬಿಟ್ಟು, ಭರತನೊಡನೆ ಸ್ನೇಹ ವನ್ನು ಬೆಳೆಸಿ, ಹಿಮಾಲಯ ಪರ್ವತಕ್ಕೆ ಹೋಗಿ ಕುಬೇರನಂತೆ ಸುಖಿನಾಗಿ ವಾಸ ಮಾಡು

ತಸ್ಮಾನ್ನ ಕಾರ್ಯಂ ಭರತೇನ ವೈರಂ
ಮಹಾಬಲಾಸ್ತ್ರಾರಘುವಃ ಪ್ರತೀತಾಃ ।
ಪ್ರಸೀದ ಜೀವಂತು ಸುಪುತ್ರಪೌತ್ರಾಃ
ಪುತ್ರಾಸ್ತವೇಮೇ ತುಹಿನಾದ್ರಿಸಂಸ್ಥಾಃ ॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾವಣವರಪ್ರಾಪ್ತಿವರ್ಣನೋನಾಮ
ವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.

---

೪೦ ಶೈಲೂಷ! ಭರತನ ಮೇಲೆ ಹಗೆತನವನ್ನು ಮಾಡಬೇಡ ರಘು ವಂಶೋತ್ಪನ್ನರಾದ ರಾಜರು ಸಾಮಾನ್ಯರೆಂದು ತಿಳಿಯಬೇಡ ಅವರೆಲ್ಲರೂ ಮಹಾ ಪರಾಕ್ರಮಿಗಳು ನಾನಾಶಸ್ತ್ರಾಸ್ತ್ರ ಕುಶಲರು ಪ್ರಸನ್ನಚಿತ್ತನಾಗು ನಿನ್ನ ಮಕ್ಕಳಾದ ಈ ಗಂಧರ್ವರ ಗುಂಪನ್ನು ಕೊಲ್ಲಿಸಬೇಡ ಪುತ್ರಪೌತ್ರರಿಂದೊಡಗೂಡಿದವರಾಗಿ ಈ ಗಂಧರ್ವರೆಲ್ಲರೂ ಹಿಮವತ್ಪರ್ವತದಲ್ಲಿದ್ದುಕೊಂಡು ಸುಖವಾಗಿ ಬದುಕಿಕೊಳ್ಳಲಿ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ರಾವಣ ವರಪ್ರಾಪ್ತಿ ವರ್ಣನೆಯೆಂಬ
ಹೆಸರಿನ ಇನ್ನೂರ ಇಪ್ಪತ್ತನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ॥

॥ ಶೈಲೂಷ ಉವಾಚ ॥

ಶ್ರೋತುಮಿಚ್ಛಾಮ್ಯಹಂ ತಸ್ಯ ದಶಗ್ರೀವಸ್ಯ ರಕ್ಷಸಃ ।
ತ್ರಿಲೋಕವಿಜಯಂ ಬ್ರಹ್ಮಂಸ್ತತ್ರ ಮೇ ಸಂಶಯೋ ಮಹಾನ್ ॥ ೧ ॥

॥ ನಾಡಾಯನ ಉವಾಚ ॥

ವರಪ್ರದಾನಾತ್ಸಂಮತ್ತೋ ದಶಗ್ರೀವೋ ನಿಶಾಚರಃ ।
ದೇವಗಂಧರ್ವದೈತ್ಯಾನಾಂ ನಾಗೇಂದ್ರೋರಗರಕ್ಷಸಾಂ ॥ ೨ ॥

---

### ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯವು.

೧ ಶೈಲೂಷನು ನಾಡಾಯನ ಋಷಿಗಳನ್ನು ಕುರಿತು ಪುನಃ ಪ್ರಶ್ನೆಮಾಡುತ್ತಾನೆ —ಅಯ್ಯಾ, ನಾಡಾಯನನೇ ! ಆ ರಾವಣನು ತ್ರಿಲೋಕವನ್ನೂ ಜಯಿಸಿದ್ದನೆಂದು ಹೇಳಿದ್ದಿಯಷ್ಟೆ ? ಆ ವಿಷಯದಲ್ಲಿ ನನಗೆ ಸಂದೇಹವುಂಟಾಗಿದೆಯಾದುದರಿಂದ ಅವನು ತ್ರಿಲೋಕವನ್ನೂ ಜಯಿಸಿದ ಬಗೆಯನ್ನು ನನಗೆ ವಿಸ್ತಾರವಾಗಿ ತಿಳಿಸಬೇಕು

೨ ನಾಡಾಯಣನನು ಶೈಲೂಷನಿಗೆ ರಾವಣದಿಗ್ವಿಜಯವನ್ನು ಹೇಳಲು ಉಪಕ್ರಮಿಸುತ್ತಾನೆ —ಬ್ರಹ್ಮನ ವರದಾನದಿಂದ ಮದಿಸಿದ ಆ ರಾವಣನು ಮೊದಲು ದೇವಲೋಕಕ್ಕೆ ನುಗ್ಗಿ ಅಲ್ಲಿದ್ದ ದೇವಗಂಧರ್ವ ದೈತ್ಯರ ಬಳಿಯಲ್ಲೂ, ಪಾತಾಳಲೋಕಕ್ಕೆ ಬಳಿಕ ನುಗ್ಗಿ ಅಲ್ಲಿದ್ದ ನಾಗೇಂದ್ರಾದಿಗಳ ಬಳಿಯಲ್ಲಿಯೂ ಇದ್ದ ಅಮೂಲ್ಯರತ್ನಗಳನ್ನೆಲ್ಲಾ ಬಲಾತ್ಕಾರವಾಗಿ ಕಿತ್ತುಕೊಂಡು ತನ್ನ ಬೊಕ್ಕಸಕ್ಕೆ ಭರ್ತಿಮಾಡಿಬಿಟ್ಟನು

ಆಕ್ರಮ್ಯಾಕ್ರಮ್ಯ ರತ್ನಾನಿ ಸ ಜಹಾರ ತದಾ ಬಲಾತ್ ।
ಪತ್ನ್ಯಶ್ಚ ರಾಜಶಾರ್ದೂಲ ತದಾ ದುಹಿತರಃ ಶುಭಾಃ ॥ ೩ ॥

ನರೇಂದ್ರಾನ್ ಧರ್ಮಸಂಸಕ್ತಾನ್ ಬ್ರಾಹ್ಮಣಾಂಶ್ಚ ಜಿಘಾಂಸತಿ ।
ಅಯೋಧ್ಯಾವಾಸಿನಂ ವೀರಮನರಣ್ಯಂ ಚ ಜಘ್ನಿವಾನ್ ॥ ೪ ॥

ಸಂಗ್ರಾಮೇ ನಿಹತಸ್ತೇನ ದಶಗ್ರೀವಂ ಸ ಶಪ್ತವಾನ್ ।
ಉತ್ಪತ್ಸ್ಯತಿ ಕುಲೇ ನೀಚ ಪುರುಷೋ ಮಮ ವೀರ್ಯವಾನ್ ॥ ೫ ॥

ಯಸ್ತವಾದಾಸ್ಯತಿ ಪ್ರಾಣಾನ್ಸಮರೇ ಸಮರಪ್ರಿಯ ।
ಯುಯುಧೇ ಚ ತಥಾ ರಾಜ್ಞಾ ಮಾಂಧಾತ್ರಾ ರಣಶಾಲಿನಾ ॥ ೬ ॥

---

೩-೪ ಆ ಬಳಿಕ ಅವರ ಹೆಂಡತಿಯರನ್ನೂ ಒಳ್ಳೇ ರೂಪವತಿಯರಾದ ಅವರ ಹೆಣ್ಣು ಮಕ್ಕಳನ್ನೂ ಬಲಾತ್ಕಾರವಾಗಿ ಎಳೆದುಕೊಂಡು ಬಂದು ಲಂಕೆಯಲ್ಲಿ ಕೂಡಿ ಕೊಂಡನು ಆಮೇಲೆ ಭೂಲೋಕಕ್ಕೆ ನುಗ್ಗಿ ಧರ್ಮಾತ್ಮರಾದ ರಾಜರನ್ನೂ ಧರ್ಮ ನಿರತರಾದ ಬ್ರಾಹ್ಮಣರನ್ನೂ ಹಿಂಸೆಮಾಡಿ ಕೊಲ್ಲುತ್ತಾ ಬಂದನು ಹೀಗೆಯೇ ಮಾಡುತ್ತಿರುವಾಗ ಅಯೋಧ್ಯಾಪಟ್ಟಣದಲ್ಲಿದ್ದ ಅನರಣ್ಯ ರಾಜನನ್ನು ಇವನು ಕೊಂದು ಬಿಟ್ಟನು

೫ ರಣರಂಗದಲ್ಲಿ ಮಡಿದ ಆ ರಾಜನು ಪ್ರಾಣಬಿಡುವ ಸಮಯದಲ್ಲಿ ಆ ರಾವಣನಿಗೆ ಹೀಗೆ ಶಾಪಕೊಟ್ಟನು ಎಲೋ ನೀಚ ! ನನ್ನ ವಂಶದಲ್ಲಿ ಮುಂದೆ ಒಬ್ಬ ಪರಾಕ್ರಮಶಾಲಿಯು ಹುಟ್ಟುತ್ತಾನೆ ಆವನು ಸಮರಾಂಗಣದಲ್ಲಿ ನಿನ್ನ ಪ್ರಾಣ ಗಳನ್ನು ಹೀರುತ್ತಾನೆ. ಹೀಗೆಂದು ಶಪಿಸಿದನು ಶೈಲೂಷ ! ಇದು ರಾವಣನಿಗೆ ದೊರೆತ ಮೊದಲನೆಯ ಶಾಪವಯ್ಯ !

೬-೭ ಮುಂದೆ ಮುಂದೆ ಕೇಳುತ್ತಾ ಬಾ ! ರಣಚಂಡಪರಾಕ್ರಮಿಯಾದ ಮಾಂಧಾತೃಚಕ್ರವರ್ತಿಯೊಡನೆ ಈ ರಾವಣನು ಯುದ್ಧಮಾಡುವುದಕ್ಕುಪಕ್ರಮಿ ಸಿದನು ಆ ಕಾಲದಲ್ಲಿ ದೇವರ್ಷಿಯಾದ ನಾರದನು ರಾವಣನನ್ನು ತಡೆದು ಆ

ತತ್ರೈನಂ ವಾರಯಾಮಾಸ ನಾರದೋ ಮುನಿಸತ್ತಮಃ ।
ಮಯೂರಸ್ಯ ತತೋ ಯಜ್ಞೇ ಭಕ್ಷಯಾಮಾಸ ವೈ ದ್ವಿಜಾನ್ ॥ ೭ ॥

ಇಂದ್ರೋ ಮಾಯೂರರೂಪೇಣ ತಸ್ಮಾದ್ಯಜ್ಞಾದಪಾಕ್ರಮತ್ ।
ಮಯೂರಸ್ಯ ವರಂ ಪ್ರಾದಾನ್ಮೇಘೋ ವರ್ಷತಿ ಸರ್ವದಾ ॥ ೮ ॥

ಗಮಿಷ್ಯಸ್ಯತುಲಾಂ ಪ್ರೀತಿಂ ಮಮ ನೇತ್ರಗಣಾಕೃತಿಂ ।
ಧಾರಯಿಷ್ಯಸಿ ಲೋಕೇಽಸ್ಮಿನ್ಕಲಾಪಂ ಸುಮನೋಹರಂ ॥ ೯ ॥

ಕೃಕಲಾಸಸ್ಯ ರೂಪೇಣ ಧನಾಧ್ಯಕ್ಷೋಽಪ್ಯಪಾಕ್ರಮತ್ ।
ವರ್ಣಂ ತಸ್ಯ ಸುವರ್ಣಾಭಂ ಸದ್ರವ್ಯಂ ಚ ತಥಾ ಶಿರಃ ॥ ೧೦ ॥

ಯುದ್ಧವನ್ನು ನಿಲ್ಲಿಸಿದನು ಅಲ್ಲಿಂದ ಹೊರಟು ರಾವಣನು ಮರುತ್ತ (ಮಯೂರ) ರಾಜನು ಯಜ್ಞಮಾಡುತ್ತಲಿದ್ದ ಯಜ್ಞಶಾಲೆಗೆ ನುಗ್ಗಿ ಅಲ್ಲಿದ್ದ ಬ್ರಾಹ್ಮಣರನ್ನೆಲ್ಲಾ ತಿಂದುಹಾಕಿಬಿಟ್ಟನು

೮ ಈ ರೀತಿ ಬ್ರಾಹ್ಮಣರಲ್ಲರನ್ನೂ ತಿಂದು ತೇಗಿದ ಈ ರಾವಣನನ್ನು ನೋಡಿ ಆ ಯಜ್ಞಶಾಲೆಗೆ ಬಂದಿದ್ದ ಸಕಲ ದೇವತೆಗಳೂ ತಮ್ಮ ಪ್ರಾಣಗಳನ್ನುಳಿಸಿಕೊಳ್ಳುವುದಕ್ಕಾಗಿ ನಾನಾವಿಧ ಮೃಗಪಕ್ಷಿರೂಪಗಳಂ ಧರಿಸಿ ಆ ಯಜ್ಞಶಾಲೆಯಿಂದ ಹೊರಬಿದ್ದರು ಮೊದಲು ಇಂದ್ರನು ನವಿಲಾಗಿ ಆ ಸ್ಥಳವನ್ನು ಬಿಟ್ಟನು ತಾನು ಆ ಕಾಲದಲ್ಲಿ ನವಿಲಾಗಿದ್ದುದರಿಂದ ನವಿಲುಗಳಿಗೆಲ್ಲಾ ಒಂದು ವರವನ್ನು ಕೊಟ್ಟನು

೯ ಆ ವರವೇನೆಂದರೆ —ಓ ನವಿಲುಗಳಿರಾ! ಇನ್ನು ಮುಂದೆ ನೀವೆಲ್ಲರೂ ಮೇಘೋದಯವಾಗಿ ಮಳೆಬೀಳುತ್ತಿರುವ ಸಮಯಗಳಲ್ಲಿ ಆನಂದದಿಂದ ಗರಿಗಳನ್ನು ಕೆದರಿ (ಬಿಚ್ಚಿ) ಕೊಂಡು ಕುಣಿಯಿರಿ ನಿಮ್ಮ (ನವಿಲು) ಗರಿಗಳಲ್ಲಾ ನನ್ನ ಕಣ್ಣಿನಂತೆ ಬಹಳ ಸುಂದರವಾಗಿರಲಿ ನಿಮ್ಮ ಗರಿಗಳು ಇನ್ನು ಮುಂದ ಬಣ್ಣ ಬಣ್ಣಗಳಿಂದ ಕೂಡಿ ಬಹು ಸುಂದರವಾಗಿ ಕಾಣಲಿ ಇದೇ ಇಂದ್ರನ ವರ

೧೦ ಇಂದ್ರನ ಹಿಂದೆ ಕುಬೇರನು ಹೆಂಟೇಗೊದ್ದವಾಗಿ ಯಜ್ಞಶಾಲೆಯನ್ನು ಬಿಟ್ಟುಹೊರಟನು ತಾನು ಆ ರೂಪವನ್ನು ಆಗ್ಗೆ ಧರಿಸಿದ್ದರಿಂದ ಹೆಂಟೇಗೊದ್ದದವೈ ಚಿನ್ನದ ಬಣ್ಣವಾಗಿರಲೆಂಮೂ, ಅದರ ತಲೆಯೂ ಸಹ ಅದೇ ಮೇರೆ ಕಾಂಚನಸದೃಶವಾಗಿರಲೆಂದೂ ವರಪ್ರದಾನಮಾಡಿದನು

ಪ್ರಾದಾದ್ದ್ವಯಮಮೇಯಾತ್ಮಾ ರಾಜರಾಜೇನ ವಾನವ ।
ವರುಣಶ್ಚ ತದಾ ರಾಜನ್ಹಂಸರೂಪೇಣ ನಿರ್ಗತಃ ॥ ೧೧ ॥

ಹಂಸಸ್ಯ ಚ ವರಂ ಪ್ರಾದಾತ್ತೋಯೇ ರತಿಮವಾಪ್ಸ್ಯಸಿ ।
ವರ್ಣತಶ್ಚಂದ್ರರಶ್ಮ್ಯಾಭೋ ಭವಿಷ್ಯಸಿ ತಥೈವ ಚ ॥ ೧೨ ॥

ಯಮೋ ವಾಯಸರೂಪೇಣ ತಸ್ಮಾದ್ಯಜ್ಞಾದಪಾಕ್ರಮತ್ ।
ವಾಯಸಸ್ಯ ವರಂ ಪ್ರಾದಾದಮರತ್ವಂ ವಿನಾ ವಧಾತ್ ॥ ೧೩ ॥

ಯುಷ್ಮದ್ದತ್ತೇನ ಚಾನ್ನೇನ ಘೋರಾ ಮದ್ವಿಷಯೇ ಸ್ಥಿತಾಃ ।
ಪರಾಂ ತೃಪ್ತಿಂ ಗಮಿಷ್ಯಂತಿ ತದಾ ಪುಣ್ಯೇನ ಯೋಕ್ಷ್ಯಸೇ ॥ ೧೪ ॥

---

೧೧-೧೨ ಕುಬೇರನು ಹೆಂಟೇಗೊದ್ದದ ಆಕಾರದಿಂದ ಹೊರಡುವಾಗ ಅವನ ಜತೆಯಲ್ಲೇ ಕಾದಿದ್ದ ವರುಣನು ಹಂಸಪಕ್ಷಿಯಂತೆ ಆಕಾರವನ್ನು ಮಾಡಿಕೊಂಡು ಆ ಯಜ್ಞಮಂಟಪದಿಂದ ಹೊರಟನು ಆದಕಾರಣದಿಂದಲೇ ಅವನು ಹಂಸಪಕ್ಷಿಗಳಿಗೆ ಇಂತು ವರಕೊಟ್ಟಿರುವನು. ಎಲೈ ಹಂಸಗಳಿರಾ, ನನ್ನಲ್ಲಿ (ನೀರಿನಲ್ಲಿ) ನೀವು ಇನ್ನು ಮುಂದೆ ಸುಖವಾಗಿ ವಿಹರಿಸಿಕೊಂಡಿರಿ. ನಿಮ್ಮ ಮೈಬಣ್ಣವು ಚಂದ್ರನಂತೆ ಶುಭ್ರವಾಗಿ (ಬಿಳುಪಾಗಿ) ವಿರಾಜಿಸುತ್ತಲಿರಲಿ

೧೩. ಮರುತ್ತರಾಜನ ಯಜ್ಞಶಾಲೆಯಿಂದ ಯಮಧರ್ಮರಾಜನು ಹೊರಗೆ ಹೊರಟಾಗ ಕಾಗೆಯ ರೂಪವನ್ನು ಧರಿಸಿದ್ದನಾದುದರಿಂದ ಆ ಕಾಗೆಗಳಿಗೆ, ಎಲೈ ಕಾಗೆಗಳೇ ! ನಿಮ್ಮನ್ನಾರೂ ಕೊಲ್ಲದೆ ಇದ್ದರೆ ನೀವು ಚಿರಂಜೀವಿಗಳಾಗಿಯೇ ಇರಿ, ಎಂದು ವರಕೊಟ್ಟನು (ಅಮರದಲ್ಲಿ ಕಾಗೆಗಳಿಗೆ ಚಿರಜೀವಿಯೆಂದು ಹೆಸರಿದೆ.)

೧೪ ಮತ್ತು ಕಾಗೆಗಳನ್ನು ಕುರಿತು ಯಮನು ಹೇಳುವನು —ನನಗೋಸ್ಕರ ಯಾವ ಮನುಷ್ಯನು ಅನ್ನವನ್ನು ಕೊಡುತ್ತಾನೋ ಅಂಥವನು ನಿಮಗೇ ಆ ಅನ್ನವನ್ನು ಕೊಟ್ಟುಬಿಡಲಿ ನೀವು ಆ ಅನ್ನವನ್ನು ತಿನ್ನುವುದಾದರೆ ನಾನು ತೃಪ್ತನಾಗಿ ಅವರಿಗೆ ವರವನ್ನೂ ಪುಣ್ಯವನ್ನೂ ಅನುಗ್ರಹಿಸುತ್ತೇನೆ. ನಿಮಗೂ ಆ ಪುಣ್ಯದಲ್ಲಿ ಸ್ವಲ್ಪಭಾಗ ಬರಲಿ

**ವಕ್ಷ್ಯಧ್ವಂ ಬಲಿದಾತ್ಯಣಾಂ ದಿಗ್ದೇಶಗತಚೇಷ್ಟಿತೈಃ ।**
**ಶುಭಾಶುಭಂ ಮನುಷ್ಯಾಣಾಂ ತತ್ರಾತಿಥ್ಯಂ** ಭವಿಷ್ಯತಿ ॥ ೧೫ ॥

**ವಜ್ರತುಂಡಾಶ್ಚ ಯೇ ಕಾಕಾ ಘೋರಾಮುದ್ವಿಷಯೇ** ಸ್ಥಿತಾಃ ।
**ಬಲಿಪಿಂಡಾಶ್ಚ** ದಾತ್ರೂಣಾಂ **ಭವಿಷ್ಯಂತಿ ತತಃ** ಶಿವಂ ॥ ೧೬ ॥

ಮರುತ್ತಯಜ್ಞೇ ವಿತ್ರಾಸಂ ಜನಯಿತ್ವಾ ದಿವೌಕಸಾಂ ।
ಬಭ್ರಾಮ ವಸುಧಾಂ ರಾಜಾ ರಾಕ್ಷಸಾನಾಂ ಪ್ರತಾಪವಾನ್ ॥ ೧೭ ॥

**ದದರ್ಶ ಸ ತದಾ ಕನ್ಯಾಂ ತಪಸ್ಯಂತೀಂ ಮಹತ್ತಮಃ ।**
**ರೂಪೇಣಾಪ್ರತಿಮಾಂ ಲೋಕೇ ಯೌವನೇ ಪ್ರಥಮೇ ಸ್ಥಿತಾಂ** ॥ ೧೮ ॥

---

೧೫ ನಿಮಗೆ (ಕಾಗೆಗಳಿಗೆ) ಬಲಿರೂಪವಾಗಿ (ಕಾಕಬಲಿ) ಹಾಕಿದ ಅನ್ನದಿಂದ ನೀವು ತೃಪ್ತರಾಗಿ ನಿಮಗೆ ಬಲಿಯನ್ನವನ್ನು ಕೊಟ್ಟ ಆ ಮನುಷ್ಯನನ್ನು ಕುರಿತು ಹೀಗೆ ಹೇಳಿರಿ —ಎಲೈ ಮನುಷ್ಯರಿರಾ, ನೀವು ಶುಭಾಶುಭಕರ್ಮಗಳಲ್ಲಿ ನಮಗೆ ಕೊಟ್ಟ ಅನ್ನವನ್ನು ನಾವು ದೇಶದೇಶಗಳಲ್ಲಿ ಸುತ್ತಿ ನೀವು ಯಾರಿಗಾಗಿ ಆ ಅನ್ನವನ್ನು ನೀಡುವಿರೋ ಅವರ ವಶಕ್ಕೆ ಕೊಟ್ಟು ಅವರಿಗೆ ಆತಿಥ್ಯಮಾಡಿಸುತ್ತೇವೆಂದು ಹೇಳಿರಿ

೧೬ ಮತ್ತು ಯಮನು ಹೇಳುತ್ತಾನೆ —ನನ್ನ ದೇಶದಲ್ಲಿ ವಜ್ರಾಯುಧದಂತೆ ಕೊಕ್ಕುಳ್ಳ ಕಾಗೆಗಳು ಎಷ್ಟೋ ಇವೆ ಆ ಕಾಕರಾಜರು ಬಲಿ (ಶ್ರಾದ್ಧ) ಪಿಂಡಗಳನ್ನು ಪಿತೃಗಳ ಪ್ರೀತಿಗಾಗಿ ಹಾಕುವ ಮನುಷ್ಯರಿಗೆ ಮಂಗಳಪರಂಪರೆಗಳನ್ನುಂಟುಮಾಡುತ್ತವೆ

೧೭ ಶೈಲೂಷರಾಜ! ಕೇಳು ಮೇಲೆ ಬರದಂತೆ ಮರುತ್ತರಾಜನ ಯುದ್ಧದಲ್ಲಿ ಸೇರಿದ್ದ ಸಕಲ ದೇವತೆಗಳಿಗೂ ಸಹ ರಾವಣನಿಗೆ ಹೆದರಿ ತಮ್ಮ ತಮ್ಮ ರೂಪಗಳನ್ನು ಮರೆಯಿಸಿಕೊಂಡು ಹೊರಟು ಹೋದ ಬಳಿಕ ಆ ಪ್ರತಾಪಶಾಲಿಯಾದ ರಾಕ್ಷಸರಾಜನು ಭೂಲೋಕದಲ್ಲೆಲ್ಲಾ ಸುತ್ತಾಡಿದನು

೧೮ ಭೂಮಂಡಲ ಸಂಚಾರ ಕಾಲದಲ್ಲಿ ರಾವಣನು, ಆಗ ತಾನೇ ಪ್ರಾಯದಲ್ಲಿ ಕಾಲಿಟ್ಟಿದ್ದ ಒಬ್ಬಳು ಅಪ್ರತಿಮ ಸುಂದರಿಯಾದ ಹುಡುಗಿಯು ಮಹತ್ತರವಾದ ತಪಸ್ಸು ಮಾಡುತ್ತಿದ್ದುದನ್ನು ನೋಡಿದನು

**ದಶಗ್ರೀವಃ ಸ ಪಪ್ರಚ್ಛ ತಾಂ ಕನ್ಯಾಂ ಲೋಕಸುಂದರೀಂ ।**
**ಕಾತ್ವಂ ಕಿಮರ್ಥಂ ಸುಶ್ರೋಣಿ ಚಾಸ್ಥಿತಾ ಯೌವನೇ ತಪಃ ॥ ೧೯ ॥**

**ಶ್ರುತ್ವಾ ತಸ್ಯ ತು ಸಾ ಕನ್ಯಾ ಸತ್ಯಂ ವಚನಮಬ್ರವೀತ್ ।**
**ಬೃಹಸ್ಪತಿಸುತೋ ವಿದ್ವಾನ್ಪಿತಾ ಮಮ ಕುಶಧ್ವಜಃ ॥ ೨೦ ॥**

**ವೇದಾಭ್ಯಾಸಪ್ರವೃತ್ತಸ್ಯ ತಸ್ಯಾಹಂ ನೃಪಬಾಂಧವ ।**
**ಸುತಾಪರಾ ಸಮುತ್ಪನ್ನಾ ತತ್ಪತ್ನ್ಯಾಂ ವಿದಿತಾ ತಥಾ ॥ ೨೧ ॥**

**ನಾಮ್ನಾ ವೇದವತೀತ್ಯೇವಂ ಖ್ಯಾತಾ ಲೋಕೇಷು ರಾಕ್ಷಸ ।**
**ವಿಷ್ಣೋರ್ಮಯೇಯಂ ದಾತವ್ಯಾ ತಸ್ಯಾಸೀನ್ಮೇ ಪಿತುರ್ಮತಿಃ ॥ ೨೨ ॥**

---

೧೯ ಆ ರಮಣಿಯನ್ನು ನೋಡಿ ರಾವಣನು ಪ್ರಶ್ನೆಮಾಡಿದುದೇನೆಂದರೆ ಓ ಮನಮೋಹಿನಿಯಾದ ಮಾನಿನಿಯೇ, ಒಳ್ಳೇ ಯೌವನ ಸಂಪನ್ನಳಾದ ನೀನು ಯಾರು ? ಈ ಭೋಗಾರ್ಹವಾದ ಈ ಪ್ರಾಯದಲ್ಲಿ ನೀನು ಏತಕ್ಕಾಗಿ ಇಂತಹ ಘೋರ ತಪಸ್ಸುಮಾಡುತ್ತಾ ಕುಳಿತಿರುವಿ ?

೨೦-೨೧ ರಾವಣನು ಹೇಳಿದ ಆ ಮಾತನ್ನು ಕೇಳಿ ಆ ಕನ್ಯೆಯು ತನ್ನ ವೃತ್ತಾಂತವನ್ನೆಲ್ಲಾ ಅವನೊಡನೆ ನಿಜವಾಗಿ ತಿಳಿಸಿದಳು ನಾನು ಬೃಹಸ್ಪತ್ಯಾಚಾರ್ಯರ ಮಗನಾದ ಕುಶಧ್ವಜನ ಮಗಳು ನನ್ನ ತಂದೆ ವೇದಾಭ್ಯಾಸಮಾಡುತ್ತಿದ್ದಾಗ ನನ್ನ ತಾಯಿಯು ನನ್ನನ್ನು ಪ್ರಸುವಿಸಿದಳು ಆದ್ದರಿಂದ ನನಗೆ ವೇದವತಿಯೆಂದು ತಾಯಿ ತಂದೆಗಳು ನಾಮಕರಣಮಾಡಿದರು. ಆಗ ನನ್ನನ್ನು ನನ್ನ ತಂದೆಯು ವೇದವಾಕ್ಯ ಗಳಿಂದಲೂ ವೇದ್ಯನಲ್ಲದ ಪರಮಪುರುಷನಾದ ಮಹಾವಿಷ್ಣುವಿಗೇ ಕೊಟ್ಟು ಮದುವೆ ಮಾಡಬೇಕೆಂದು ಮನಸ್ಸಿನಲ್ಲಿ ಸಂಕಲ್ಪಮಾಡಿದನು.

೨೨ ಈ ಮೇರೆ ಸಂಕಲ್ಪಮಾಡಿಕೊಂಡಿರಲು ಒಂದಾನೊಂದು ದಿನ ಶಂಭು ವೆಂಬ ರಾಕ್ಷಸಶ್ರೇಷ್ಠನು ಬಂದು ನನ್ನನ್ನು ತನಗೆ ವಿವಾಹಮಾಡಿಕೊಡೆಂದು ಕೇಳಲು, ನನ್ನ ತಂದೆಯು ಅವನ ಪ್ರಾರ್ಥನೆಯನ್ನು ನಿರಾಕರಿಸಿಬಿಟ್ಟನು ಆಗ ಆ ಶಂಭುವು ಮಹತ್ತರವಾದ ದ್ವೇಷವನ್ನು ಸಾಧಿಸಿ ರಾತ್ರಿ ವೇಳೆಯಲ್ಲಿ ತನ್ನ ತಂದೆಯನ್ನು ಕೊಂದು ಹಾಕಿಬಿಟ್ಟನು

ಮನ್ಯಾಚನಾ ನಿರಸ್ತೇನ ದೈತ್ಯನಾಥೇನ ಶಂಭುನಾ ।
ಪಿತಾ ಮಮ ಹತೋ ರಾತ್ರೌ ತಮಾಲಿಂಗ್ಯ ವಿಭಾವಸುಂ ॥ ೨೩ ॥

ಪ್ರವಿಷ್ಟಾ ಜನಯಿತ್ರೀ ಮೇ ಯಥ್ಯಾಹಂ ನಿಧೃತಾ ಚಿರಂ ।
ಸ್ವರ್ಗಸ್ಥಸ್ಯ ಪಿತುಃ ಕಾಮಂ ಸ್ಯಾಹಂ ಸತ್ಯಮಭೀಪ್ಸ್ಯತೀ ॥ ೨೪ ॥

ಆರಾಧಯಾಮಿ ತಪಸಾ ಪತ್ಯರ್ಥಂ ಮಧುಸೂದನಂ ।
ತತಸ್ತಾಮಬ್ರವೀದ್ರಕ್ಷೋ ಮಾ ತ್ವಂ ಕ್ಲೇಶೇ ಮತಿಂ ಕೃಥಾಃ ॥ ೨೫ ॥

ಭವಸ್ವ ಮೇ ವರಾರೋಹೇ ಭಾರ್ಯಾ ತ್ರೈಲೋಕ್ಯಸುಂದರಿ ।
ರೂಪಸ್ಯ ವಯಸಶ್ಚೈವ ನಾನುರೂಪಂ ತಪಸ್ತವ ॥ ೨೬ ॥

ತ್ವಾಂ ಕೃತ್ವೋಪರತೋ ಮನ್ಯೇ ರೂಪಂ ಕೃತ್ವಾ ಸ ವಿಶ್ವಕೃತ್ ।
ನ ಹಿ ರೂಪೋಪಮಾ ತ್ವನ್ಯಾ ತಥಾಽಸ್ತಿ ಸದೃಶೀ ಯತಃ ॥ ೨೭ ॥

---

೨೩ ನನ್ನ ತಂದೆಯು ಮೃತವಾಗಲು ನನ್ನ ತಾಯಿಯೂ ಸಹ ನನ್ನ ತಂದೆಯ ಚಿತಾಗ್ನಿಯನ್ನು ಪ್ರವೇಶಮಾಡಿ ಸಹಗಮನವಿಧಿಯಿಂದ ಸ್ವರ್ಗಲೋಕಕ್ಕೆ ಪ್ರಯಾಣಬೆಳೆಸಿದಳು

೨೪-೨೫ ಈ ರೀತಿಯಾಗಿ ನನ್ನ ತಂದೆತಾಯಿಗಳಿಬ್ಬರೂ ಪರಲೋಕಗತರಾದ ಮೇಲೆ ನಾನು ಅವರ ಉದ್ದೇಶವನ್ನು ಈಡೇರಿಸಬೇಕೆಂದು ನಿರ್ಧರಿಸಿ ನನ್ನನ್ನು ಮಹಾವಿಷ್ಣುವೇ ಮದುವೆಯಾಗಬೇಕೆಂದು ಧ್ಯಾನಿಸುತ್ತಾ ಆ ಮಧುಸೂದನನನ್ನು ಕುರಿತು ತಪಸ್ಸುಮಾಡುತ್ತಲಿದ್ದೇನೆ ಇದೇ ನನ್ನ ವೃತ್ತಾಂತವೆಂದು ವೇದವತಿಯು ರಾವಣನಿಗೆ ತಿಳಿಸಿದಳು

೨೬ ವೇದವತಿಯ ಮಾತನ್ನು ಕೇಳಿ ರಾವಣನಿಂತೆಂದನು —ಎಲೆ ಹುಡುಗಿ! ನೀನು ಹೀಗೆಲ್ಲಾ ದೇಹವನ್ನು ದಂಡಿಸಿ ಕ್ಲೇಶವನ್ನೇಕೆ ಅನುಭವಿಸುತ್ತಲಿರುವೆ? ನೀನು ತ್ರಿಲೋಕಸುಂದರಿಯಾಗಿರುವುದರಿಂದ ನನ್ನನ್ನು ವರಿಸಿ, ನನ್ನನ್ನು ಮದುವೆಮಾಡಿಕೋ ಹಾಗೆ ಮಾಡಿದರೆ ನಿನ್ನ ರೂಪಯೌವನವೂ ತಪಸ್ಸೂ ಸಾರ್ಥಕವಾಗಿ ಪರಿಣಮಿಸುವುದು

೨೭. ನಿನ್ನಂತಹ ಸುಂದರಿಯನ್ನು ಇದುವರಿಗೆ ನಾನು ತ್ರಿಲೋಕದಲ್ಲೆಲ್ಲಿಯೂ ನೋಡಲೇ ಇಲ್ಲ ಬ್ರಹ್ಮನು ನಿನ್ನನ್ನು ಸೃಷ್ಟಿಮಾಡಿದ ಬಳಿಕ ಇನ್ನಾರನ್ನೂ ಸೃಷ್ಟಿಸಬಾರದೆಂದು ವಿಶ್ರಾಂತನಾಗಿ ಕುಳಿತಿರುವಂತೆ ತೋರುತ್ತಲಿದೆ

ಸಂಪೂರ್ಣಕಾಂತಿಮತ್ಸೌಮ್ಯಂ ವದನಂ ತೇ ವರಾನನೇ ।
ಸಕಲಂಕೇನ ಚಂದ್ರೇಣ ಕಥಮೌಪಮ್ಯಮರ್ಹತಿ ॥ ೨೮ ॥

ಭವ ಭೂಷಣಜಾತಾನಾಂ ಭೂಷಣಂ ತ್ವಂ ಶುಚಿಸ್ಮಿತೇ ।
ವೃಣೀಷ್ವಂ ಮಾಂ ವರಾರೋಹೇ ಪತಿತ್ವೇ ವರವರ್ಣಿನಿ ॥ ೨೯ ॥

ಆಕ್ರಮ್ಯಾಕ್ರಮ್ಯ ಲೋಕಸ್ಯ ಪ್ರಧಾನಾ ಯಾ ಮಯಾ ಹೃತಾಃ ।
ಸ್ತ್ರಿಯಃ ಕುರುಷ್ವ ಸರ್ವಾಸಾಂ ತಾಸಾಂ ಸ್ವಾಮ್ಯಮನಿಂದಿತೇ ॥ ೩೦ ॥

ಜಟಾಮಾಲಾಜಿನಧರೀ ತ್ವಮೇವಂ ರತಿವರ್ಧಿನೀ ।
ನ ಜಾನೇ ಮಂಡನಾಂ ಪ್ರಾಪ್ಯ ಕಥಂ ಭೀರು ಭವಿಷ್ಯಸಿ ॥ ೩೧ ॥

---

೨೮ ಎಲೌ ಚಂದ್ರಮುಖಿಯೆ! ನಿನ್ನ ಸೌಮ್ಯವಾದ ಷೋಡಶಕಲಾ ಪರಿಪೂರ್ಣವಾದ ನಿಷ್ಕಲ್ಮಷವಾದ ಮುಖಸೌಂದರ್ಯವನ್ನು ನೋಡಿ ಕಳಂಕ ಸಹಿತನಾದ ಚಂದ್ರನು ನಿನಗೆ ಹೇಗೆ ಸರಿಸಮನಾದಾನು ?

೨೯. ಎಲೌ ಮಂದಹಾಸಿನಿಯೆ! ನಿನ್ನ ನಿರ್ಮಲವಾದ ಸೌಂದರ್ಯವು ರಾಶಿರಾಶಿ ಒಡವೆಗಳಿಗಿಂತ ಹೆಚ್ಚು ಭೂಷಣವುಳ್ಳದಾಗಿದೆ. ಎಲೌ, ಮತ್ತಕಾಶಿನಿಯೇ, ನನ್ನನ್ನು ನಿನ್ನ ಗಂಡನನ್ನಾಗಿ ವರಿಸು.

೩೦ ನಾನು ಮೂರು ಲೋಕದಲ್ಲಿರುವ ಸುಂದರಿಯರೆಲ್ಲರನ್ನೂ ಒಬ್ಬರನ್ನೂ ಬಿಡದಂತೆ ಬಲಾತ್ಕಾರವಾಗಿ ಹಿಡಿದು ಹಿಡಿದು ತಂದು ನನ್ನ ಅಂತಃಪುರದಲ್ಲಿ ಕೂಡಿ ಕೊಂಡಿದ್ದೇನೆ ನೀನು ಅವರಿಗೆಲ್ಲಾ ಸ್ವಾಮಿನಿಯಾಗಿ ಅವರನ್ನೆಲ್ಲಾ ನಿನ್ನ ಅಂಕೆ ಯಲ್ಲಿಟ್ಟುಕೋ

೩೧ ನಿನ್ನ ಜಟೆಗಳೇನು ? ಹಾರಗಳೇನು ? ಮೃಗಚರ್ಮಗಳೇನು ? ಇವೆ ಲ್ಲವೂ ರತಿವರ್ಧಿನಿಯಾದ ನಿನಗೆ ತಕ್ಕುದಲ್ಲ ಇಂತಹ ಪರಮಸುಂದರಿಯಾದ ನೀನು ಹೀಗೇಕೆ ತಪಸ್ಸುಮಾಡುತ್ತಿರುವೆಯೋ ನಾನು ಬೇರೆ ಕಾಣೆನು

ರೂಪೇಣ ವಯಸಾ ಲಕ್ಷ್ಮ್ಯಾ ತಥೈವ ಗುಣಸಂಪದಾ ।
ವಿಕ್ರಮೇ ಣೇ ವರಾರೋಹೇ ನ ಸಮೋ ಹಿ ಜನಾರ್ದನಃ ॥ ೩೨ ॥

ಜನ್ಮ ತಸ್ಯ ನ ಜಾನಂತಿ ಪರೇಭ್ಯೋ ಯೇ ಪರೇ ಜನಾಃ ।
ತೇನ ತ್ವಮಕುಲೀನೇನ ಕಿಂಕರಿಷ್ಯಸಿ ಸುಂದರಿ ॥ ೩೩ ॥

ಅನಿಂದ್ರಂ ಲೋಕಮಿಚ್ಛಂತೀ ಸುರಾಣಾಂ ಹಿತಕಾಮ್ಯಯಾ ।
ಹತಾ ಯೇನಾನುವೃತ್ತೇನ ಯೋಷಿತ್ಕಾವ್ಯಾರಣೀ ಪುರಾ ॥ ೩೪ ॥

ಪುರಾಣಾ ಯೇ ಜಗತ್ಯಸ್ಮಿಂಸ್ತೇಭ್ಯಃ ಪೂರ್ವತರಾಶ್ಚ ಯೇ ।
ತೇಭ್ಯೋಽಪ್ಯತಿ ಪುರಾಣಂ ತಂ ಭರ್ತಾರಂ ಕಥಮಿಚ್ಛಸಿ ॥ ೩೫ ॥

---

೩೨ ನಾನು ಹೇಳುತ್ತೇನೆ, ಕೇಳು. ನೀನಾರನ್ನು ಕುರಿತು ತಪಸ್ಸುಮಾಡುತ್ತಲಿರುವಿಯೋ ಆ ಜನಾರ್ದನನು ರೂಪದಿಂದಲಾಗಲೀ, ವಯಸ್ಸಿನಿಂದಲಾಗಲೀ, ಸಂಪತ್ತಿನಿಂದಲಾಗಲೀ, ಗುಣಗಣ ಸಂಪತ್ತಿನಿಂದಲಾಗಲೀ, ಶೌರ್ಯದಲ್ಲಿಯಾಗಲೀ ನನ್ನ ಸರಿಸಮಕ್ಕೆ ಬೇರೆ ಬರಲಾರರು

೩೩ ಇವನು ಯಾವ ಜನ್ಮದಲ್ಲಿ ಹುಟ್ಟಿದವನೆಂದು, ಪರಾತ್ಪರ ವಸ್ತುವನ್ನು ಹುಡುಕುತ್ತಿರುವವರೂ ಸಹ ಇದುವರಿಗೂ ತಿಳಿದಿಲ್ಲ ಇಂತಹ ಕುಲವಿಹೀನನನ್ನು ಕಟ್ಟಿಕೊಂಡು ನೀನೇನು ತಾನೇ ಮಾಡೀಯೆ ?

೩೪ ದೇವತೆಗಳಿಗೆ ಹಿತಮಾಡಲಿಚ್ಛಿಯಿಂದ ಇವನನ್ನನುಸರಿಸಿಕೊಂಡು ಇಂದ್ರನಿಲ್ಲದ ಅಮರಾವತಿಗೆ ಹೋದ ಕಾವ್ಯಾರಣಿಯೆಂಬ ಹಂಗಸು ಅನ್ಯಾಯವಾಗಿ ಮರಣಹೊಂದಿದಳು

೩೫ ಈ ಲೋಕದಲ್ಲಿ ಎಷ್ಟು ಮಂದಿ ಮುದಕರಿರುವರೋ, ಅವರಿಗಿಂತ ಪೂರ್ವಿಕರು ಅದಷ್ಟು ಮಂದಿ ಮುದುಕರಾಗಿದ್ದರೋ, ಅವರಿಗಿಂತ ಎಷ್ಟೆಷ್ಟೋ ಮುಂಚೆ ಹಣ್ಣು ಹಣ್ಣು ಮುದುಕರಿದ್ದರೋ, ಅಂತಹ ಮುದುಕರ ಮಂದೆಗಳಲ್ಲಿ ಈ ಜನಾರ್ದನನು ಬಲು ಮುಪ್ಪಿನ ಮುದುಕನು ಇವನಿಗೆ ಎಷ್ಟು ವಯಸ್ಸಾಗಿದೆಯೋ ಅದು ಇದುವರಿಗೂ ಯಾರಿಗೂ ತಿಳಿಯದೇ ತಿಳಿಯದು ಇಂತಹ ಪುರಾಣಮೂರ್ತಿಯನ್ನು ನೀನು ಹೇಗೆ ಮದುವೆಮಾಡಿಕೊಳ್ಳಬೇಕೆಂದು ಬಯಸುತ್ತಿರುವಿ ? ಹೇಳು.

ಬ್ರಹ್ಮಣೋ ವರದಾನೇನ ಯಸ್ತ್ವವಧ್ಯೋ ದಿವೌಕಸಾಂ ।
ತೇ ದೈತ್ಯನಾಥಾಃ ಸಬಲಶ್ಛದ್ಮನಾ ತೇನ ಘಾತಿತಾಃ ॥ ೩೬ ॥

ತತ್ಪ್ರತಾಪನಿವಿಷ್ಟೇನ ಚೇತಸಾ ರಕ್ಷಸಾಂ ಶ್ರಿಯಂ ।
ಯೋ ಬಿಭರ್ತ್ಯಪಿ ತಾಂ ತೇನ ಕಿಂ ಕರಿಷ್ಯಸಿ ಭಾಮಿನಿ ॥ ೩೭ ॥

ವೃದ್ಧೇಭ್ಯೋ ನ ಶ್ರುತಂ ತಸ್ಯ ತ್ವಯಾ ರೂಪಮನಿಂದಿತೇ ।
ವಿದಿತಂ ಸರ್ವಲೋಕಾನಾಂ ವಿಶ್ವರೂಪಧರಸ್ತ್ವಸೌ ॥ ೩೮ ॥

ಶೇಷಾಹಿಭೋಗಪರ್ಯಂಕೇ ತೇನ ತ್ವಂ ಶಯಿತಾ ಸಹ ।
ಸವಿಷೈರ್ಭೋಗನಿಶ್ವಾಸೈಃ ಪರಾಂ ಗ್ಲಾನಿಮುಪೈಷ್ಯಸಿ ॥ ೩೯ ॥

---

೩೬ ಇನ್ನೂ ಅವನ ದುರ್ಗುಣಗಳನ್ನು ಕೇಳು. ಇವನು ಬಲು ಮೋಸಗಾರನು. ಯಾವನಾದರೂ ಶೂರನಾದ ರಾಕ್ಷಸನು ಬ್ರಹ್ಮನಿಂದ ಮರಣವೇ ಆಗಬಾರದೆಂದು ವರವನ್ನು ಪಡೆದಿದ್ದರೆ, ಅಂತಹ ವೀರರಾಕ್ಷಸ ರಾಜರನ್ನು ಇವನು ಎಂಥದೋ ಒಂದು ಹೀನವೇಷವನ್ನು ಧರಿಸಿ ಮೋಸದಿಂದ ಕೊಂದು ಬ್ರಹ್ಮನ ವರದ ಗೌರವವನ್ನೇ ಹಾಳುಮಾಡುತ್ತಾ ಬಂದಿದ್ದಾನೆ

೩೭ ಇನ್ನೂ ಅವನ ಅವಸ್ಥೆಯನ್ನು ಕೇಳು ಇವನು ರಾಕ್ಷಸರನ್ನು ಕೊಂದು ಕೊಂದು ಅವರ ಸಂಪತ್ತನ್ನು ಕಿತ್ತುಕೊಳ್ಳುವುದೊಂದೇ ಹೊರತು, ಅದನ್ನು ಅನುಭವಿಸುವುದಕ್ಕಂತೂ ಅವನಿಗೆ ಯೋಗ್ಯತೆಯೇ ಇಲ್ಲ ಇಂತಹ ಅಯೋಗ್ಯನನ್ನು ಮದುವೆಮಾಡಿಕೊಂಡು ನೀನೇನು ತಾನೇ ಸುಖಪಟ್ಟೀಯೆ ?

೩೮. ಎಲೌ ಪರಿಶುದ್ಧಾತ್ಮಳೇ! ಯಾರಾದರೂ ಹಣ್ಣು ಹಣ್ಣು ಮುದುಕರನ್ನು ಕೇಳಿ ನೋಡು ಅವನ ರೂಪವೆಂತಹುದೆಂದು ಅವರು ಹೇಳುವರು ಇವನು ವಿಶ್ವರೂಪಧರನೆಂದು ಲೋಕಕ್ಕೆ ಲೋಕವೇ ತಿಳಿದುಕೊಂಡಿರುವುದು.

೩೯. ನೀನು ಅವನನ್ನು ಮದುವೆಮಾಡಿಕೊಂಡರೆ ನಿನಗೆ ಒದಗುವ ಕಷ್ಟಗಳನ್ನು ಹೇಳುತ್ತೇನೆ, ಕೇಳು ಆ ಶೇಷಶಾಯಿಯು ಪ್ರತಿದಿನವೂ ಆದಿಶೇಷನ ಮೇಲೆ ಮಲಗಿಕೊಳ್ಳುತ್ತಾನೆ ಅದೇ ಅವನು ಮಲಗುವ ಮಂಚ ಆ ಸರ್ಪಶಯನದ ಮೇಲೆ ನೀನು ಆ ವಿಷ್ಣುವಿನ ಬಳಿ ಮಲಗಿಕೊಂಡಾಗ, ಆ ಹಾವಿನ ವಿಷಮಿಶ್ರಿತವಾದ ನಿಶ್ವಾಸ (ಉಸುರು) ವಾಯುವು ನಿನಗೆ ಬೀಸಿ ನೀನು ಬಹಳ ಬಳಲಿಕೆಯನ್ನು ಹೊಂದಬೇಕಾಗುತ್ತದೆ

ಕಂಠಗ್ರಹೇಣ ನಿಹತೌ ಯೇನ ತೌ ಮಧುಕೈಟಭೌ ।
ಕಥಂ ಕಂಠಗ್ರಹಂ ತಸ್ಯ ಸಮುತ್ಸ್ಯೆಸ್ಯಸಿ ಸುಂದರಿ ॥ ೪೦ ॥

ಹಿರಣ್ಯಕಶಿಪುರ್ಯೇನ ನಖೈರುತ್ಕ್ರಾಂತಜೀವಿತಃ ।
ಕಥಂ ರತ್ಯಂತರೇ ತಸ್ಯ ನಖಾಘಾತಂ ಸಹಿಷ್ಯಸಿ ॥ ೪೧ ॥

ತಸ್ಮಾದ್ಭಾವಂ ಸಮುತ್ಸೃಜ್ಯ ಚಾರುಗಾತ್ರಿ ಜನಾರ್ದನೇ ।
ಭಜಸ್ವ ಭಜಮಾನಂ ಮಾಂ ಚಿರಂ ಪ್ರೀತಿಮವಾಪ್ನುಹಿ ॥ ೪೨ ॥

॥ ವೇದವತ್ಯುವಾಚ ॥

ಗುಣಾ ಏವ ಸುರೇಶಸ್ಯ ದೋಷಾಸ್ತೇ ರಜನೀಚರ ।
ಜಗತ್ಪ್ರಕಾಶಕಾ ಭಾನೋರುಲೂಕಸ್ಯೇವ ರಶ್ಮಯಃ ॥ ೪೩ ॥

---

೪೦　ಅವನ ಕಂಠಾಲಿಂಗನದಿಂದ ಮಧುಕೈಟಭರೆಂಬ ರಾಕ್ಷಸರಿಬ್ಬರೂ ಪ್ರಾಣತ್ಯಾಗಮಾಡಿದರು　ಆ ರಾಕ್ಷಸರೇ ಅವನ ಕಂಠಗ್ರಹಣದಿಂದ ಮಡಿದಿರುವಲ್ಲಿ ಸುಕೋಮಲೆಯಾದ ನೀನು ಅವನ ಕಂಠಾಲಿಂಗನವನ್ನು ಯಾವ ಧೈರ್ಯದಿಂದ ಮಾಡಿಕೊಳ್ಳುವಿಯೋ, ನಾನು ಬೇರೆ ಅರಿಯೆನು

೪೧　ನರಸಿಂಹಾವತಾರವನ್ನು ಮಾಡಿದ ಆ ಮಹಾವಿಷ್ಣುವಿನ ಉಗುರುಗಳಿಂದ ಹಿರಣ್ಯಕಶಿಪುವು ಪ್ರಾಣವನ್ನೇ ಬಿಟ್ಟುಬಿಟ್ಟನು　ಹೀಗಿರುವಲ್ಲಿ, ಆ ಪ್ರಹ್ಲಾದವರದನು ನಿನ್ನೊಡನೆ ಸಂಭೋಗಮಾಡುತ್ತಿರುವಾಗ ನಿನ್ನ ಸ್ತನಗಳ ಮೇಲೆ ನಖಕ್ಷತ (ಉಗುರಿನ ಗುರುತು) ಮಾಡಿದರೆ ಅದನ್ನು ನೀನೆಂತು ಸಹಿಸಬಲ್ಲೆ ?

೪೨　ಇದನ್ನೆಲ್ಲಾ ಸ್ವಲ್ಪ ನಿಧಾನವಾಗಿ ಯೋಚಿಸಿ ನಿನ್ನ ಮನಸ್ಸಿನಲ್ಲಿರುವ, ಅವನನ್ನು ಲಗ್ನಮಾಡಿಕೊಳ್ಳಬೇಕೆಂಬ ಆಲೋಚನೆಯನ್ನು ಬಿಟ್ಟು ಬಿಟ್ಟು ನಿನ್ನನ್ನೇ ಪ್ರೀತಿಸುತ್ತಿರುವ ನನ್ನನ್ನು ಲಗ್ನಮಾಡಿಕೊ　ಇದರಿಂದ ನೀನು ಬಹಳ ಸುಖವನ್ನು ಹೊಂದುತ್ತೀಯೆ

೪೩.　ಈ ಮೇರೆ ನುಡಿದ ರಾವಣನ ಮಾತುಗಳನ್ನು ಕೇಳಿ ಆ ವೇದವತಿಯು ಹೇಳಿದುದೇನೆಂದರೆ —

ಎಲೋ, ಹುಲುರಕ್ಕಸ! ಆ ಭಗವಂತನ ಸಕಲ ಗುಣಗಳನ್ನೂ ನೀನು ದೋಷತ್ವೇನ ಉಚ್ಚರಿಸುತ್ತಲಿದ್ದೀಯೆ! ನೀನು ಹೀಗೆ ಮಾತನಾಡುತ್ತಿರುವುದನ್ನು ನೋಡಿದರೆ, ಗೂಬೆಗಳು ಜಗತ್ಪ್ರಕಾಶಕನಾದ ಸೂರ್ಯನ ಕಿರಣಗಳನ್ನು ದೂಷಿಸುವಂತೆ ತೋರುತ್ತಲಿದೆ

ಕಿಂ ತ್ವಯಾ ಸಹ ವಾದೇನ ವರಣೀಯಃ ಸ ಮೇ ಪ್ರಭುಃ ।
ಯಾದೃಶಸ್ತಾದೃಶೋ ವಾಽಪಿ ಪತಿರ್ಮೇ ರಜನೀಚರ ॥ ೪೪ ॥

ಇತಿ ವೇದವತೀವಾಕ್ಯಂ ಶ್ರುತ್ವಾ ಕೋಪಸಮನ್ವಿತಃ ।
ಕಾಮೇನ ರಾಕ್ಷಸೇಂದ್ರಸ್ತಾಂ ಕೇಶಪಾಶೇ ಪರಾಮೃಶತ್ ॥ ೪೫ ॥

ತ್ವಯಾ ಸಂಧರ್ಷಿತಾ ಪಾಪ ಪ್ರವೇಕ್ಷ್ಯಾಮಿ ಹುತಾಶನಂ ।
ಅಯೋನಿಜಾ ಭವಿಷ್ಯಾಮಿ ವಧಾರ್ಥಂ ಚ ತಥಾ ತವ ॥ ೪೬ ॥

ಏವಮುಕ್ತ್ವಾ ಚಿತಾಂ ಕೃತ್ವಾ ಪ್ರವಿಷ್ಟಾ ಜಾತವೇದಸಂ ।
ಭೂಯಃ ಸೀತಾ ಸಮುತ್ಪನ್ನಾ ಜನಕಸ್ಯ ಮಹಾತ್ಮನಃ ॥ ೪೭ ॥

---

೪೪ ಅಯೋಗ್ಯನಾದ ನಿನ್ನ ಸಂಗಡ ಮಾತನಾಡಿ ಪ್ರಯೋಜನವೇನು ? ಆ ಲೋಕನಾಯಕನು ಹೇಗೆ ಬೇಕಾದರೂ ಇರಲಿ ನಾನು ಅವನನ್ನೇ ಮದುವೆಮಾಡ್ಕಿಕೊಳ್ಳುವೆನೇ ವಿನಹ ಇತರರಾರನ್ನೂ ಮನಸ್ಸಿನಲ್ಲಿಯೂ ಸ್ಮರಿಸುವುದಿಲ್ಲವೆಂದ ತಿಳಿದುಕೋ

೪೫. ಈ ಪ್ರಕಾರವಾಗಿ ವೇದವತಿಯು ಖಂಡಿತವಾಗಿ ಉತ್ತರ ಕೊಟ್ಟೊಡನೆಯೇ ರಾವಣನಿಗೆ ಬಹು ಕೋಪ ಬಂದು, ಕಾಮುಕನಾದ ಆ ರಾವಣನು ಅವಳ ಜಡೆಯನ್ನು ಹಿಡಿದುಕೊಂಡನು

೪೬ ಆಗ ವೇದವತಿಯು ದುಃಖಿಸುತ್ತಾ, ಎಲೋ ಪಾಪಿಯೇ ! ನಿನ್ನ ಹಸ್ತಸ್ಪರ್ಶವಾದ ದೇಹವನ್ನು ಅಗ್ನಿಯಲ್ಲಿ ಹೋಮಮಾಡಿ ಬಿಡುತ್ತೇನೆ ಮುಂದೆ ಇದೇ ನಾನು ಅಯೋನಿಜಳಾಗಿ ಹುಟ್ಟಿ ನಿನ್ನನ್ನು ವಧೆಮಾಡಿಸುತ್ತೇನೆ.

೪೭ ಹೀಗೆ ಹೇಳು ಹೇಳುತ್ತಲಿದ್ದ ಹಾಗೆಯೇ ಅಲ್ಲಿಯೇ ಚಿತಿಯನ್ನು ಸಿದ್ಧಪಡಿಸಿ ಅದಕ್ಕೆ ಅಗ್ನಿಪ್ರತಿಷ್ಠೆಮಾಡಿಸಿ ಆ ವೇದವತಿಯು ಅಗ್ನಿದೇವರಿಗೆ ತನ್ನ ದೇಹವನ್ನು ಸಮರ್ಪಿಸಿಬಿಟ್ಟಳು ಅದೇ ವೇದವತಿಯೇ ಮುಂದೆ ಜನಕನ ಯಜ್ಞಭೂಮಿ ಶುದ್ಧಿಕಾಲದಲ್ಲಿ ನೇಗಿಲಿನ ತುದಿಯಲ್ಲಿ ಸೀತೆಯಾಗಿ ಕಾಣಿಸಿಕೊಂಡಳು ಆ ಸೀತೆಯನ್ನು ಜನಕಮಹಾರಾಜನು ಸಂರಕ್ಷಿಸಿದನು

ಅಯೋನಿಜಾ ಮಹಾಭಾಗಾ ಕರ್ಷತೋ ಯಜ್ಞಮೇದಿನೀಂ ।
ಭರ್ತಾರಂ ತಪಸಾ ವಿಷ್ಣುಂ ರಾಮಂ ಲಬ್ಧವತೀ ಯಥಾ ॥ ೪೮ ॥

ಯಸ್ಯಾ ಅರ್ಥೇ ಸ ರಾಮೇಣ ದಶಗ್ರೀವೋ ಹತೋ ರಣೇ ।
ಲೋಕೋಪವಾದಭೀತೇನ ದಶಗ್ರೀವಗೃಹೋಷಿತಾ ॥ ೪೯ ॥

ಅತಃ ಪತ್ನೀ ಪರಿತ್ಯಕ್ತಾ ಸೀತಾ ಭೂಯೋ ಜನೇಶ್ವರ ।
ವಾಲ್ಮೀಕೇರಾಶ್ರಮೇ ಸಾ ತು ಪ್ರಸೂತಾ ದಾರಕದ್ವಯಂ ॥ ೫೦ ॥

---

೪೮ ಓ ! ಶೈಲೂಷರಾಜನೇ ! ಕೇಳು ಮೇಲೆ ಹೇಳಿದ ರೀತಿಯಾಗಿ ಜನಕ ಮಹಾರಾಜನು ಯಜ್ಞಭೂಮಿಯನ್ನು ನೇಗಿಲಿನಿಂದ ಉಳಿಸುತ್ತಿರುವಾಗ ಅವನಿಗೆ ಅಯೋನಿಜ (ತಾಯಿಯ ಹೊಟ್ಟೆಯಲ್ಲಿ ಹುಟ್ಟದೆ ಇದ್ದವಳು) ಯಾದ ಸೀತೆಯು ದೊರೆತು ಜನಕನ ಮಗಳೆನಿಸಿಕೊಂಡು ಮಹಾವಿಷ್ಣುವಿನ ಅವತಾರಪುರುಷನಾದ ಶ್ರೀ ರಘುರಾಮಚಂದ್ರನನ್ನು ತನ್ನ ತಪಸ್ಸಿನ ಫಲವಾಗಿ ಗಂಡನನ್ನಾಗಿ ಹೊಂದಿದಳು

೪೯. ಮುಂದಿನ ರಾಮಾಯಣ ಕಥೆಯನ್ನು ನೀನು ಕೇಳಿಯೇ ಇರುವಿಯಷ್ಟೆ? ದಂಡಕಾರಣ್ಯದಲ್ಲಿ ರಾಮಲಕ್ಷ್ಮಣರಿಬ್ಬರೂ ಇಲ್ಲದ ಕಾಲದಲ್ಲಿ ರಾವಣನು ಸನ್ಯಾಸಿಯ ವೇಷದಿಂದ ಬಂದು ಜಾನಕಿ (ವೇದವತಿ) ಯನ್ನಪಹರಿಸಿಕೊಂಡು ಹೋದ ವೃತ್ತಾಂತವೂ, ಲೋಕಾಪವಾದಕ್ಕೆ ಹೆದರಿ ಶ್ರೀರಾಮನು ರಾವಣನ ಮನೆಯಲ್ಲಿದ್ದ ಸೀತಾದೇವಿಯನ್ನು ಸುಗ್ರೀವಸೈನ್ಯದೊಡನೆ ಹೋಗಿ, ಲಂಕಾಪಟ್ಟಣದಲ್ಲಿದ್ದ ರಾವಣನನ್ನು ಕೊಂದು ಸೀತೆಯನ್ನು ತಂದುದೂ ಲೋಕಪ್ರಸಿದ್ಧವಾಗಿಯೇ ಇದೆಯಷ್ಟೆ?

೫೦. ರಾಮನು ರಾಜ್ಯಭಾರಮಾಡುತ್ತಿದ್ದಾಗ ಒಬ್ಬ ರಜಕನು ತನ್ನ ಹೆಂಡತಿಯ ವಿಷಯವಾಗಿ ಸೀತಾದೇವಿಯ ಉದಾಹರಣೆಯನ್ನು ತೆಗೆದುಕೊಂಡು ಮಾತನಾಡಿದುದನ್ನು ಕೇಳಿ ಪುನಃ ಲೋಕಾಪವಾದಕ್ಕೆ ಹೆದರಿದವನಾಗಿ, ಗರ್ಭಿಣಿಯಾಗಿದ್ದ ಸೀತಾದೇವಿಯನ್ನು ದಂಡಕಾರಣ್ಯದಲ್ಲಿ ಬಿಟ್ಟು ಬಂದುದೂ, ಅಲ್ಲಿ ಸೀತಾದೇವಿಯು ವಾಲ್ಮೀಕಿಋಷಿಗಳಿಂದ ಪೋಷಿತಳಾಗಿ, ವಾಲ್ಮೀಕಿ ಋಷಿಗಳ ಆಶ್ರಮದಲ್ಲಿ ಎರಡು ಮಕ್ಕಳನ್ನು ಹೆತ್ತ ಸಮಾಚಾರವೂ ಸಹ ಉತ್ತರರಾಮಾಯಣದಲ್ಲಿ ಉಕ್ತವಾಗಿಯೇ ಇದೆ

**ಕುಶಂ ಲವಂ ಚ ವಿಕ್ರಾಂತೌ ಯಯೋಃ ಸರ್ವಾಃ ಕ್ರಿಯಾಃ ಕೃತಾಃ ।**
**ವಾಲ್ಮೀಕಿನಾ ಮಹಾಭಾಗೌ ವೇದಮಧ್ಯಾಪಿತೌ ಯಥಾ ॥ ೫೧ ॥**

**ಪ್ರಕರ್ಷಂ ಚ ಧನುರ್ವೇದೇ ಪಾರಂ ನೀತೌ ತು ತೌ ಶಿಶೂ ।**
**ವಾಲ್ಮೀಕಿನಾ ತಥಾ ಕೃತ್ವಾ ರಾಮಸ್ಯ ಚರಿತಂ ಶುಭಂ ॥ ೫೨ ॥**

**ಅಧ್ಯಾಪಿತೌ ವಿಶಾಲಾಕ್ಷೌ ದಾರಕೌ ಪ್ರಿಯದರ್ಶನೌ ।**
**ಅಗಾಯತಾಂ ತತಸ್ತೌ ತು ರಾಮಯಜ್ಞೇ ಕುಮಾರಕೌ ॥ ೫೩ ॥**

**ರಾಮಸ್ಯ ಚರಿತಂ ಕೃತ್ಸ್ನಂ ರಾಮಸ್ಯ ಪುರತಃ ಸ್ಥಿತೌ ।**
**ತಸ್ಮಾತ್ಕಾವ್ಯಾತ್ತು ವಿಜ್ಞಾಯ ಪುತ್ರೌ ತೌ ಪ್ರಿಯದರ್ಶನೌ ॥ ೫೪ ॥**

೫೧ ಈ ಮೇರೆ ಸೀತಾದೇವಿಯ ಉದರದಲ್ಲಿ ಜನಿಸಿದ ಲವಕುಶರಿಬ್ಬರಿಗೂ ವಾಲ್ಮೀಕಿ ಮಹರ್ಷಿಗಳು ತಮ್ಮ ಆಶ್ರಮದಲ್ಲಿಯೇ ಜಾತಕರ್ಮ, ನಾಮಕರಣ, ಅನ್ನ ಪ್ರಾಶನ, ಚೌಲೋಪನಯನಾದಿಗಳನ್ನು ವೇದವಿಹಿತವಾಗಿ ಮಾಡಿ ತಾವೇ ಆ ಬಾಲಕ ರಿಗೆ ವೇದವೇದಾಂಗಾದಿ ಸಕಲ ವಿದ್ಯೆಗಳನ್ನೂ ಕಲಿಸಿದರು

೫೦ ಆ ಬಳಿಕ ಉಪಕ್ರಮೋಪಸಂಹಾರಕ್ರಮಗಳನ್ನೊಳಗೊಂಡ ಕ್ಷತ್ರಿ ಯೋಚಿತವಾದ ಧನುರ್ವೇದವನ್ನೂ ಸಹ ಕಲಿಸಿದವರಾಗಿ ಶ್ರೀರಾಮಚಂದ್ರನ ಚರಿತ್ರ ಯನ್ನು ರಾಮಾಯಣ (ಆದಿ) ಕಾವ್ಯರೂಪವಾಗಿ ರಚಿಸಿ ಅದನ್ನು ಆ ಮಕ್ಕಳಿಬ್ಬರಿಗೂ ಚೆನ್ನಾಗಿ ವ್ಯಾಸಂಗಮಾಡಿಸಿದರು

೫೩ ವಿಶಾಲನಯನರೂ ಪರಮಸುಂದರರೂ ಆದ ಆ ಮಕ್ಕಳೀರ್ವರು ವಾಲ್ಮೀಕಿಯಿಂದ ಉಪದಿಷ್ಟರಾಗಿ ಆ ಪರಮಪವಿತ್ರವಾದ ಶ್ರೀಮದ್ರಾಮಾಯಣವನ್ನು ನಾನಾವಿಧ ಮಧುರರಾಗಾಲಾಪನೆಗಳಿಂದ ರಾಮನ ಅಶ್ವಮೇಧಯಾಗಶಾಲೆಯಲ್ಲಿ ತುಂಬಿದ್ದ ಪ್ರಚಂಡಸಭೆಯಲ್ಲಿ ಗಾನಮಾಡಿದರು

೫೪ ಶ್ರಿಯಃಪತಿಯಾದ ಪರಮಾತ್ಮನಾದ ರಾಮಚಂದ್ರಮೂರ್ತಿಯ ಮುಂದೆ ಸಾಕ್ಷಾತ್ತಾಗಿ ನಿಂತುಕೊಂಡು ಮೊದಲಿನಿಂದ ಹಿಡಿದು ಕೊನೆಯವರಿಗೂ ಹಾಡಿದ ರಾಮಯಣ ಕಥೆಯನ್ನು ರಾಮನು ಕೇಳಿದ ಬಳಿಕ, ಆ ಕಾವ್ಯಶ್ರವಣದಿಂದ ಈ ಪ್ರಿಯದರ್ಶನರಾದ ಪುತ್ರರೀರ್ವರೂ ತನ್ನವರೆಂದೇ ಖಚಿತವಾಗಿ ತಿಳಿದುಕೊಂಡನು

**ಯುಜ್ಞೇ ತಾಂ ಚ ತಥಾಭೂತಾಮಾನಯಾಮಾಸ ಸತ್ವರಃ ।**
**ಉವಾಚ ಚ ವರಾರೋಹಾಂ ಪ್ರತ್ಯಯಂ ಕುರು ಮೇ ಶುಭೇ　　॥ ೫೫ ॥**

**ರಾಮಸ್ಯ ವಚನಂ ಶ್ರುತ್ವಾ ಸೀತಾ ವಚನಮಬ್ರವೀತ್ ।**
**ಯಥಾಽಹಂ ರಾಘವಾದನ್ಯಂ ಮನಸಾಽಪಿ ನ ಕಾಮಯೇ　　॥ ೫೬ ॥**

**ತೇನ ಸತ್ಯೇನ ಮೇ ದೇವೀ ವಿವರಂ ಸಂಪ್ರಯಚ್ಛತು ।**
**ಏತಸ್ಮಿನ್ನೇವ ಕಾಲೇತು ಭುವಂ ಭಿತ್ತ್ವಾ ಸಮುತ್ಥಿತಂ　　॥ ೫೭ ॥**

**ಧೃತಂ ಸಿಂಹಾಸನಂ ನಾಗೈಸ್ತತ್ರೈನಾಮುಪವೇಶಯತ್ ।**
**ಸ್ವಯಂ ವಸುಮತೀ ದೇವೀ ಪಾತಾಲಂ ಸಾ ತತೋ ಗತಾ　　॥ ೫೮ ॥**

೫೫　ಈ ವಿಷಯವು ಪ ನಸ್ಸಿಗೆ ಮುಂದಟ್ಟಾಮೊಡನೆಯೇ ಸೀತಾದೇವಿಯನ್ನೂ ಲವಕುಶರನ್ನೂ ವಾಲ್ಮೀಕ್ಯಾಶ್ರಮದಿಂದ ಅಯೋಧ್ಯಾಪಟ್ಟಣಕ್ಕೆ ಕರೆಯಿಸಿಕೊಂಡು ಶ್ರೀರಾಮನು ಮಾಯಾವೇಶಿತಚಿತ್ತನಾಗಿ ಸೀತೆಯನ್ನು ಕುರಿತು, ಈ ಮಕ್ಕಳಿಬ್ಬರೂ ನನ್ನವರೇ ಎಂದು ಏನಾದರೊಂದು ನಂಬಿಕೆಯನ್ನುಂಟುಮಾಡೆಂದು ಹೇಳಿದನು

೫೬　ರಾಮನ ಮಾತನ್ನು ಕೇಳಿ ಆ ಮಹಾಲೋಕಮಾತೆ, ಸೀತಾಮಾತೆಗೆ ಬಹಳ ಅಸಮಾಧಾನವಾಗಿ, ಇದು ನನ್ನ ವಿಷಯವಾಗಿ ರಾಮನು ಮಾಡುತ್ತಿರುವ ಮೂರನೆಯ ಪರೀಕ್ಷೆಯೆಂದು ಮನಸ್ಸಿಗೆ ಮುಂದಟ್ಟಾಗಿ ಇನ್ನು ಈ ಲೋಕದಲ್ಲಿರಬಾರದೆಂದು ಯೋಚಿಸಿ ಒಂದು ಭಯಂಕರವಾದ ಪ್ರಮಾಣವನ್ನು ಮಾಡಿಬಿಟ್ಟಳು

೫೭.　ಸೀತೆಯು ತನ್ನ ತಾಯಿಯಾದ ಭೂದೇವಿಯ ಮುಂದೆ ಕೈಜೋಡಿಸಿ ನಿಂತುಕೊಂಡು ಇಂತು ಕೇಳಿಕೊಂಡಳು —ಅಮ್ಮಾ! ತಾಯಿ! ನಾನು ಸತ್ಯವಾಗಿಯೂ, ಕಾಯೇನ-ವಾಚಾ-ಮನಸಾ ರಾಮನ ವಿನಹ ಅನ್ಯನನ್ನು ಅವಸ್ಥಾತ್ರಯದಲ್ಲೂ ಚಿಂತಿಸದೇ ಇರುವುದು ಸತ್ಯವಾಗಿದ್ದರೆ, ನನ್ನ ಸತ್ಯಕ್ಕೆ ಮೆಚ್ಚಿ ನೀನು ದಾರಿಬಿಟ್ಟು ನನ್ನನ್ನು ನಿನ್ನೊಳಕ್ಕೆ ಕರೆದು (ಎಳೆದು) ಕೊಂಡು ಬಿಡು (ನಾನಿನ್ನು ಭೂಲೋಕದಲ್ಲಿರಲಾರೆನಮ್ಮಾ!)

೫೮　ವಾಚಕರೇ! ಆಗ ನಡೆದ ಸಮಾಚಾರವನ್ನು ಶಾಂತಚಿತ್ತದಿಂದ

**ಅವಿಚ್ಛಿನ್ನೇನ ಪತತಾ ಪುಷ್ಪವರ್ಷೇಣ ಪಾರ್ಥಿವ ।**
**ತಸ್ಯಾಂ ಭೂಮಿಪ್ರವಿಷ್ಟಾಯಾಂ ರಾಘವಂ ಕ್ರೋಧಸಂಯುತಂ ॥ ೫೯ ॥**

**ಸಾಂತ್ವಯಾಮಾಸ ವೈ ಬ್ರಹ್ಮಾ ಸರ್ವಲೋಕನಮಸ್ಕೃತಃ ।**
**ರಾಮೋಽಪಿ ಕೃತ್ವಾ ಸೌವರ್ಣೀಂ ಸೀತಾಂ ಪತ್ನೀಂ ಯಶಸ್ವಿನೀಂ ॥ ೬೦ ॥**

**ಈಜೇ ಯಜ್ಞೈರ್ಬಹುವಿಧೈಃ ಸಹ ಭ್ರಾತೃಭಿರಚ್ಯುತಃ ।**
**ನಾಪದ್ಭಯಂ ನ ವಿಧವಾ ನ ಚ ವ್ಯಾಲಕೃತಂ ಭಯಂ ॥ ೬೧ ॥**

ಕೇಳಿ ಸೀತೆಯ ಮುಖದಿಂದ ಈ ಮಾತು ಹೊರಬಿದ್ದೊಡನೆಯೇ ಭೂಮಿಯು ಎರಡು ಪಾಲಾಗಿ ಬಿರಿದುಹೋಯಿತು ಆರೀತಿ ಬಿರಿದು ಬಾಯಿಬಿಟ್ಟ ಈ ಭೂಗರ್ಭ ದಿಂದ ಎಂಟು ಆನೆಗಳಿಂದ ಹೊರಲ್ಪಟ್ಟ ಒಂದು ರತ್ನಸಿಂಹಾಸನವು ಮೇಲಕ್ಕೆದ್ದು ಬಂದಿತು ಆ ಸಿಂಹಾಸನದಲ್ಲಿ ಸ್ವಯಂ ಭೂದೇವಿಯೇ ದಿವ್ಯರೂಪವನ್ನು ಧರಿಸಿ ಕುಳಿತಿದ್ದಳು ಸಿಂಹಾಸನವು ಮೇಲಕ್ಕೆ ಬಂದು ರಾಮ ಸಭೆಯಲ್ಲಿ ನಿಂತೊಡನೆಯೇ ಭೂದೇವಿಯು, ಭೂಜಾತೆಯಾದ ಸೀತಾದೇವಿಯನ್ನು ಎರಡು ಕೈಗಳಿಂದಲೂ ಆಲಂ ಗಿಸಿ ಬರಸೆಳೆದು ಆ ಸಿಂಹಾಸನದ ಮೇಲೆ ಕುಳ್ಳಿರಿಸಿಕೊಂಡೊಡನೆಯೇ, ಆ ಸಿಂಹಾಸ ನವು ಭೂಗರ್ಭದೊಳಕ್ಕೆ ಎಲ್ಲರೂ ನೋಡು ನೋಡುತ್ತಿರುವಂತೆಯೇ, ರೆಪ್ಪೆಮುಚ್ಚಿ ವಷ್ಟರಲ್ಲಿಯೇ ಹೊರಟುಹೋಯಿತು

೫೯ ಆ ಸಮಯದಲ್ಲಿ (ಸೀತಾ ಭೂಪ್ರವೇಶಕಾಲದಲ್ಲ) ದೇವತೆಗಳು ಎಡೆ ಬಿಡದೆ ಹೂಮಳೆಯನ್ನು ಕರೆದರು ಇದನ್ನೆಲ್ಲಾ ರಾಮನು ನೋಡುತ್ತಲೇ ಕುಳಿ ತಿದ್ದನು ತಾಯಿಯೊಡನೆ ಮಗಳೂ ಸೇರಿ ತನಗೆ ಹೇಳದೆ ಕೇಳದೆ ಪಾತಾಳಕ್ಕೆ ಪ್ರವೇಶಮಾಡಿದುದನ್ನು, ಭಗವಾನ್ ಶ್ರೀ ಹರಿಯು (ರಾಮನು) ನೋಡಿ ಪ್ರಳಯ ಕಾಲ ರುದ್ರನಂತೆ ಕ್ರೋಧ ಪರವಶನಾದನು

೬೦. ಕ್ರೋಧೋದ್ದೀಪಿತನಾದ ಪರಮಾತ್ಮನನ್ನು ನೋಡಿ ಸಕಲ ದೇವತೆ ಗಳೂ ಗಡಗಡನೆ ನಡುಗಿಹೋದರು ಆಗ ಬ್ರಹ್ಮನು ಅವರೆಲ್ಲರನ್ನೂ ಸಮಾಧಾನ ಗೊಳಿಸಿ ಶ್ರೀರಾಮಚಂದ್ರ ಭಗವಂತನ ಮುಂದೆ ಬಂದು ನಿಂತು ಭವಿಷ್ಯತ್ಕಾರ್ಯ ಗೌರವವನ್ನು ಆ ಭಗವಂತನಿಗೆ ತಿಳಿಸಿ ಅವನ ಕೋಪವನ್ನಿಳಿಸಿದನು.

೬೧-೬೨ ಬಳಿಕ ರಾಮನು ಏನೂ ತೋರದೆ ಒಂದು ಕ್ಷಣ ಮೌನವಾಗಿದ್ದು ಇನ್ನು ಯಜ್ಞವು ಕೆಟ್ಟುಹೋದೀತೆಂದು ಚಿಂತಿಸಿ, ಸೀತಾದೇವಿಯ ಆಕೃತಿಯಂತೆ

**ನ ಚ ವ್ಯಾಧಿಕೃತಂ ಕಿಂಚಿದ್ರಾಮೇ ರಾಜ್ಯಂ ಪ್ರಶಾಸತಿ ।**
**ಆಜಾನುಬಾಹುರ್ಧರ್ಮಾತ್ಮಾ ಸಿಂಹಸ್ಕಂಧೋ ನರೇಶ್ವರಃ ॥ ೬೨ ॥**

**ಪೃಥ್ವೀಂ ಸಸಾಗರಾಂ ರಾಮೋ ಧರ್ಮೇಣಾನ್ವಶಿಷತ್ಪ್ರಭುಃ ।**
**ದೇವಾಶ್ಚ ಋಷಯಶ್ಚೈವ ಗಂಧರ್ವಾಪ್ಸರಸಾಂ ಗಣಾಃ ॥ ೬೩ ॥**

**ಯಕ್ಷಾಶ್ಚ ಭೂತಾನಿ ತಥಾ ಕಿನ್ನರಾಶ್ಚೈವ ರಾಕ್ಷಸಾಃ ।**
**ಮಾನುಷ್ಯಾಣಾಂ ದರ್ಶನಂ ತೇ ಸೌಮ್ಯಾಃ ಸಂತೋ ಯಯುಯುಸ್ತದಾ ॥**

**ಯದರ್ಥಮೇಷಾ ಚರತಿ ಗಾಥಾ ಲೋಕೇ ಪುರಾತನೀ ।**
**ಆಜಾನುಬಾಹುಃ ಸಿಂಹಾಸ್ಯಃ ಕಂಬುಗ್ರೀವೋ ಮಹಾಬಲಃ ॥ ೬೫ ॥**

ಒಂದು ಚಿನ್ನದ ಪ್ರತಿಮೆಯನ್ನು ಮಾಡಿಸಿ ಅದರಲ್ಲಿ ಪ್ರಾಣಪ್ರತಿಷ್ಠೆಮಾಡಿ, ಆ ಸುವರ್ಣ ಸೀತಾ ಸಹಾಯದಿಂದ ಭ್ರಾತೃಗಳೊಡನೆ ಕೂಡಿ ಆ ಅಶ್ವಮೇಧಯಾಗ ವನ್ನೂ, ಇನ್ನೂ ಅನೇಕ ಕ್ರತುಗಳನ್ನೂ ಮಾಡಿದನು ಆ ರಾಮನು ರಾಜ್ಯವಾಳುತ್ತ ಲಿದ್ದಾಗ ಜನರಿಗೆ ಕಷ್ಟವೆಂದರೇನೆಂಬುದೇ ತಿಳಿದಿರಲಿಲ್ಲ ರಾಮರಾಜ್ಯದಲ್ಲಿ ವಿಧವೆ ಯರೇ ಇರಲಿಲ್ಲ ಹಾವುಗಳ ಭಯವೂ ಆ ರಾಜ್ಯದಲ್ಲಿರಲಿಲ್ಲ ಆ ರಾಜ್ಯದಲ್ಲಿ ರೋಗಾದ್ಯುಪದ್ರವಗಳ ಸೊಲ್ಲೇ ಇರಲಿಲ್ಲ ಆಜಾನುಬಾಹುವೂ, ಧರ್ಮಾತ್ಮನೂ, ಸಿಂಹಸ್ಕಂಧನೂ ಆದ ಶ್ರೀರಾಮನು ರಾಜ್ಯಪರಿಪಾಲನೆಮಾಡುತ್ತಿದ್ದ ಸಮಯದಲ್ಲಿ ಜಗತ್ತೆಲ್ಲವೂ ಸುಖಸಮೃದ್ಧಿಯಿಂದ ಕೂಡಿತ್ತು

೬೩ ಚತುಸ್ಸಮುದ್ರ ಪರಿವೃತವಾದ ಭೂಮಿಯನ್ನು ರಾಮನು ಧರ್ಮ ದಿಂದ ಪರಿಪಾಲನೆಮಾಡುತ್ತಿದ್ದನು

೬೪ ರಾಮನು ರಾಜ್ಯಪರಿಪಾಲನೆ ಮಾಡುತ್ತಲಿದ್ದ ಸಮಯದಲ್ಲಿ ಈ ಭೂಲೋಕಕ್ಕೆ ದೇವರ್ಷಿಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ, ಯಕ್ಷರೂ, ಭೂತರೂ, ಕಿನ್ನರರೂ, ರಾಕ್ಷಸರೂ ಸಹ ಪದೇ ಪದೇ ಬಂದು ರಾಮನನ್ನೂ, ಆ ರಾಮರಾಜ್ಯದಲ್ಲಿದ್ದ ಧರ್ಮಾತ್ಮರಾದ ಮನುಷ್ಯರನ್ನೂ ನೋಡಿ ನೋಡಿ ಸಂತೋಷ ಪಟ್ಟುಕೊಂಡು ಹೋಗುತ್ತಿದ್ದರು

೬೫-೬೮ ಆ ರಾಮಾಯಣ (ಪುರಾಣ) ಕಾಲದಲ್ಲಿ ರಾಮರಾಜ್ಯದ ವರ್ಣನೆ ಯನ್ನು ಅನೇಕ ಕವಿಗಳು ನಾನಾವಿಧವಾಗಿ ಮಾಡಿ ಅನೇಕರು ಗ್ರಂಥಗಳನ್ನು ಬರೆ

**ಸರ್ವಭೂತಶರಣ್ಯಶ್ಚ ವಿಷ್ಣುರ್ಮಾನುಷ್ಯತಾಂ ಗತಃ ।**
**ಸತ್ಯವಾನನೃಶಂಸಶ್ಚ ಜಾತೋ ಭಕ್ತಜನಪ್ರಿಯಃ ॥ ೬೬ ॥**

**ಧೃತಿಯುಕ್ತೋ ದಯಾಶೀಲೋ ಧರ್ಮಯುಕ್ತೋ ಜಿತೇಂದ್ರಿಯಃ ।**
**ಮಿತವಾಗಪಿ ಕಾರ್ಯೇಷು ವಕ್ತಾ ವಾಚಸ್ಪತೇಃ ಸಮಃ ॥ ೬೭ ॥**

**ವೀರ್ಯವಾನ್ನ ಚ ವೀರ್ಯೇಣ ಮಹತಾ ತೇನ ವಿಸ್ಮಿತಃ ।**
**ತೇಜಸಾ ಭಾಸ್ಕರಸಮಃ ಕ್ಷಮಯಾ ಪೃಥಿವೀಸಮಃ ॥ ೬೮ ॥**

**ಮಹೇಶ್ವರಸಮಃ ಕ್ರೋಧೇ ನೀತಾವುಶನಸಾ ಸಮಃ ।**
**ಏವಂ ಸರ್ವೇಷು ಭೂತೇಷು ಗುಣೈರ್ದಾಶರಥಿರ್ಬಭೌ ॥ ೬೯ ॥**

**ವರ್ಣಾನಾಮಾಶ್ರಮಾಣಾಂ ಚ ನ ಸಾಂಕರ್ಯಂ ನೃಪೋತ್ತಮೋ ।**
**ಧರ್ಮಿಷ್ಠಾಶ್ಚ ಜನಾಃ ಸರ್ವೇ ರಾಮೋ ರಾಜ್ಯಂ ಪ್ರಶಾಸತಿ ॥ ೭೦ ॥**

ದಿರುವರು ಅದರಲ್ಲಿದ್ದ ಕೆಲವು ವಿಷಯ (ಗಾದೆ-ಗಾಥಾ) ಗಳನ್ನು ಇಲ್ಲಿ ವಿವರಿಸುತ್ತೇವೆ

ವಿಷ್ಣುವು ರಾಮಾವತಾರಮಾಡಿದ್ದಾಗ ಆ ಮಹಾತ್ಮನು ಸಿಂಹ (ಸುಂದರ) ಮುಖನಾಗಿಯೂ ಆಜಾನುಬಾಹುವಾಗಿಯೂ, ಶಂಖದಂತೆ ಇರುವ ಕತ್ತುಳ್ಳವನಾಗಿಯೂ, ಮಹಾಬಲಶಾಲಿಯಾಗಿಯೂ, ಸಕಲ ಭೂತಶರಣ್ಯನಾಗಿಯೂ, ವೀರ್ಯವಂತನಾಗಿಯೂ, ತನ್ನ ವೀರ್ಯದಿಂದ ಸಕಲ ಲೋಕಗಳನ್ನೂ ನಡುಗಿಸುವವನಾಗಿಯೂ, ಸತ್ಯಭಾಷಿಯಾಗಿಯೂ, ಬಹು ಕರುಣಾಶಾಲಿಯಾಗಿಯೂ ಭಕ್ತಜನಪ್ರಿಯನಾಗಿಯೂ, ಧೈರ್ಯಶಾಲಿಯಾಗಿಯೂ, ದಯಾಶಾಲಿಯಾಗಿಯೂ, ಜಿತೇಂದ್ರಿಯನಾಗಿಯೂ, ಧರ್ಮಾತ್ಮನಾಗಿಯೂ. ಮಿತಭಾಷಿಯಾಗಿಯೂ, ಬೃಹಸ್ಪತಿಯಂತ ವಾಗ್ಮಿಯಾಗಿಯೂ, ಸೂರ್ಯನಂತೆ ತೇಜಸ್ವಿಯಾಗಿಯೂ, ಭೂಮಿಯಂತ ಕ್ಷಮಾಸಂಪನ್ನನಾಗಿಯೂ, ಮಹೇಶ್ವರನಂತಹ ಕೋಪಶಾಲಿಯಾಗಿಯೂ, ಶುಕ್ರನಂತೆ ನೀತಿಬೋಧಕನಾಗಿಯೂ, ಸಕಲ ಭೂತಗಳಲ್ಲೂ ಸಮವರ್ತಿಯಾಗಿಯೂ, ಸಕಲ ಸದ್ಗುಣಭರಿತನಾಗಿಯೂ ಇದ್ದನು

೭೦ ರಾಮನು ರಾಜ್ಯವಾಳುತ್ತಲಿದ್ದಾಗ ವರ್ಣಸಾಂಕರ್ಯದ ಮಾತೇ ಇರಲಿಲ್ಲ ಸಕಲರೂ ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನು ಸ್ವಲ್ಪವೂ ಮೀರದೆ ಸತ್ಯಸಂಧರಾಗಿಯೇ ಇದ್ದರು

**ನಿರ್ದಸ್ಯುರಭವಲ್ಲೋಕೋ ನಾನರ್ಥಃ ಕಿಂಚಿದಸ್ಪೃಶತ್ ।**
**ನಾಕಾಲವರ್ಷೀ ಪರ್ಜನ್ಯಃ ಸರ್ವಸಸ್ಯಧರಾ ಧರಾ ।**
**ಜನಾನುರಾಗಶ್ಚ ಮಹಾನ್ರಾಮಸ್ಯ ವಿದಿತಾತ್ಮನಃ　　　　॥ ೭೦ ॥**

**ನ ತೇ ಕ್ಷಮಂ ತೇನ ನರೇಂದ್ರಚಂದ್ರ**
**ವೈರಂ ಮಹಾತ್ಮಾ ಸ ತು ಲೋಕಪೂಜ್ಯಃ ।**
**ತಸ್ಯಾಸ್ತ್ರವೇಗಸ್ಯ ರಣೇ ಚ ವೇಗಂ**
**ಸೋಢುಂ ನ ಶಕ್ತಾಸ್ತ್ರಿದಶಾಃ ಸಶಕ್ರಾಃ　　　　॥ ೭೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನವಾಕ್ಯೇ**
**ಭೂಲೋಕವಿಜಯಂ ನಾಮೈಕ**
**ವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.**

---

೭೦ ಆಗ ಕಳ್ಳರ ಕಾಟವಿರಲಿಲ್ಲ ಯಾವ ಅನರ್ಥವೂ ಆಗ ಸಂಭವಿಸುತ್ತಿರಲಿಲ್ಲ ಕಾಲಕಾಲಕ್ಕೆ ಸರಿಯಾಗಿ ಮಳೆ ಬೀಳುತ್ತಿತ್ತು ಭೂಮಿಯು ಸಕಲ ಸಸ್ಯ ಸಮೃದ್ಧಿಯಾಗಿ ಪಚ್ಚೆ ಪೈರುಗಳಿಂದ ಕೂಡಿ ನೋಡುವುದಕ್ಕೆ ಬಹು ಸಂತೋಷವಾಗುತ್ತಿತ್ತು ಸರ್ವಜ್ಞನಾದ ಆ ಶ್ರೀರಾಮಮೂರ್ತಿಯು ಜನಾನುರಾಗಕ್ಕೆ ಪಾತ್ರನಾಗಿ, ಇನ್ನು ಬೇರೆ ಇಂತಹ ಧೊರೆಯೇ ಇಲ್ಲವೆಂದು ಹೇಳಿಸಿಕೊಂಡಿದ್ದನು

೭೨ ಎಲೈ ಶೈಲೂಷರಾಜನೇ! ಕೇಳು ಆ ರಾಮನಂತೆ ಯಾರಿಗೂ ಶಾಂತಚಿತ್ತವಿರಲಾರದು ನೀನು ಅವನನ್ನು ಸರಿಹೋಲಲಾರೆ ರಾಮನು (ಭರತನು) ಲೋಕಪೂಜ್ಯನಾದ ದೇವದೇವೋತ್ತಮನು. ಅವನ ಸಂಗಡ ನೀನು ದ್ವೇಷವನ್ನು ಖಂಡಿತವಾಗಿ ಮಾಡಬೇಡ. ಆ ಮಹಾನುಭಾವನು ರಣರಂಗದಲ್ಲಿ ನಿಂತುಕೊಂಡರೆ ಅವನ ಅಸ್ತ್ರವೇಗವನ್ನು ತಡೆಯಲು ಇಂದ್ರ, ಚಂದ್ರ, ದೇವೇಂದ್ರರಿಗಾಗಲೀ ಇನ್ನಾವ ಪರಾಕ್ರಮಿಯಿಂದಲಾಗಲೀ ದೇವತೆಗಳಿಂದಲಾಗಲೀ ಸಾಧ್ಯವೇ ಇಲ್ಲ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ರಾವಣನ ದಿಗ್ವಿಜಯ ರಾಮರಾಜ್ಯವರ್ಣನೆ
ಎಂಬ ಹೆಸರಿನ ಇನ್ನೂರಿಪ್ಪತ್ತೊಂದನೆಯ ಅಧ್ಯಾಯವು
ಮುಗಿದುದು

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ದ್ವಾವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ॥

॥ ಶೈಲೂಷ ಉವಾಚ ॥

ವಹ್ನಿಪ್ರವಿಷ್ಟಾಂ ಸಂಪ್ರೇಕ್ಷ್ಯ ತದಾ ವೇದವತೀಂ ದ್ವಿಜ ।
ಕಿಂ ಚಕಾರ ಮಹಾತೇಜಾ ದಶಗ್ರೀವಃ ಪ್ರತಾಪವಾನ್ ॥ ೧ ॥

॥ ನಾರಾಯಣ ಉವಾಚ ॥

ಜಗಾಮ ಸ ತದಾ ಲಂಕಾಂ ಪೂಜ್ಯಮಾನೋ ನಿಶಾಚರೈಃ ।
ತತ್ರಸ್ಥಂ ಪ್ರೇರಯಾಮಾಸ ದೂತಂ ಧನಪತಿಃ ಸ್ವಯಂ ॥ ೨ ॥

---

### ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯವು.

೧ ಶೈಲೂಷನು ನಾರಾಯಣನರನ್ನು ಕುರಿತು ಪುನಃ ಕೇಳುತ್ತಾನೆ — ವೇದವತಿಯು ಬೆಂಕಿಯಲ್ಲಿ ಬಿದ್ದ ಪ್ರಸಕ್ತಿಯಿಂದ ರಾವಣನ ಚರಿತ್ರೆ—ರಾಮಾಯಣದ ಕಥೆಗಳನ್ನೆಲ್ಲಾ ಹೇಳಿದಿರಿ ವೇದವತಿಯು ರಾವಣನಿಗೆ ಹೆದರಿ ಅಗ್ನಿಪ್ರವೇಶಮಾಡಿದ ಬಳಿಕ, ಆ ಪ್ರತಾಪಶಾಲಿಯಾದ ರಾವಣನು ಮುಂದೇನು ಮಾಡಿದನೆಂಬ ಸಂಗತಿಯನ್ನು ದಯಮಾಡಿ ತಿಳಿಸಿರಿ

೨ ಅದಕ್ಕೆ ನಾರಾಯನನು ಹೇಳುತ್ತಾನೆ —ವೇದವತಿಯ ಶಾಪವನ್ನು ಕೇಳಿ ರಾವಣನು ಕದ್ದ ಕಳ್ಳನಂತೆ ಯಾವ ಮಾತೂ ಆಡದೆ ನಾಚಿಕೆಪಟ್ಟು, ರಾಕ್ಷಸರಿಂದ ಹೊಗಳಿಸಿಕೊಳ್ಳುತ್ತಾ ಲಂಕಾಪಟ್ಟಣಕ್ಕೆ ಸೇರಿಕೊಂಡನು ರಾವಣನು ಮಾಡಿದ ಈ ಚೇಷ್ಟೆಯು ಅಲಕಾಪಟ್ಟಣದಲ್ಲಿದ್ದ ರಾವಣನ ಅಣ್ಣ ಕುಬೇರನಿಗೆ ತಿಳಿಯಿತು. ಆಗ ಅವನು ತನ್ನ ದೂತನೊಬ್ಬನ ಮೂಲಕ ರಾವಣನಿಗೆ ಹೇಳಿಕಳುಹಿಸಿದುದೇನೆಂದರೆ .—

ಅಕಾರ್ಯಾದ್ವಿನಿವರ್ತಸ್ವ ಸುರೈಸ್ತೇ ಚಿಂತ್ಯತೇ ವಧಃ ।
ದೂತಸ್ಯ ವಚನಂ ಶ್ರುತ್ವಾ ದೂತಂ ಹತ್ವಾ ನಿಶಾಚರಃ ॥ ೩ ॥

ಗತ್ವಾ ವಿಜಿಗ್ಯೇ ಧನದಂ ವಿಜಹಾರಾಸ್ಯ ಪುಷ್ಪಕಂ ।
ಪುಷ್ಪಕೇಣ ವಿಮಾನೇನ ಕೈಲಾಸಂ ಸ ತದಾ ಯಯೌ ॥ ೪ ॥

ಪುಷ್ಪಕಸ್ಯ ಗತಿಂ ರುದ್ಧಾಂ ತತ್ರ ವೀಕ್ಷ್ಯ ನಿಶಾಚರಃ ।
ದದರ್ಶ ಶೈಲಶೃಂಗಸ್ಥಂ ನಂದಿನಂ ವಾನರಾಕೃತಿಂ ॥ ೫ ॥

ತಂ ದೃಷ್ಟ್ವಾ ಮುಮುಚೇ ಹಾಸಂ ನಂದೀ ತಂ ಶಪ್ತವಾಂಸ್ತತಃ ।
ಗಿರಾವಸ್ಮಿನ್ ದಶಗ್ರೀವ ಸ್ವಯಂ ಕ್ರೀಡತಿ ಶಂಕರಃ ॥ ೬ ॥

---

೩ ನೀನು ಇಂತಹ ಅಕಾರ್ಯಗಳನ್ನು ಮುಂದ ಮಾಡಬೇಡ ನೀನು ಮಾಡುತ್ತಿರುವ ಈ ಹೀನಕಾರ್ಯಗಳಿಗಾಗಿ ದೇವತೆಗಳೆಲ್ಲರೂ ಸಭೆಮಾಡಿ ನಿನ್ನ ವಧೆಗೆ ಉಪಾಯವನ್ನಾಲೋಚಿಸುತ್ತಲಿದ್ದಾರೆ ಇದ್ದ ಸಂಗತಿಯನ್ನು ತಿಳಿಸಿದೇನೆ ಯೆಂದು ತಮ್ಮನ ಮೇಲಿನ ನಿಜವಾದ ಪ್ರೇಮದಿಂದ ಹೇಳಿ ಕಳುಹಿಸಿದ ಕುಬೇರನ ಮಾತನ್ನು ತಿರಸ್ಕರಿಸಿದನಲ್ಲದೆ, ರಾವಣನು ಆರೀತಿ ಕುಬೇರನಿಂದ ಸಂದೇಶವನ್ನು ತಂದಿದ್ದ ದೂತನನ್ನು ವಧೆಮಾಡಿಬಿಟ್ಟನು

೪. ರಾಜಧರ್ಮವನ್ನು ಮೀರಿ ದೂತವಧೆಮಾಡಿದ ರಾವಣನು ಅಷ್ಟಕ್ಕೇ ಸುಮ್ಮನಾಗದೆ, ಆ ಕೂಡಲೇ ಅಲಕಾಪಟ್ಟಣಕ್ಕೆ ಹೊರಟು ಆರೀತಿ ಹೇಳಿ ಕಳುಹಿಸಿದ್ದ ಆ ಕುಬೇರನ ಮೇಲೆ ಬಿದ್ದು ಅವನನ್ನು ಗೆದ್ದು ಅವನ ಹತ್ತಿರದಲ್ಲಿದ್ದ ಪುಷ್ಪಕ ವಿಮಾನವನ್ನು ಕಿತ್ತುಕೊಂಡು ಲಂಕೆಗೆ ಹೊರಟು ಹೋದನು ಲಂಕೆಗೆ ತಲಪಿದ ಕೂಡಲೆ ಕೈಲಾಸದಲ್ಲಿರುವ ಶಿವನ ಮೇಲೆ ಒಂದು ಕೈಮಾಡಿ ನೋಡೋಣವೆಂದು ಕೆಟ್ಟ ಯೋಚನೆಯನ್ನುಮಾಡಿ ಬಿಟ್ಟೆಯಾಗಿ ಸಿಕ್ಕಿದ ಆಪುಷ್ಪಕವಿಮಾನದ ಮೇಲೆಹತ್ತಿ ಕೊಂಡು ಕಣ್ಣುರೆಪ್ಪೆ ಹೊಯ್ಯುವುದರೊಳಗಾಗಿ ಕೈಲಾಸದ ಬಾಗಿಲಿಗೆ ಬಂದುಬಿಟ್ಟನು

೫ ಕೈಲಾಸದ ಬಾಗಿಲಿಗೆ ಬಂದಾಗ ಆ ವಿಮಾನವು ಇದ್ದಕ್ಕಿದ್ದ ಹಾಗೆ ಧಟ್ಟನೆ ನಿಂತುಹೋಯಿತು ಇದೇಕೆ ಹೀಗಾಯಿತೆಂದು ರಾವಣನು ಕಣ್ಣು ಬಿಟ್ಟು ನೋಡಿದಾಗ ದೊಡ್ಡಬೆಟ್ಟದ ಶಿಖರದಂತೆ ಅಲ್ಲಿ ಕುಳಿತಿದ್ದ ವಾನರಾಕೃತಿಯುಳ್ಳ ಪರಮ ಶಿವಭಕ್ತ (ಕೈಲಾಸ ದ್ವಾರಪಾಲಕ) ನಂದೀಶ್ವರನನ್ನು ಕಂಡನು

೬. ನಂದೀಶ್ವರನನ್ನು ನೋಡಿ, ಅವನ ವಾನರಾಕೃತಿಯನ್ನು ಕಂಡು

ವಿಮಾನೇನ ಯದಾ ತಸ್ಯ ಸಮೀಪಮುಪಯಾಸ್ಯಸಿ ।
ಕರೋಷಿ ಚಾವಹಾಸ್ಯಂ ಮಾಂ ತಸ್ಮಾಚ್ಛಪ್ಸ್ಯಾಮ್ಯಹಂ ತವ ॥ ೭ ॥

ಮದ್ವಕ್ತ್ರಸದೃಶಾ ಘೋರಾಃ ಪುಲಹಸ್ಯ ಪ್ರಜಾಪತೇಃ ।
ಉತ್ಪತ್ಸ್ಯಂತಿ ಕುಲೇ ಭೀಮಾಃ ಕ್ಷಯಾರ್ಥಂ ವಾನರಾಸ್ತವ ॥ ೮ ॥

ಶ್ರುತ್ವೈನಂ ನಂದಿನೋ ವಾಕ್ಯಂ ಸಕೈಲಾಸಂ ತ್ರಿಲೋಚನಂ ।
ನೇತುಕಾಮಸ್ತದಾ ಲಂಕಾಂ ಭುಜಾಂಶ್ಚಿಕ್ಷೇಪ ಪರ್ವತೇ ॥ ೯ ॥

ಪೌಲಸ್ತ್ಯಭುಜಸಂಕ್ಷುಬ್ಧಕೈಲಾಸಚಲಿತಾಸನಾ ।
ಜಗ್ರಾಹ ನಿರ್ಭರಂ ಕಂಠೇ ತದೋಮಾತ್ರಿಪುರಾಂತಕಂ ॥ ೧೦ ॥

---

ರಾವಣನು ಹಲ್ಲುಕಿರಿದು ನಂದಿಯನ್ನು ಅಣಗಿಸಿಬಿಟ್ಟನು ಆ ಪರಮೇಶ್ವರನಾದ ನಂದಿಯು ಇವನ ಕಪಿಚೇಷ್ಟೆಯನ್ನು ನೋಡಿ ಕೂಡಲೆ ಶಾಪಕೊಟ್ಟನು ಮತ್ತು ಅವನನ್ನು ಕುರಿತಿಂತೆಂದನು —ಎಲೋ ರಾವಣ ! ಈ ಕೈಲಾಸಪರ್ವತದಲ್ಲಿ ಸಾಕ್ಷಾನ್ಮಹೇಶ್ವರನು ವಿಹಾರಮಾಡುತ್ತಲಿದ್ದಾನೆ

೭ ನೀನೇನಾದರೂ ವಿಮಾನಾರೂಢನಾಗಿ ಅವನ ಬಳಿಗೆ ಹೋಗುವುದಾದರೆ ಅಪಹಾಸ್ಯಕ್ಕೆ ಗುರಿಯಾಗುತ್ತೀಯೆ ! ಈ ರೀತಿ ಇರುವಲ್ಲಿ ನನ್ನನ್ನೇ ನೀನು ಅಣಕಿಸುತ್ತೀಯಾ ? ತೆಗೆದುಕೋ ! ಈ ಶಾಪವನ್ನು , ಹೀಗೆಂದು ಹೇಳಿ ನಂದಿಯು ರಾವಣನನ್ನು ಶಪಿಸಿದನೆಂತೆಂದರೆ —

೮. ಎಲೋ ದುರುಳ ರಾವಣ ! ಪುಲಹಬ್ರಹ್ಮನ ವಂಶದಲ್ಲಿ ನನ್ನ ಮುಖವುಳ್ಳ ಮಹಾ ಭಯಂಕರಪರಾಕ್ರಮಶಾಲಿಗಳಾದ ಬಹುಮಂದಿ ವಾನರರು ನಿನ್ನ ವಿನಾಶಕ್ಕಾಗಿ ಹುಟ್ಟುತ್ತಾರೆ

೯ ಈ ರೀತಿಯಾಗಿ ಹೇಳಿದ ನಂದಿಕೇಶ್ವರನ ಮಾತನ್ನು ಕೇಳಿ ಬಲದಿಂದ ಕೊಬ್ಬಿದ ಆ ರಾವಣನು, ಈ ಈಶ್ವರನನ್ನು ಕೈಲಾಸಪರ್ವತದಲ್ಲಿದ್ದಾಗಲೇ ಅವನ ಸಹಿತ ಬೆಟ್ಟವನ್ನೇ ಕಿತ್ತು ಲಂಕಾಪಟ್ಟಣಕ್ಕೆ ತೆಗೆದುಕೊಂಡು ಹೋಗುವುದೇ ಸರಿಯೆಂದು ನಿಶ್ಚಯಿಸಿ, ಆ ಬೆಟ್ಟವನ್ನು ಕೀಳುವುದಕ್ಕಾಗಿ ತನ್ನಿಪ್ಪತ್ತು ತೋಳಗಳನೂ ಬಟ್ಟದ ಬುಡದಲ್ಲಿ ಚಾಚಿ ಅಳ್ಳಾಡಿಸಿದನು

೧೦. ಆ ರಾವಣನ ತೋಳುಗಳಿಂದ ಅಳ್ಳಾಡಿಸಲ್ಪಟ್ಟ ಆ ಕೈಲಾಸಪರ್ವತ್ನದ

ತತೋ ಗರ್ಜನ್ಮಹಾದೇವೋ ದೇವಾನಾಂ ಪ್ರವರೋ ಹರಃ ।
ಪಾದಾಂಗುಷ್ಠೇನ ತಂ ಶೈಲಂ ಪೀಡಯಾಮಾಸ ಲೀಲಯಾ ॥ ೧೧ ॥

ರಕ್ಷಸಾ ತೇನ ರೋಷಾಚ್ಚ ಭುಜಾನಾಂ ರುಜಯಾ ತಥಾ ।
ಮುಕ್ತೋ ವಿರಾವಃ ಸುಮಹಾಂಸ್ತ್ರೈಲೋಕ್ಯಂ ಯೇನ ರಾವಿತಂ ॥ ೧೨ ॥

ಮೇನಿರೇ ವಕ್ತ್ರನಿಷ್ಪೇಷಂ ತಸ್ಯಾಮಾತ್ಯಾ ಯುಗಕ್ಷಯಂ ।
ಆಸನೇಭ್ಯಃ ಪ್ರಚಲಿತಾ ದೇವಾಃ ಶಕ್ರಪುರೋಗಮಾಃ ॥ ೧೩ ॥

ತೇನ ಶಬ್ದೇನ ವಿತ್ರಸ್ತಾ ಸುತರಾಂ ಪರ್ವತಾತ್ಮಜಾ ।
ಹರಸ್ಯಾಲಿಂಗನಂ ಚಕ್ರೇ ಭಯಲೋಲೇಕ್ಷಣಾ ಭೃಶಂ ॥ ೧೪ ॥

---

ಮೇಲುಗಡೆ ಕುಳಿತಿದ್ದ ಪರಮೇಶ್ವರನು ತನ್ನ ಆಸನದ ಮೇಲೆ ಕುಳಿತಿದ್ದಂತೆಯೇ ಸ್ವಲ್ಪ ಅಲ್ಲಾಡಿದುದನ್ನು ನೋಡಿ, ಪಾರ್ವತಿಯು ಬೇಗ ಓಡಿ ಬಂದು ಆ ಕಾಲಕಂಠನ ಕತ್ತನ್ನು ಬಿಗಿಯಾಗಿ ಅಪ್ಪಿಕೊಂಡಳು

೧೧ ಈ ಕಂಪನದ ಕಾರಣವನ್ನು ತಿಳಿದ ಕ್ರತುಭುಜರೊಡೆಯನಾದ ಕಾಲ ಕಾಲನು, ಒಂದಾವರ್ತಿ ಕುಲಾಚಲಗಳು ಕಂಪಿಸುವಂತೆ ಕೂಗಿ ಕಾಲಿನ ಹೆಬ್ಬೆಟ್ಟಿನ ಕೊನೆಯಿಂದ ಆ ಬೆಟ್ಟವನ್ನು ಆಟಾಟವಾಗಿಯೇ ಮೆಟ್ಟಿದನು

೧೨ ಈರೀತಿ ಬೆಟ್ಟವನ್ನು ಮೆಟ್ಟಿದಾಗ ಬೆಟ್ಟದ ಬುಡಕ್ಕೆ ಕೊಟ್ಟಿದ್ದ ಇಪ್ಪತ್ತು ಕೈಗಳೂ ಬುಡದಲ್ಲಿ ಸಿಕ್ಕಿಕೊಂಡು ಆ ರಾವಣನಿಗೆ ಬಲು ನೋವಾಯಿತು. ಕೋಪ ದಿಂದಲೂ ನೋವಿನಿಂದಲೂ ಕೂಡಿ ದಶಕಂಠನು ಗಟ್ಟಿಯಾಗಿ ಕಿರಿಚಿಕೊಂಡುಬಿಟ್ಟನು ಆ ಕೂಗಿನ ಸದ್ದು ಮೂರು ಲೋಕದಲ್ಲೂ ಪ್ರತಿಧ್ವನಿಕೊಟ್ಟಿತು

೧೩ ಈ ಮೇರೆ ತೋಳುಗಳನ್ನು ಬೆಟ್ಟಕ್ಕೆ ಸಿಕ್ಕಿಸಿ ಜಜ್ಜಿಸಿಕೊಂಡು ಪೆಚ್ಚು ಮುಖವನ್ನು ಹಾಕಿಕೊಂಡು ಲಂಕೆಗೆ ಬಂದ ರಾವಣನನ್ನು ನೋಡಿ ಅವನ ಅಮಾತ್ಯರು, ಅವನ ಮುಖದಿಂದಲೇ, ಈಗೇನೋ ಪ್ರಳಯಕಾಲವುಂಟಾಗಿರಬೇಕೆಂದೂಹಿಸಿದರು. ಇಂದ್ರನೇ ಮೊದಲಾದ ದೇವತೆಗಳು ತಾವು ಕೂತಿದ್ದ ಆಸನಗಳಲ್ಲಿಯೇ ಉರುಳಿಕೊಂಡರು.

೧೪ ಬೆಟ್ಟಕ್ಕೆ ಕೈಸಿಕ್ಕಿಸಿಕೊಂಡು ಕಿರಿಚಿಕೊಂಡ ರಾವಣನ ಕೂಗಿನ ಸದ್ದನ್ನು

ಅಕೃತ್ರಿಮಾಲಿಂಗನಜಾಂ ಪ್ರೀತಿಂ ಪ್ರಾಪ್ಯ ತದಾ ಹರಃ ।
ಮುಕ್ತ್ವಾ ಚಾಸ್ಯ ಭುಜಾನ್ರಾಜನ್ಪ್ರಾಹ ವಾಕ್ಯಂ ದಶಾನನಂ ॥ ೧೫ ॥

ಪ್ರೀತೋಽಸ್ಮಿ ತವ ವೀರ್ಯೈಶ್ಚ ಶೌಂಡಿರ್ಯೈಶ್ಚ ದಶಾನನ ।
ಯಸ್ಮಾದರಾಕ್ಷಸೋ ರಾವಸ್ತ್ವಯಾ ಮುಕ್ತೋ ಭಯಂಕರಃ ॥ ೧೬ ॥

ತಸ್ಮಾತ್ತ್ವಂ ರಾವಣೋ ನಾಮ ಭವಿಷ್ಯಸಿ ಜಗತ್ತ್ರಯೇ ।
ತತಃ ಪ್ರಭೃತಿ ರಾಜೇಂದ್ರ ರಾವಣೋ ಲೋಕರಾವಣಃ ॥ ೧೭ ॥

ಶಾತಕುಂಭಮಯಂ ಲಿಂಗಂ ದೇವದೇವಸ್ಯ ಶೂಲಿನಃ ।
ಸಂಪೂಜಯತಿ ರಾಜೇಂದ್ರ ನಿತ್ಯಂ ಶ್ರದ್ಧಾಸಮನ್ವಿತಃ ॥ ೧೮ ॥

---

ಕೇಳಿ ಪಾರ್ವತಿಯು ತುಂಬಾ ಹೆದರಿಕೊಂಡು ಈಶ್ವರನ ಕತ್ತನ್ನು ಬಲವಾಗಿ ಆಲಂಗಿಸಿ (ತಬ್ಬಿ) ಕೊಂಡು ಬಿಟ್ಟಳು

೧೫. ಪಾರ್ವತಿಯು ನಿಷ್ಕಪಟವಾದ ಆಲಿಂಗನದಿಂದ ಈಶ್ವರನು ಬಹಳ ಪ್ರೀತಿಯನ್ನು ಹೊಂದಿದವನಾಗಿ, ಅವಳ ಕೈಗಳನ್ನು ತನ್ನ ಕಂಠದಿಂದ ಬಿಡಿಸಿಕೊಂಡು, ಅವಳ ಭಯಕ್ಕೆ ಕಾರಣಭೂತನಾದ ದಶಾನನನನ್ನು ಕುರಿತಿಂತೆಂದನು.

೧೬-೧೭ ಎಲೋ ! ದಶಾನನ ! ನಿನ್ನ ಬಲವೀರ್ಯಗಳಿಗೆ ಸಂತುಷ್ಟನಾಗಿರುವೆನು ರಾಕ್ಷಸರಿಂದ ಕೂಗಲು ಅಸಾಧ್ಯವಾದ ಕೂಗನ್ನು ನೀನು ಲೋಕವೇ ಭಯಪಟ್ಟು ನಡುಗುವ ರೀತಿಯಲ್ಲಿ ಕೂಗಿಕೊಂಡುದರಿಂದ, ಇಂತಹ ರಾವ (ಧ್ವನಿ) ವುಳ್ಳ ನಿನ್ನನ್ನು ಇನ್ನು ಮುಂದೆ, ರಾವಣನೆಂದು ಮೂರು ಲೋಕದಲ್ಲಿಯೂ ಕರೆಯುತ್ತ ಒರಲಿ ಎಲೈ ಶೈಲೂಷನೇ ! ಕೇಳು ಆ ದಶಗ್ರೀವನಿಗೆ ಅಲ್ಲಿಂದಾಚೆಗೆ ರಾವಣನೆಂಬ ಹೆಸರು ಪ್ರಸಿದ್ಧವಾಗಿ ನಿಂತುಕೊಂಡಿತು.

೧೮ ಈ ರಾವಣನ ಹತ್ತಿರದಲ್ಲಿ ಒಂದು ಚಿನ್ನದ ಶಿವಲಿಂಗವಿತ್ತು ಆ ಲಿಂಗವನ್ನು ಈ ರಾವಣನು ಪ್ರತಿ ದಿವಸವೂ ಬಹಳ ಶ್ರದ್ಧಾಭಕ್ತಿಗಳಿಂದ ಪೂಜಿಸುತ್ತಲಿದ್ದನು

ಯತ್ರಯತ್ರ ಯಥಾ ಯಾತಿ ತತ್ರತಸ್ಯಾಸ್ಯ ಪಾರ್ಥಿವ ।
ಸೌವರ್ಣಂ ತಸ್ಯ ದೇವಸ್ಯ ಲಿಂಗಂ ತದನುನೀಯತೇ　　॥ ೧೯ ॥

ತತಸ್ತು ರಾವಣೋ ರಾಜಾ ಯಯೌ ಸಂಯಮನೀಂ ಪುರೀಂ ।
ಯುಯುಧೇ ಕಾಲಪಾಶೇಭ್ಯೋ ದೂತೈಶ್ಚ ಸಹ ಮೃತ್ಯುನಾ　　॥ ೨೦ ॥

ಜಿತ್ವಾ ಪಿತೃಗಣಾಂಶ್ಚೈವ ಮೋಕ್ಷಯಿತ್ವಾ ಚ ನಾರಕಾ್ ।
ಯಮೇನ ಯುಯುಧೇ ಸಾರ್ಧಂ ಕ್ರೋಧಾದ್ವೈವಸ್ವತಸ್ತತಃ　　॥ ೨೧ ॥

ಹಂತುಮಿಚ್ಛನ್ಮಹೀಪಾಲ ದಂಡಾಸ್ತ್ರೇಣ ನಿಶಾಚರಂ ।
ವಾರಯಾಮಾಸ ತಂ ಬ್ರಹ್ಮಾ ವಾಕ್ಯಂ ಚೇದಮುವಾಚ ಹ　　॥ ೨೨ ॥

---

೧೯　ರಾವಣನು ಎಲ್ಲೆಲ್ಲಿಗೆ ಪ್ರಯಾಣಮಾಡುವನೋ ಅಲ್ಲಿಗೆಲ್ಲಾ ಆ ಚಿನ್ನದ ಲಿಂಗವನ್ನು ಜತೆಯಲ್ಲಿಯೇ ತೆಗೆದುಕೊಂಡು ಹೋಗಿ ತಾನಿದ್ದ ಕಡೆಯಲ್ಲೇ ಆ ಲಿಂಗಕ್ಕೆ ಪೂಜೆಮಾಡುತ್ತಲಿದ್ದನು

೨೦　ಹೀಗೆ ಕೆಲವು ದಿನ ಕಳೆದ ಮೇಲೆ ಈ ರಾವಣನು ಒಂದು ದಿನ ಯಮನಪಟ್ಟಣಕ್ಕೆ ಹೋದನು (ಅಂದರೆ ಸತ್ತನೆಂದು ಅರ್ಥಮಾಡಕೂಡದು ) ನಿಜವಾಗಿ ಯಮರಾಜ್ಯವಾದ ಸಂಯಮಿನೀ ಪುರಕ್ಕೆ ದಂಡೆತ್ತಿಯೇ ಹೊರಟನು ಅಲ್ಲ ಕಾಲಪಾಶವನ್ನು ಹಿಡಿದಿದ್ದ ಯಮನೊಡನೆ ಯುದ್ಧಮಾಡಿ ಅವನನ್ನು ಗೆದ್ದನು

೨೧-೨೨　ಈರೀತಿ ಅವನನ್ನು ಜಯಿಸಿ ಅಲ್ಲಿ ನರಕದಲ್ಲಿ ಬಿದ್ದು ಒದ್ದಾಡುತ್ತಿದ್ದ ಪಿತೃಗಣಗಳನ್ನೆಲ್ಲಾ ಬಿಡಿಸಿಬಿಟ್ಟನು. ಯಮನು ಪುನಃ ಅವನೊಡನೆ ಭಯಂಕರ ಯುದ್ಧಕ್ಕೆ ಆರಂಭಿಸಿ ಅವನನ್ನು ನಿಜವಾಗಿ ಕೊಂದು ತನ್ನ ನಗರಕ್ಕೆ ಸೇರಿಸಿಕೊಳ್ಳಬೇಕೆಂದಾಲೋಚಿಸಿ, ತನ್ನ ಕೈಯಲ್ಲಿದ್ದ ಕಾಲದಂಡವನ್ನು ಅವನ ಮೇಲೆ ಪ್ರಯೋಗಿಸಬೇಕೆಂದು ನಿಶ್ಚಯಿಸಿದನು ಯಮನ ಈ ನಡವಳಿಕೆಯನ್ನು ನೋಡಿ ಬ್ರಹ್ಮನು ಓಡಿಬಂದು ಅವನ ಕೈಯಲ್ಲಿದ್ದ ದಂಡವನ್ನು ಕಿತ್ತುಕೊಂಡು ಯಮನೊಡನೆ ಹೀಗೆ ಹೇಳಿದನು

**ಅಮೋಘಸ್ತವ ದಂಡೋಯಮವಧ್ಯಶ್ಚೈವ ರಾವಣಃ ।**
**ಏಕಸ್ಮಿನ್ನಪಿ ನಿಷ್ಕ್ರಾಂತೇ ಭೂಯಾಮನೃತವಾಗಹಂ ॥ ೨೩ ॥**

**ಪಿತಾಮಹವಚಃ ಶ್ರುತ್ವಾ ದೇವಸ್ಯೋಽಂತರ್ದಧೇ ತತಃ ।**
**ರಾವಣಃ ಸಹ ಸೈನ್ಯೇನ ಯಯೌ ಕೈಲಾಸಪರ್ವತಂ ॥ ೨೪ ॥**

**ಉವಾಸ ಶರ್ವರೀಂ ತತ್ರ ಯೋದ್ಧುಕಾಮೋ ದಿವಾಲಯೈಃ ।**
**ಸ ತು ಚಂದ್ರೋದಯೇ ರಾತ್ರೌ ಭ್ರಾತೃಪುತ್ರಾಭಿಸಾರಿಕಾಂ ॥ ೨೫ ॥**

**ದದರ್ಶ ರಂಭಾಂ ರಾಜಂತೀಂ ಮೇಘಸ್ಯೇವ ಶತಹ್ರದಾಂ ।**
**ಅಕಾಮಾಂ ಕಾಮಸಂತಪ್ತೋ ವಿಧ್ವಂಸ್ಯ ಸುರಯೋಷಿತಂ ॥ ೨೬ ॥**

---

೨೩ ಎಲೈ ಯಮನೇ! ನಿನ್ನ ಕಾಲದಂಡವು ವ್ಯರ್ಥವಾಗಬಾರದು. ನನ್ನ ವರವೂ ಸುಳ್ಳಾಗಬಾರದು ರಾವಣನಿಗೆ ನಾನು ನಿನ್ನಿಂದ ಅವಧ್ಯತ್ವವನ್ನು ಕೊಟ್ಟಿದ್ದೇನಾದ್ದರಿಂದ, ಅವನನ್ನು ನೀನು ಕೊಂದರೆ ನನ್ನ ಗೌರವವೂ ಮಾತೂ ಸಹ ಹಾಳಾಗಿ ಹೋಗುವುದು. ಆಗ ನಾನು ಸುಳ್ಳುಗಾರನೆಂದು ಪ್ರಸಿದ್ಧಿಯುಂಟಾಗಿ ನನ್ನಲ್ಲಿ ಜನರಿಗೆ ನಂಬಿಕೆಯೇ ತಪ್ಪಿಹೋಗುವ ಗತಿಯುಂಟಾಗುವುದು

೨೪ ಬ್ರಹ್ಮನು ಹೇಳಿದ ಈ ಮಾತುಗಳನ್ನು ಕೇಳಿ ಯಮನು ಆ ಕೂಡಲೆ ಯಾರ ಕಣ್ಣಿಗೂ ಕಾಣಿಸಿಕೊಳ್ಳದೆ ಅಂತರ್ಧಾನನಾ (ಮರೆಯಾ) ದನು ಯಮನು ಅದೃಶ್ಯನಾದುದನ್ನು ನೋಡಿ ರಾವಣನೂ ಸಹ ಸೈನ್ಯಸಹಿತನಾಗಿ ಕೈಲಾಸಪರ್ವತಕ್ಕೆ ಪ್ರಯಾಣಮಾಡಿದನು

೨೫ ಕೈಲಾಸಗಿರಿಗೆ ಬರುವ ಹೊತ್ತಿಗೆ ಸಾಯಂಕಾಲದ ಸಮಯ ವಾಗಿದ್ದುದರಿಂದ ಆ ರಾತ್ರಿ ರಾವಣನು ಅಲ್ಲಿಯೇ ಬಿಡಾರಮಾಡಿದನು ಏಕೆಂದರೆ ಬೆಳಗಾದೊಡನೆ ದೇವತೆಗಳ ಮೇಲೆ ಯುದ್ಧಮಾಡಿ ಎಲ್ಲರನ್ನೂ ಗೆಲ್ಲಬೇಕೆಂಬ ಅಭಿಪ್ರಾಯವಿತ್ತು. ಅದಕ್ಕಾಗಿ ಆ ದಿನ ರಾತ್ರಿ ಅಲ್ಲಿ ಬಿಡಾರವನ್ನು ಹೂಡಿದ್ದನು ರಾತ್ರಿ ಚಂದ್ರೋದಯವಾದೊಡನೆಯೇ ಬೆಳದಿಂಗಳಲ್ಲಿ ರಾವಣನು ಈ ಕೈಲಾಸಗಿರಿಯಲ್ಲಿ ವಿನೋದವಾಗಿ ತಿರುಗಾಡಲಾರಂಭಿಸಿದನು

೨೬ ಹೀಗೆ ತಿರುಗಾಡುತ್ತಲಿರುವಲ್ಲಿ ತನ್ನ ಅಣ್ಣ ಕುಬೇರನ ಮನೆಯ ಮುಂದೆ ಮೇಘ ಮಧ್ಯದಲ್ಲಿ ಮಿಂಚುಹೊಳೆದಂತೆ ಒಂದು ಪ್ರಕಾಶವಾದ ರೂಪವು

ಅದ್ಯಪ್ರಭೃತಿ ಮೂರ್ಧಾ ತೇ ಶತಧಾ ತು ಗಮಿಷ್ಯತಿ ।
ಪ್ರಭಾತಸಮಯೇ ಗತ್ವಾ ಸುರಸದ್ಮ ಸ ರಾಕ್ಷಸಃ ॥ ೨೭ ॥

ಮೇಘನಾದೇನ ಸಹಿತಃ ಕುಂಭಕರ್ಣೇನ ರಕ್ಷಸಾ ।
ದೇವಾನಾಂ ಕದನಂ ಚಕ್ರೇ ತಥಾನ್ಯೈ ರಾಕ್ಷಸೋತ್ತಮೈಃ ॥ ೨೮ ॥

---

ಕಣ್ಣಿಗೆ ಕಾಣಿಸಿತು ಅದೇನೆಂದು ರಾವಣನು ನೋಡುತ್ತಾನೆ - ಆ ಪ್ರಕಾಶವು ಒಬ್ಬ ಸುಂದರಳಾದ ಅಪ್ಸರಸ್ತ್ರೀಯೆಂದು ಗೊತ್ತಾಯಿತು ಇನ್ನೂ ಹೆಚ್ಚಾಗಿ ವಿಚಾರಿಸುವಲ್ಲಿ ಆ ಅಪ್ಸರನಾರಿಯು ರಂಭೆಯೆಂದೂ, ಅವಳು ತನ್ನ ಅಣ್ಣನ ಮಗ ಜಯಂತನ ಅಭಿಸಾರಿಕೆ (ಉಪಪತ್ನಿ) ಯೆಂದೂ ಗೊತ್ತಾಯಿತು ಆ ಕೂಡಲೆ ಬಹು ಕಾಮುಕನಾದ ರಾವಣನು ಕಾಮಾತುರತೆಯಿಂದ ಆ ರಂಭೆಯ ಮೇಲೆ ಬಿದ್ದು ಅವಳನ್ನು ಹಿಂಸಮಾಡಿದನು

೨೭ ಆಗ ರಂಭೆಗೆ ಬಹಳ ಕೋಪವುಂಟಾಗಿ ಆ ರಾವಣನನ್ನು ಇಂತು ಶಪಿಸಿದಳು ಎಲೋ ಕಾಮುಕನಾದ ರಾವಣ ! ಅಕಾಮಳಾಗಿದ್ದಾಗ್ಯೂ ನೀನು ಯಾವ ಕಾಮಿನಿಯನ್ನು ಕಾಮುಕನಾಗಿ ಬಲಾತ್ಕಾರದಿಂದ ಉಪಭೋಗಿಸುವಿಯೋ (ಅವಳಿಗಿಷ್ಟವಿಲ್ಲದೆ ಇದ್ದರೂ ಅವಳೊಡನೆ ಭೋಗಿಸಲಪೇಕ್ಷಿಸುವಿಯೋ,) ಆ ಕೂಡಲೆ ನಿನ್ನ ತಲೆ ನೂರು ಪಾಲಾಗಿ ಆಗ ಸೀಳಿಹೋಗಲಿ, ಹೀಗೆಂದು ಶಪಿಸಿದಳು

ಟಿಪ್ಪಣಿ — ವಿಷ್ಣುಧರ್ಮೋತ್ತರ ಪುರಾಣದ ಸಂಸ್ಕೃತ ಮೂಲಗ್ರಂಥದ ಪ್ರಥಮ ಖಂಡದ ೧೪೧ ನೇ ಪುಟದ ಉತ್ತರಪೃಷ್ಠ (ಕೆಳಗಿನ ಹಾಳೆ) ಈ ಶ್ಲೋಕದ ಅರ್ಥವು ಪೂರ್ಣವಾಗದೆ ಇರುವುದರಿಂದೆ ಪುಟದ ಕೆಳಗೆ ಗೀಟುಹಾಕಿ " ಅತ್ರಖಂಡಿತಃ ಪಾಠೋ ಲೇಖಕ ಪ್ರಮಾದಾತ್ ", ಒರೆಯುವರ ಪ್ರಮಾದದೋಷದಿಂದ ಇಲ್ಲಿ ಪಾಠವು ಸ್ವಲ್ಪ ಬಿಟ್ಟುಹೋಗಿದೆಯೆಂದು ಪ್ರಿಂಟ್‌ಮಾಡಿದ್ದಾರೆ ಆದರೂ ಕಥಾಸರಣಿಯು ಕೆಡದಂತೆ ನಾವು, ಈ ರಂಭೆಯ ಕಥೆಯನ್ನು ಸಂಪೂರ್ಣಗೊಳಿಸಿರುತ್ತೇವೆ
(ಕವಿಗಳೂ ಗ್ರಂಥಕರ್ತರೂ ನಾವೂ, ನಾನುಎಂದು ಎರಡು ವಿಧವಾಗಿ ಶಬ್ದಪ್ರಯೋಗವನ್ನು ಮಾಡುವ ಅಧಿಕಾರವನ್ನು ಇಟ್ಟುಮಾಡಿರುತ್ತಾರೆ )

೨೮ ಇಂತು ಶಾಪಗ್ರಸ್ತನಾದ ರಾವಣನು ಪೆಚ್ಚುಮೋರೆ ಮಾಡಿಕೊಂಡು ಮನೆಗೆ ಹೋಗಿ ಮಲಗಿಕೊಂಡುಬಿಟ್ಟನು ಬೆಳಗಾದ ಮೇಲೆ ಆ ರಾವಣನು ತನ್ನ ಮಗ ಮೇಘನಾದನನ್ನೂ, ತನ್ನ ತಮ್ಮನಾದ ಕುಂಭಕರ್ಣನನ್ನೂ ಸಂಗಡ ಸೈನ್ಯ ಜೊತೆನೆ ಕರೆದುಕೊಂಡು ಇಂದ್ರನ ಅಮರಾವತಿಗೆ ಪ್ರಯಾಣಮಾಡಿದನು. ಆಗ ಅಲ್ಲಿ ದೇವದಾನವರಿಗೆ ಭಯಂಕರವಾದ ಯುದ್ಧಕ್ಕೆ ಉಪಕ್ರಮವಾಯಿತು

ತಸ್ಮಿನ್ರಣಮುಖೇ ಘೋರೇ ಸಾವಿತ್ರೇಣ ತದಾsನಘ ।
ಸುಮಾಲೀ ನಿಹತಃ ಸಂಖ್ಯೇ ರಾವಣಸ್ಯಾರ್ಭಕೋ ಬಲಾತ್ ॥ ೨೯ ॥

ಅಜೇಯಾನ್ ರಾಕ್ಷಸಾನ್ ಜ್ಞಾತ್ವಾ ಪುಲೋಮಾ ನಾಮ ದಾನವಃ ।
ಜಯಂತಮಿಂದ್ರತನಯಂ ದೌಹಿತ್ರಂ ಸ್ವಂ ರಣಾಜಿರಾತ್ ॥ ೩೦ ॥

ರಕ್ಷಾರ್ಥಮನಯಚ್ಚಿ‌ೀಮಾನ್ಸ್ವಗೃಹಂ ವಸುಧಾತಲೇ ।
ಅಪಶ್ಯಮಾನಂ ಪುತ್ರಂ ಸ್ವಂ ಶಕ್ರಂ ವಿಹ್ವಲಚೇತಸಂ ॥ ೩೧ ॥

ಬಬಂಧ ಮೇಘನಾದಸ್ತು ಬ್ರಹ್ಮಲಬ್ಧವರಃ ಶನೈಃ ।
ಅನಯಚ್ಚ ತಥಾ ಲಂಕಾಂ ತತೋ ದೇವಃ ಪಿತಾಮಹಃ ॥ ೩೨ ॥

---

೨೯. ಆಗ ಸಂಭವಿಸಿದ ಘೋರಕದನದಲ್ಲಿ ರಾವಣನ ಒಂದು ಎಳೇ ಹುಡುಗ ಸುಮಾಲಿಯೆಂಬ ಬಾಲಕನು ರಣರಂಗಗಲ್ಲಿ ಮಡಿದು ಯಮಪಟ್ಟಣಕ್ಕೆ ಹೊರಟು ಹೋದನು

೩೦. ಹೀಗೆ ಸುಮಾಲಿಯೆಂಬ ರಾಕ್ಷಸಬಾಲಕನು ಮಡಿದುಹೋದುದನ್ನು ನೋಡಿ ಪುಲೋಮನು ತನ್ನ ದೌಹಿತ್ರ (ಶಚಿಯ ಮಗ) ನಾದ ಜಯಂತನೆಂಬ ಬಾಲಕನನ್ನು ಅವನಿಗೆಲ್ಲಿ ಅಪಾಯ ಸಂಭವಿಸೀತೋ ಎಂಬ ಭಯದಿಂದ ಅವನನ್ನು ಎತ್ತಿಕೊಂಡು ರಣರಂಗದಿಂದ ಹೊರಟುಹೋದನು

೩೧ ತನ್ನ ಮೊಮ್ಮಗು (ಮಗಳ ಮಗು) ಬದುಕಿದರೆ ಸಾಕೆಂದು ಆ ಪುಲೋಮನು ಅವನನ್ನೆತ್ತಿಕೊಂಡು ಹೋಗಿ ಲಂಕಾಪಟ್ಟಣದಲ್ಲಿದ್ದ ತನ್ನ ಮನೆಯಲ್ಲಿ ಬಚ್ಚಿಟ್ಟುಕೊಂಡನು

೩೨ ಯುದ್ಧರಂಗದಲ್ಲಿದ್ದ ಇಂದ್ರನು ತನ್ನ ಮಾವನು ಮಾಡಿದ ಈ ಕೆಲಸ ವನ್ನರಿಯದೆ ತನ್ನ ಮಗ ಜಯಂತನನ್ನು ಎಲ್ಲೆಲ್ಲಿಯೂ ಕಾಣದೆ ತಳಮಳಿಸುತ್ತಾ ಅದೇ ಯೋಚನೆಯಿಂದ ವಿಹ್ವಲನಾಗಿದ್ದುದನ್ನು ನೋಡಿ, ಮೇಘನಾದನು ಇದೇ ಸಮಯವೆಂದು ಬ್ರಹ್ಮನಿಂದ ಪಡೆದ ಅಸ್ತ್ರ (ಬ್ರಹ್ಮಾಸ್ತ್ರ) ದಿಂದ ಇಂದ್ರನನ್ನು ಕಟ್ಟಿ ಹಾಕಿಬಿಟ್ಟನು. ಮತ್ತು ಅದರಿಂದ ಕಟ್ಟಲ್ಪಟ್ಟಿದ್ದ ಇಂದ್ರನನ್ನು ಲಂಕೆಗೆ ಕರೆದು ಕೊಂಡು ಹೋಗಿ ತನ್ನ ಮನೆಯಲ್ಲಿಟ್ಟುಕೊಂಡನು ರಾವಣನ ಮಗ ಮೇಘನಾದನು ತನ್ನ ಅಸ್ತ್ರಬಲದಿಂದ ಮಾಡಿದ ಈ ಕೆಲಸವನ್ನು ನೋಡಿ ಬ್ರಹ್ಮನು ಅವನ ಹಿಂದೆಯೇ ಲಂಕೆಗೆ ಹೊರಟನು

ಗತ್ವಾ ತಂ ಮೋಚಯಾಮಾಸ ಶಕ್ರಂ ತ್ರಿಭುವನೇಶ್ವರಂ ।
ಮೇಘನಾದಸ್ಯ ಚಾಸ್ತ್ರಾಣಿ ಮಾಯಾಶ್ಚ ವಿವಿಧಾಸ್ತಥಾ ॥ ೩೩ ॥

ಅಮರತ್ವಂ ತದಾ ಪ್ರಾದಾದ್ವಹ್ನಿಕರ್ಮಾಂತರಂ ವಿನಾ ।
ನಾಮ ಚಕ್ರೇ ತದಾ ಚಾಸ್ಯ ಶಕ್ರಜಿತ್ ತ್ವಂ ಭವಿಷ್ಯಸಿ ॥ ೩೪ ॥

ಮೇಘನಾದಂ ಸಾಂತಯಿತ್ವಾ ಮೋಚಯಿತ್ವಾ ಶತಕ್ರತುಂ ।
ಉವಾಚ ಭಗವಾನ್ ಬ್ರಹ್ಮಾ ದೇವಂ ದಶಶತೇಕ್ಷಣಂ ॥ ೩೫ ॥

ಗೌತಮಸ್ಯ ಪ್ರಿಯಾ ಭಾರ್ಯಾ ಮನಸಾ ನಿರ್ಮಿತಾ ಮಯಾ ।
ರೂಪೇಣಾಪ್ರತಿಮಾ ಶಕ್ರ ತ್ವಯಾ ವಿಧ್ವಂಸಿತಾ ಯದಾ ॥ ೩೬ ॥

---

೩೩ ಅಲ್ಲ ಮೇಘನಾದನು ಬ್ರಹ್ಮಾಸ್ತ್ರದಿಂದ ಕಟ್ಟಿ ಬಂಧಿಸಿದ್ದ ಇಂದ್ರನನ್ನು ಬಿಟ್ಟುಬಿಡುವಂತೆ ಮೇಘನಾದನಿಗೆ ಮಹತ್ತಾದ ಉಪಚಾರವನ್ನು ಹೇಳಿ ಇಂದ್ರನನ್ನು ಬಿಡಿಸಿ, ಆರೀತಿ ಬಿಟ್ಟು ಬಿಟ್ಟ ಸಂತೋಷಕ್ಕಾಗಿ ಆ ಮೇಘನಾದನಿಗೆ ಬ್ರಹ್ಮನು ಇನ್ನು ಕೆಲವು ವರಗಳನ್ನು ಕೊಟ್ಟನು

೩೪ ಆ ವರಗಳೇನೆಂದರ —ಮಾಯಾಯುದ್ಧದಲ್ಲಿ ಪ್ರಯೋಗಿಸಿ ಶತ್ರುಗಳನ್ನು ಮೋಸಪಡಿಸತಕ್ಕ ಶಕ್ತಿಯುಳ್ಳ ಕೆಲವು ಅಸ್ತ್ರಗಳು ಮೇಘನಾದನ ದೇಹವು ಅಗ್ನಿಸಂಸ್ಕಾರವಿಲ್ಲದ ಪರಲೋಕಕ್ಕೆ ಬಂದು ಅಮರತ್ವವಂ ಪಡೆಯಲೆಂದು ಒಂದು ವರ ಇಂದ್ರನನ್ನು ಜಯಿಸಿ ಕಟ್ಟಿಹಾಕಿದುದಕ್ಕಾಗಿ ಇಂದ್ರಜಿತ್ ಎಂಬ ಬಿರುದು

೩೫ ಈ ಮೇರೆ ವರವನ್ನು ಕೊಟ್ಟು ಆ ಇಂದ್ರಜಿತನನ್ನು ಸಮಾಧಾನಪಡಿಸಿ ಇಂದ್ರನನ್ನು ಬಿಡಿಸಿ ಕರೆದುಕೊಂಡು ಬರುತ್ತಾ ದಾರಿಯಲ್ಲಿ ಬ್ರಹ್ಮನು ಇಂದ್ರನಿಗ ಕೆಲವು ಬುದ್ಧಿವಾದಗಳನ್ನು ಹೇಳಿದನು —

೩೬ ಇಂದ್ರ ! ನೀನು ಏಕೋ ಈಚೆಗೆ ಬಹಳ ಕೆಟ್ಟುಹೋದೆಯಪ್ಪ ! ನೀನು ಧರ್ಮದ ಮೇರೆಯನ್ನು ಮೀರುತ್ತ ಬಂದಿದ್ದೀಯೆ ! ಅದಕ್ಕಾಗಿಯೇ ನಿನಗೆ ಎಂತಹ ಬಂಧನವು ಪ್ರಾಪ್ತವಾಯಿತು. ಇದರ ಪೂರ್ವ ವೃತ್ತಾಂತವನ್ನು ಹೇಳುತ್ತೇನೆ, ಕೇಳು —ನಾನು ಪೂರ್ವದಲ್ಲಿ ತ್ರಿಲೋಕಸುಂದರಿಯಾದ ಅಹಲ್ಯೆಯನ್ನು ಮನಸ್ಸಿನಿಂದಲೇ ನಿರ್ಮಾಣಮಾಡಿ ಅವಳನ್ನು ಗೌತಮರಿಗೆ ಮದುವೆಮಾಡಿಕೊಟ್ಟೆ. ಅವಳ ಸೌಂದರ್ಯಕ್ಕೆ ಸೋತು ನೀನು ಅವಳ ಮೇಲೆ ಕಣ್ಣಿಟ್ಟು ಮೋಸದಿಂದ ಹೋಗಿ ಅವಳನ್ನು ಕೆಡಿಸಿದ

ತದಾ ಗೌತಮಶಾಪೇನ ವಿಫಲತ್ವಂ ಗತಃ ಸ್ವಯಂ ।
ದೇವೈಃ ಕೃತಸ್ತ್ವಂ ಸಂಭೂಯ ಶೇಷಸ್ತಂಭಃ ಪುರಂದರ ॥ ೩೭ ॥

ಅಹಲ್ಯಾ ಚ ತದಾ ಶಪ್ತಾ ಗೌತಮೇನ ಮಹಾತ್ಮನಾ ।
ಅದೃಶ್ಯಾ ಸರ್ವಭೂತಾನಾಂ ವಿಚರಿಷ್ಯಸಿ ದುಃಖಿತಾ ॥ ೩೮ ॥

ಪರದಾರರತಶ್ಚಾಸೌ ದ್ವೇ ಪಾಪಂ ಸಮವಾಪ್ಸ್ಯಸಿ ।
ತೇನ ಶಾಪೇನ ಸಂಭೋಗಾತ್ ಪರದಾರೈಶ್ಚ ವಾಸವ ॥ ೩೯ ॥

ಬಂಧನಂ ತತ್ತ್ವಯಾ ಪ್ರಾಪ್ತಂ ತಸ್ಯ ಪಾಪಸ್ಯ ಕರ್ಮಣಃ ।
ಫಲಾತ್ತ್ರಿಭುವನಶ್ರೇಷ್ಠ ಸಮರೇಷು ಪರಾಜಯಂ ॥ ೪೦ ॥

ತಸ್ಮಾದ್ಧರ್ಮೇಣ ಧರ್ಮಜ್ಞ ಪಾಲಯಸ್ವ ಜಗತ್ತ್ರಯಂ ।
ಧರ್ಮೋ ಧಾರಯತೇ ಲೋಕಾನ್ಯತೋ ಧರ್ಮಸ್ತತೋ ಜಯಃ ॥ ೪೧ ॥

---

೩೭-೩೮ ನಿನ್ನ ಈ ಕೆಟ್ಟಾಟವು ಜ್ಞಾನಿಗಳಾದ ಗೌತಮರ ಗಮನಕ್ಕೆ ಬಂದು ನೀನು ವಿಫಲನಾಗಿ ಅವರ ಶಾಪಕ್ಕೆ ಗುರಿಯಾದೆ ನಿನಗೆ ಮರುಳಾಗಿ ಮದನನ ಕದನದಲ್ಲಿ ಬೆರೆತ ಆ ಲೋಕೈಕ ಸುಂದರಿಯು ಗಂಡನ ಶಾಪವನ್ನು ಶಿರಸಾವಹಿಸಿ ಯಾರಿಗೂ ಕಾಣದಂತೆ ಅಳುತ್ತಾ ಅಲೆಯುತ್ತಾ ಅವಸ್ಥೆಪಡುತ್ತಿದ್ದಾಳೆ

೩೯ ನಿನ್ನ ಕಾಮುಕತ್ವವೇ ನಿನ್ನನ್ನು ಕೆಡಿಸಿ ಎರಡು ಪಾಪಗಳನ್ನೂ ನಿನ್ನ ಕತ್ತಿಗೆ ಕಟ್ಟಿತು. ಕಂಡವರ ಹೆಂಡಿರನ್ನು ಕೆಡಿಸಿದುದೊಂದು ಪಾಪ ಅರಿಯದ ಹುಡುಗಿಯನ್ನು ಅನ್ಯಾಯವಾಗಿ ಅಲೆಯುವಂತೆ ಮಾಡಿದುದೊಂದು ಪಾಪ ಆ ಪಾಪದಿಂದುಂಟಾದ ಶಾಪದಿಂದಲೇ ನಿನಗೆ ಈ ವಿಧ ಬಂಧನವು ಪ್ರಾಪ್ತವಾಯಿತೆಂದು ತಿಳಿದುಕೋ.

೪೦. ನೀನು ತ್ರಿಲೋಕಾಧಿಪತಿಯೇ ಆದಾಗ್ಯೂ, ಅಮರೇಂದ್ರನೇ ಆದಾಗ್ಯೂ ನಿನ್ನ ಪಾಪಕೃತ್ಯವು ನಿನ್ನನ್ನು ಈರೀತಿ ಬಂಧನಕ್ಕೆ ಗುರಿಮಾಡಿತಲ್ಲದೆ ಬೇರೆಯಿಲ್ಲ "ಮಾಡಿದ್ದುಣ್ಣೋ ಮಹಾರಾಯ" ಎಂಬ ಗಾದೆಗೆ ಇದೇ ಅರ್ಥ. ನೀನು ಆಗ ಮಾಡಿದ ಅನ್ಯಾಯದಿಂದಲೇ ಈಗ ರಾಕ್ಷಸ ಬಾಲಕನೊಬ್ಬನಿಗೆ ಸೋತು ಹೋದೆ, ಕಂಡೆಯಾ ?

೪೧. ಇಂದ್ರ! ಇನ್ನು ಮುಂದಾದರೂ ಅನ್ಯಾಯಕ್ಕೂ ಅಧರ್ಮಕ್ಕೂ ಕೈಹಾಕಬೇಡ ಧರ್ಮದಿಂದಲೇ ಲೋಕಕಲ್ಯಾಣವು ಧರ್ಮದಿಂದಲೇ ಲೋಕ

ಗತೇ ಸ್ವಲೋಕಂ ಭುವನಪ್ರಧಾನೇ
ಪದ್ಮೋದ್ಭವೇ ದಾನವಪೂಗಹರ್ತಾ ।
ತ್ರಿವಿಷ್ಟಪಂ ಪ್ರಾಪ್ಯ ಶಶಾಸ ರಾಜ್ಯಂ
ಮಹಾನುಭಾವಸ್ತ್ರಿದಶಾಧಿನಾಥಃ ॥ ೪೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸ್ವರ್ಗವಿಜಯೋನಾಮ ದ್ವಾವಿಂಶತ್ಯುತ್ತರ
ದ್ವಿಶತತಮೋಽಧ್ಯಾಯಃ.

---

ಕಲ್ಯಾಣವು ' ಧರ್ಮದಿಂದಲೇ ಲೋಕವು ನಿಂತಿದೆ ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವು ಸಿದ್ಧವಾಗಿಯೇ ಇದೆ ನೀನು ಸುಖವಾಗಿ ರಾಜ್ಯವಾಳಿಕೊಂಡು ಧರ್ಮ ಪಾಲನೆಮಾಡುತ್ತಾ ಆಚಂದ್ರಾರ್ಕವಾಗಿ ಬದುಕು.

೪೨ ಹೀಗೆಂದು ಬ್ರಹ್ಮನು ಇಂದ್ರನನ್ನು ಬಂಧನದಿಂದ ಬಿಡಿಸಿ ಇಂದ್ರನಿಗೆ ಆಶೀರ್ವಾದಮಾಡಿ ತನ್ನ ಲೋಕಕ್ಕೆ ಹೊರಟುಹೋದನು ಇಂತು ಪದ್ಮೋದ್ಭವನು ಪ್ರಯಾಣಮಾಡಿದ ಕೂಡಲೇ ರಾಕ್ಷಸರೆಂಬ ಅಡಿಕೆಯನ್ನು ಚೂರು ಚೂರು ಮಾಡುವುದರಲ್ಲಿ ಅಡಿಕೆ ಕತ್ತರಿಯಂತಿರುವ ಇಂದ್ರನು, ಸುಖವಾಗಿ ಪ್ರಯಾಣಮಾಡಿ ತನ್ನ ಲೋಕಕ್ಕೆ ಹೋಗಿ ಸೇರಿಕೊಂಡು ಅಲ್ಲಿ ಸುಖ ಸಮೃದ್ಧಿಯಿಂದ ಕೂಡಿದವನಾಗಿ ಪರಹಿತನಿರತನಾಗಿ ರಾಜ್ಯವನ್ನಾಳಿಕೊಂಡಿದ್ದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಸ್ವರ್ಗವಿಜಯವೆಂಬ ಹೆಸರಿನ ಇನ್ನೂರ
ಇಪ್ಪತ್ತೆರಡನೆಯ ಆಧ್ಯಾಯವು
ಮುಗಿದುದು.



॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ತ್ರಯೋವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ॥

॥ ಶೈಲೂಷ ಉವಾಚ ॥

ಪಾತಾಲವಿಜಯಂ ತಸ್ಯ ರಾವಣಸ್ಯ ಮಹಾತ್ಮನಃ ।
ಶ್ರೋತುಮಿಚ್ಛಾಮಿ ತತ್ತ್ವೇನ ತತ್ರ ಕೌತೂಹಲಂ ಹಿ ಮೇ ॥ ೧ ॥

॥ ನಾಡಾಯನ ಉವಾಚ ॥

ತತಃ ಸ ಗತ್ವಾ ಪಾತಾಲಂ ಯುಯುಧೇ ದೈತ್ಯಸತ್ತಮೈಃ ।
ಕಾಲಖಂಜೈರ್ಮಹಾಭಾಗೈಃ ಕಾಲಕೇಯೈಶ್ಚ ದಾರುಣೈಃ ॥ ೨ ॥

---

### ಇನ್ನೂರ ಇಪ್ಪತ್ತಮೂರನೆಯ ಅಧ್ಯಾಯವು.

೧ ಈ ಕಥೆಗಳನ್ನು ಕೇಳುತ್ತಾ ಕೇಳುತ್ತಾ ಶೈಲೂಷನಿಗೆ ಕಥೆಯ ಹುಚ್ಚು ನೆತ್ತಿಗೇರಿ ನಾಡಾಯನರನ್ನು ಬಿಡದೆ ಮರುನುಡಿ ನುಡಿದನೆಂತನೆ --

ನಾಡಾಯನರೆ ! ರಾವಣನು ಭೂಲೋಕ ಸ್ವರ್ಗಲೋಕಗಳಲ್ಲಿ ಸಂಚರಿಸಿ ದಿಗ್ವಿಜಯಮಾಡಿಕೊಂಡು ಬಂದ ಕಥೆಯನ್ನು ಕೇಳಿಯಾಯಿತು ಇನ್ನು ಮುಂದೆ ಆ ಮಹಾತ್ಮನಾದ ರಾವಣನು ಪಾತಾಳಲೋಕಕ್ಕೆ ಪ್ರವೇಶಿಸಿ ಅಲ್ಲಿ ಅದೆಂತು ವಿಜಯಶಾಲಿಯಾಗಿ ಬಂದನೆಂಬ ಕಥೆಯನ್ನು ಕೇಳಲು ಮನಸ್ಸು ಬಹಳ ಕುತೂಹಲಪಡುತ್ತಲಿವೆ ದಯಮಾಡಿ ಅದನ್ನು ತಿಳಿಸುವಿರಾ ?

೨. ನಾಡಾಯನನು ಶೈಲೂಷನಿಗೆ ಪ್ರತ್ಯುತ್ತರವನ್ನು ಹೇಳುತ್ತಾನೆ —

ಆ ಬಳಿಕ ರಾವಣನು ಪಾತಾಳಲೋಕಕ್ಕೆ ಪ್ರವೇಶಮಾಡಿ ಕಾಲಖಂಜ, ಕಾಲಕೇಯ, ಮುಂತಾದ ಭಯಂಕರ ವೀರ ರಕ್ಕಸರ ಮೇಲೆ ಯುದ್ಧಮಾಡಿದನು

**ನಿವಾತಕವಚೈಶ್ಚೈವ ಸಂವತ್ಸರಮತಂದ್ರಿತಃ ।**
**ಪತಿಂ ಶೂರ್ಪಣಖಾಯಾಸ್ತು ವಿದ್ಯುಜ್ಜಿಹ್ವಂ ತು ದಾನವಂ ॥ ೩ ॥**

**ಅಜಾವಕ್ತ್ರವತಸ್ತತ್ರ ಜಘಾನ ರಣಗರ್ವಿತಂ ।**
**ತತ್ರಾಗತ್ಯ ತದಾ ಬ್ರಹ್ಮಾ ನಿವಾತಕವಚೈಃ ಸಹ ॥ ೪ ॥**

**ಚಕಾರ ಸಖ್ಯಂ ಸರ್ವಾತ್ಮಾ ದಶಗ್ರೀವಸ್ಯ ರಕ್ಷಸಃ ।**
**ತತಸ್ತು ಯುಯುಧೇ ನಾಗೈರ್ಘೋರರೂಪೈರ್ವಿಷೋಲ್ಬಣೈಃ ॥ ೫ ॥**

**ವಶೀ ಕೃತ್ವಾ ತತೋ ನಾಗಾನ್ವರುಣಸ್ಯ ಪುರಂ ಯಯೌ ।**
**ಬ್ರಹ್ಮಲೋಕಗತೇ ರಾಜನ್ವರುಣೇ ಸುಮಹಾತ್ಮನಿ ॥ ೬ ॥**

---

೩-೫ ನಿವಾತಕವಚರೆಂಬ ಹೆಸರಿನ ರಾಕ್ಷಸರ ಸಂಗಡ ಒಂದು ವರ್ಷಕಾಲ ಯುದ್ಧಮಾಡಿದನಾದಾಗ್ಯೂ ಆ ನಿವಾತಕವಾಚರು ಸೋಲಲಿಲ್ಲ ಆಗ ನಡೆದ ಯುದ್ಧದಲ್ಲಿ ತನ್ನ ತಂಗಿಯಾದ ಶೂರ್ಪನಖಿಯ ಗಂಡ ವಿದ್ಯುಜ್ಜಿಹ್ವನನ್ನು ರಾವಣನು ಕೊಂದುಬಿಟ್ಟನು ಆಗ ಬ್ರಹ್ಮನೇ ಸಾಕ್ಷಾತ್ತಾಗಿ ರಣರಂಗಕ್ಕೆ ಬಂದು ನಿವಾತಕವಚ ರೂಡನೆ ಸಂಧಿಯನ್ನೂ ಸ್ನೇಹವನ್ನೂ ಮಾಡಿಕೊಳ್ಳುವಂತೆ ರಾವಣನಿಗೆ ತಿಳಿಸಿ ಹೊರಟುಹೋದನು ಬಳಿಕ ಆ ರಾವಣನು ಕಾಲಕೂಟ ವಿಷವನ್ನು ಕಕ್ಕುತ್ತಿರುವ ಅತ್ಯಂತ ಭಯಂಕರರಾದ ನಾಗ (ಘಟಸರ್ಪ) ರೊಡನೆ ಘೋರ ಯುದ್ಧವನ್ನು ಮಾಡಿದನು.

೬ ಆ ಯುದ್ಧದಲ್ಲಿ ಆ ಸರ್ಪರಾಜರನ್ನು ಗೆದ್ದು ತನ್ನ ಅಧೀನಮಾಡಿಕೊಂಡ ವನಾಗಿ ವರುಣಲೋಕಕ್ಕೆ ಪ್ರಯಾಣಮಾಡಿದನು ಆ ಕಾಲದಲ್ಲಿ ವರುಣನು ಊರ ಲ್ಲಿರಲಿಲ್ಲ ಬ್ರಹ್ಮಲೋಕಕ್ಕೆ ಹೋಗಿದ್ದನು. ವರುಣನ ಮಗ ಯುವರಾಜನಾದ ಪುಷ್ಕರನು ಮಾತ್ರ ಊರಿನಲ್ಲಿದ್ದನು ಆ ವರುಣನ ಮಗ ಪುಷ್ಕರನಿಗೆ ಬಲಿಚಕ್ರ ವರ್ತಿಯ ಮಗಳನ್ನು ಕೊಟ್ಟು ಮದುವೆಯಾಗಿತ್ತು. ರಾವಣನು ಅವನೊಡನೆಯೇ ಯುದ್ಧಮಾಡಲಾರಂಭಿಸಿದನು

ಪುಷ್ಕರಃ ಪ್ರದದೌ ಯುದ್ಧಂ ರಾವಣಸ್ಯ ದುರಾತ್ಮನಃ ।
ವರುಣಸ್ಯ ಸುತಃ ಶ್ರೀಮಾನ್ ಜಾಮಾತಾ ಬಲಿನಸ್ತಥಾ ॥ ೭ ॥

ಸೋಮಪುತ್ರ್ಯಾ ಮಹಾರಾಜ ಜ್ಯೋತ್ಸ್ನಯಾ ಯಃ ಸ್ವಯಂ ವೃತಃ ।
ಅರ್ಥಶಾಸ್ತ್ರಂ ವಿಜಾನಾತಿ ಯಃ ಸಮಗ್ರಂ ಮಹಾಯಶಾಃ ॥ ೮ ॥

ಅಸ್ತ್ರಗ್ರಾಮಂ ಸಮಗ್ರಂ ಚ ತಥಾ ಶಸ್ತ್ರಾಣ್ಯನೇಕಶಃ ।
ರೂಪದಾಕ್ಷಿಣ್ಯಲಾವಣ್ಯಧರ್ಮಚರ್ಯೈಃ ಸಮನ್ವಿತೇ ॥ ೯ ॥

ಬಲೇ ಶೌರ್ಯೇ ತಥಾ ದಾನೇ ತುಲ್ಯೋ ಯಸ್ಯ ನ ವಿದ್ಯತೇ ।
ಭ್ರಾತೃಭಿರ್ಭ್ರಾತೃಪುತ್ರೈಶ್ಚ ಸೈನ್ಯೇನ ಮಹತಾ ಯಥಾ ॥ ೧೦ ॥

ದತ್ವಾ ಯುದ್ಧಂ ಮಹಾಘೋರಂ ಸಾಂತ್ವಯಾಮಾಸ ರಾಕ್ಷಸಂ ।
ತತಃ ಸ ನಗರಂ ಜಿತ್ವಾ ವರುಣಂ ಸುಮಹಾಬಲಂ ॥ ೧೧ ॥

ಸೈನ್ಯೈರ್ವಿಶ್ರವಸಃ ಪುತ್ರೋ ಮಾನುಷ್ಯಂ ಪುನರಾಗತಃ ।
ಕಿಷ್ಕಿಂಧಾಂ ಸ ತತೋ ಗತ್ವಾ ಪುರೀಂ ವಾನರಪಾಲಿತಾಂ ॥ ೧೨ ॥

---

೭ ಅದಲ್ಲದೆ ಆ ಪುಷ್ಕರನನ್ನು ಚಂದ್ರನ ಮಗಳಾದ ಚಂದ್ರಿಕೆ (ಜ್ಯೋತ್ಸ್ನಾ ದೇವಿ (ಬೆಳದಿಂಗಳು) ಯು ಸ್ವಯಂವರ ರೂಪದಿಂದ ವರಿಸಿ ಅವನ ಕೈಹಿಡಿದಿದ್ದಳು

೮-೧೧ ಆ ಪುಷ್ಕರನು ಅರ್ಥಶಾಸ್ತ್ರವನ್ನು ಸಂಪೂರ್ಣವಾಗಿ ವ್ಯಾಸಂಗಮಾಡಿದ್ದನು. ಧನುರ್ವೇದದಲ್ಲಿ ಮಹಾವಿದ್ವಾಂಸನಾಗಿದ್ದನು ಅನೇಕ ಶಾಸ್ತ್ರಗಳು ಅವನಿಗೆ ಸ್ವಾಧೀನವಾಗಿದ್ದುವು ರೂಪಲಾವಣ್ಯದಲ್ಲಿಯೂ, ದಾಕ್ಷಿಣ್ಯ, ಧರ್ಮಚರ್ಯೆಗಳಲ್ಲಿಯೂ, ಬಲ, ಶೌರ್ಯ, ದಾನಗಳಲ್ಲಿಯೂ ಅವನನ್ನು ಹೋಲುವವರೇ ಇರಲಿಲ್ಲ. ಇಂತಹ ಸಕಲ ಗುಣಗಣಭರಿತನಾದ ಪುಷ್ಕರನು, ಯುದ್ಧದ ತೀಟೆಯನ್ನು ತೀರಿಸಿಕೊಳ್ಳಲು ಬಂದಿದ್ದ ರಾವಣನೊಡನೆಯೂ ಅವನ ತಮ್ಮಂದಿರೊಡನೆಯೂ ಅವನ ಮಕ್ಕಳು ಮತ್ತು ಸೈನ್ಯದೊಡನೆಯೂ ಬಹಳ ವಿಧವಾದ ಯುದ್ಧವನ್ನುಮಾಡಿ, ರಾವಣನ ತೀಟೆಯನ್ನು ತೀರಿಸಿ ಅವನ ಮಗನಿಗೆ ಸಮಾಧಾನವನ್ನುಂಟುಮಾಡಿದನು ಕೊನೆಗೂ ರಾವಣನು ವರುಣನನ್ನು ಪರ ಜಿತನ್ನಾಗಿಮಾಡಿ ಪುನಃ ತನ್ನ ಸೈನ್ಯವನ್ನು ತೆಗೆದುಕೊಂಡು ಮನುಷ್ಯಲೋಕಕ್ಕೆ ಬಂದನು ( ಈ ಪುಷ್ಕರನೇ ಈ ಪುರಾಣದ ೨ ನೇ ಖಂಡದಿಂದ ಆರಂಭಿಸಿ ಸಕಲ ಶಾಸ್ತ್ರವನ್ನು ಪರಶುರಾಮನಿಗೆ ಉಪದೇಶಿಸುವ ಸರ್ವಜ್ಞಮೂರ್ತಿಯು )

ಪಪ್ರಚ್ಛ ವಾನರಾಂಶ್ಚೈವ ಕ್ವಾಸೌ ವಾಲೀ ಮಹಾಬಲಃ ।
ತಂ ಜಗಾದ ಮಹಾತೇಜಾ ತಾರೋ ಗಹನಗೋಚರಃ ॥ ೧೩ ॥

ಕಿಂ ತ್ವಯಾ ತ್ವತ್ರೇ ವಾಲಿನಾ ಕಾರ್ಯಂ ತನ್ಮಮಾಚಕ್ಷ್ವ ಪೃಚ್ಛತಃ ।
॥ ರಾವಣ ಉವಾಚ ॥
ಯುದ್ಧಾತಿಥ್ಯಮಹಂ ತಸ್ಮಾತ್ಪ್ರಾರ್ಥಯಾಮಿ ವಲೀಮುಖಾತ್ ॥ ೧೪ ॥

ಬಲವಾನ್ ಶ್ರೂಯತೇ ರಾಜಾ ಜಿಜ್ಞಾಸಾ ತಸ್ಯ ಮೇ ಬಲೇ ।
॥ ತಾರ ಉವಾಚ ॥
ಜಿಜ್ಞಾಸಿತೋ ಯದಾ ವಾಲೀತ್ವತ್ತೋಽನ್ಯೈರ್ಬಲವತ್ತರೈಃ ॥ ೧೫ ॥

ನಿಹತಾಃ ಶತಶಸ್ತೇನ ತ್ವತ್ತೋ ವೀರ್ಯಬಲಾಧಿಕಾಃ ।
ಇದಾನೀಮೇವ ನಿಹತೋ ದುಂದುಭಿಸ್ತೇನ ರಾಕ್ಷಸಃ ॥ ೧೬ ॥

---

೧೨ ರಾವಣನು ಈಗ ಎಲ್ಲಿಗೆ ಹೋಗೋಣವೆಂದಾಲೋಚಿಸಿ ವಾಲಿಯಿಂದ ಪರಿಪಾಲಿತವಾದ ಕಿಷ್ಕಿಂಧಾನಗರಕ್ಕೆ ಬಂದನು

೧೩. ನಗರವನ್ನು ಪ್ರವೇಶಿಸಿದೊಡನೆಯೇ ಮಹಾಪರಾಕ್ರಮಶಾಲಿಯೆನಿಸಿ ಕೊಂಡಿರುವ ನಿಮ್ಮ ಧೊರೆ ವಾಲಿಯು ಎಲ್ಲಿಂದು ಅಲ್ಲಿದ್ದ ವಾನರರನ್ನು ಪ್ರಶ್ನೆಮಾಡಿದನು ಆಗ ಅಲ್ಲಿದ್ದ ಯಾರಿಗೂ ಗೋಚರನಲ್ಲದ ತಾರಕನೆಂಬ ವಾನರನು ರಾವಣನನ್ನು ಕುರಿತಿಂತೆಂದನು —

೧೪ ನೀನು ಯಾರೋ? ಎಲ್ಲಿಂದಬಂದಿದ್ದೀಯೋ? ವಾಲಿಯಿಂದ ನಿನಗೇನಾಗಬೇಕಾಗಿದೆ ಮೊದಲು ಅದನ್ನು ನನ್ನಸಂಗಡ ಹೇಳೋ! ಎಂದು ಕೇಳಲು, ಆ ರಾವಣನು ತಾರನೊಡನೆ ನಾನು ವಾಲಿಯೊಡನೆ ಯುದ್ಧಕ್ಕೆ ಬಂದಿನೇನೆ ಅವನಿಂದ ನನಗೆ ಯುದ್ಧಾತಿಥ್ಯವನ್ನು ಕೊಡಿಸಬೇಕೈ

೧೫ ಆ ವಾಲಿಯು ಬಹು ಬಲಶಾಲಿಯೆಂದು ನಾನು ಅನೇಕಕಡೆ ಕೇಳಿದೇನೆ ನನ್ನ ಬಲವೂ ನಿನ್ನ ಧೊರೆಯಾದ ವಾಲಿಯ ಬಲವೂ ಸರಿಸಮವೋ? ಹೆಚ್ಚುಕಡಿಮೆಯೋ ? ಎಂದು ತಿಳಿಯಲು ಬಂದಿರುವೆನೆನಲು ಅದಕ್ಕೆ ತಾರನು ಇಂತುಪ್ರತ್ಯುತ್ತರ ಕೊಟ್ಟನು.

೧೬ ಹಾಗೋ ? ಅವನ ಬಲವನ್ನೂ ನಿನ್ನ ಬಲವನ್ನೂ ಜಿಜ್ಞಾಸೆಮಾಡುವುದಕ್ಕಾಗಿ ನೀನು ಇಲ್ಲಿಗೆ ಬಂದಿದೀಯೋ ? ನಿನಗಿಂತಲೂ ನೂರುಪಾಲು ಹೆಚ್ಚಾದ ಬಲವುಳ್ಳ ನೂರಾರುಮಂದಿ ವೀರರು ವಾಲಿಯಿಂದ ಇದುವರಿಗೆ ಎಷ್ಟೋಮಂದಿ ಹತರಾಗಿ

ಪ್ರವಿಶ್ಯ ವಿವರಂ ಘೋರಂ ಮಾಯಾವೀ ತೇನ ಘಾತಿತಃ ।
ಬಿಲೇ ಪ್ರವಿಷ್ಟಸ್ಯ ತದಾ ರಾಜರ್ಷ ಸಂವತ್ಸರಂ ಗತಂ ॥ ೧೭ ॥

ಸುಗ್ರೀವೇಣ ತದಾ ತಸ್ಯ ದ್ವಾರಂ ಪಿಹಿತಮಾತ್ಮನಾ ।
ಸ ತು ಸಂವತ್ಸರಸ್ಯಾಂತೇ ಹತ್ವಾ ಮಾಯಾವಿನಂ ರಣೇ ॥ ೧೮ ॥

ದದರ್ಶ ರಾಜನ್ಸುಗ್ರೀವಂ ಕಿಷ್ಕಿಂಧಾಯಾಂ ತದಾsನುಜಂ ।
ಸ್ವಪತ್ನ್ಯಾ ರುಮಯಾ ಸಾರ್ಧಂ ವಾಲಿಪತ್ನ್ಯಾ ಚ ತಾರಯಾ ॥ ೧೯ ॥

---

ಹೋಗಿರುವರು ಈಗತಾನೇ ದುಂದುಬಿಯೆಂಬ ರಾಕ್ಷಸನನ್ನು ಕೊಂದು ವಾಲಿಯು ಊರಿಗೆ ಬಂದಿದಾನೆ

೧೭ ಆ ಮಾಯಾವಿಯಾದ ದುಂದುಭಿಯು ಗುಹೆಗೆ ನುಗ್ಗಿ ಅಲ್ಲಿಗೆ ವಾಲಿಯನ್ನಾಕರ್ಷಿಸಿ ಅವನೊಡನೆ ಯುದ್ಧಮಾಡಿ ಪ್ರಾಣಬಿಟ್ಟನು ವಾಲಿಯು ಗುಹೆಯನ್ನು ಪ್ರವೇಶಿಸಿ ಯುದ್ಧಕ್ಕಾರಂಭಿಸಿ ಇಲ್ಲಿಗೆ ಒಂದುವರ್ಷ ಕಳೆದುಹೋಯಿತು

೧೮. ಆಗ ವಾಲಿಯು ಜತೆಯಲ್ಲಿಯೇ ಅವನ ಹಿಂದೆ ಹೋಗಿದ್ದ ಅವನ ತಮ್ಮ ಸುಗ್ರೀವನು, ದುಂದುಭಿ ವಾಲಿಯರು ಹೊಕ್ಕಿದ್ದ ಗುಹೆಯ ಬಾಗಿಲಿನಲ್ಲಿಯೇ ಒಂದು ವರ್ಷದವರಿಗೂ ನಿಂತಿದ್ದು ಕಾದಿದಾಗ್ಯೂ ಅವರಾರೂ ಈಚೆಗೆ ಬರದಿದ್ದುರಿಂದ ಆ (ಗವಿಯಿಂದ ರಕ್ತದ ಕೋಡಿ ಹರಿಯಲಾರಂಭಿಸಿದುದನ್ನು ನೋಡಿ ದುಂದುಭಿಯಿಂದ ವಾಲಿಯು ಹತನಾಗಿರಬಹುದೆಂದೂಹಿಸಿ, ಈ ಗುಹೆಯ ಬಾಗಿಲಿನಿಂದ ದುಂದುಭಿಯು ಈಚೆಗೆ ಬಂದು ಇನ್ನೇನು ಅನರ್ಥಮಾಡುವನೋ ಏನೋ ಎಂಬ ಸಂಶಯದಿಂದ ಆ ಗುಹೆಯ ಬಾಗಿಲಿಗೆ ದೊಡ್ಡ ದೊಡ್ಡ ಬಂಡೆಗಳನ್ನುಮುಚ್ಚಿ ಈಚೆಗೆ ಯಾರೂ ಬರದಂತೆ ತಡೆಮಾಡಿ)ತಾನು ಈಚೆಗೆ ಬಂದುಬಿಟ್ಟನು ಈರೀತಿ ಸುಗ್ರೀವನು ಊರಿಗೆ ಹೊರಟುಹೋದ ಮೇಲೆ ವಾಲಿಯು ದುಂದುಭಿಯನ್ನು ನೋಲಿಸಿ, ಅವನನ್ನು ಸಂಹರಿಸಿ ಒಂದು ವರ್ಷವಾದ ಬಳಿಕ ಬಂಡೆಗಳನ್ನೊದ್ದು ದಾರಿಮಾಡಿಕೊಂಡು ಹೊರಗೆ ಬಂದನು.

೧೯ ಅಣ್ಣನು ಸತ್ತನೆಂದೇ ತಿಳಿದು ಅವನಿಗೆ ಅಂತ್ಯಕರ್ಮಗಳನ್ನು ಸಹ ಮಾಡಿ ಸುಗ್ರೀವನು ಕಿಷ್ಕಿಂಧಾ ರಾಜ್ಯದಲ್ಲಿ ರಾಜ್ಯಭಾರ ಮಾಡಿಕೊಂಡು ಸುಖವಾಗಿದ್ದುಬಿಟ್ಟನು. ಇಂತಿರುವಲ್ಲಿ ವಾಲಿಯು ಊರಿಗೆ ಬಂದೇ ಬಂದನು ಆ ಸಮಯದಲ್ಲಿ ಸುಗ್ರೀವನು ರಾಜ್ಯವನ್ನು ಅನುಭವಿಸುದಂತಿರಲಿ. ತನ್ನ ಹೆಂಡತಿಯಾದ

ಕ್ರೀಡಮಾನಂ ಯಥಾ ಶಕ್ರಂ ಕ್ರೋಧಸ್ಯ ವಶಮನ್ವಗಾತ್ ।
ರುಮಾಂ ತಾರಾಂ ತಥಾ ಹೃತ್ವಾ ತೇನ ನಿರ್ವಾಸಿತಸ್ತ್ವಸೌ ॥ ೨೦ ॥

ನಿರ್ವಾಸಿತೇ ತು ಸುಗ್ರೀವೇ ಪಶ್ಚಾತ್ತಾಪ ಸಮನ್ವಿತಃ ।
ಹಂತುಕಾಮಸ್ತು ಸುಗ್ರೀವಂ ವಾಲೀ ಪರ್ಯಚರನ್ಮಹೀಂ ॥ ೨೧ ॥

ತದಾ ವಾಲಿಭಯತ್ರಸ್ತಃ ಸುಗ್ರೀವೋಽಪಿ ಪಲಾಯಿತಃ ।
ನ ಸ ಲೇಭೇ ಸದಾ ತ್ರಾಣಂ ತದಾ ಸಸ್ಮಾರ ರಾಕ್ಷಸಂ ॥ ೨೨ ॥

ಮತಂಗಶಾಪಂ ರಾಜೇಂದ್ರ ವಾಲಿನಃ ಸ ತಥಾ ಸ್ವಯಂ ।
ಹತ್ವಾ ತು ದುಂದುಭಿಂ ವಾಲೀ ಪಾದಾಂಗುಷ್ಠೇನ ಯೋಜಯತ್ ॥ ೨೩ ॥

---

ರುಮೆಯನ್ನೂ, ತನ್ನ ಅಣ್ಣನ ಹೆಂಡತಿಯಾದ ತಾರೆಯನ್ನೂ ಸಹ ಸ್ವಚ್ಛಂದವಾಗಿ ಅನುಭವಿಸುತ್ತಾ ಸುಖವಾಗಿದ್ದನು

೨೦ ಅಮರಾವತೀ ಪಟ್ಟಣದಲ್ಲಿ ಭೋಗಪಡುತ್ತಿದ್ದ ದೇವೇಂದ್ರನಂತೆ ನಿಶ್ಯಂಕನಾಗಿ ಭೋಗಭಾಗ್ಯಗಳನ್ನನುಭವಿಸುತ್ತಲಿದ್ದ ತನ್ನ ತಮ್ಮನನ್ನು ನೋಡಿ ವಾಲಿಗೆ ಮಹತ್ತರವಾದ ಕೋಪವುಂಟಾಗಿ ಸುಗ್ರೀವನನ್ನು ಊರಿನಿಂದ ಹೊರಕ್ಕೋಡಿಸಿ ಆ ಬಳಿಕ ಆ ಸುಗ್ರೀವನ ಹೆಂಡತಿಯನ್ನೂ (ರುಮೆ), ತನ್ನ ಹೆಂಡತಿ ತಾರೆಯನ್ನೂ ಸ್ವಾಧೀನಮಾಡಿಕೊಂಡು ಸುಖವಾಗಿದ್ದನು

೨೧ ಸುಗ್ರೀವನನ್ನು ಊರಿನಿಂದ ಹೊರಕ್ಕೆ ಕಳುಹಿಸಿ ಬಿಟ್ಟಾಗ್ಯೂ ಅಷ್ಟಕ್ಕೂ ಸುಮ್ಮನಾಗದ ವಾಲಿಯು ಅವನನ್ನು ತೀರಿಸಿಯೇ ಬಿಡಬೇಕೆಂಬ ಆಲೋಚನೆಯಿಂದ ಸುಗ್ರೀವನ ಆಸುವನ್ನು ಹೀರುವುದಕ್ಕಾರಂಭಿಸಿದನು ಸುಗ್ರೀವನು ಅವನ ಕೈಗೆ ಸಿಕ್ಕದ ಪ್ರಾಣಭಯದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಓಡಲು ಅವನ ಹಿಂದ ವಾಲಿಯೂ ಸಹ ಓಡುತ್ತಾ, ಈ ಮೇರೆ ಭೂಲೋಕವನ್ನೆಲ್ಲಾ ಪ್ರದಕ್ಷಿಣೆಮಾಡಿದನು.

೨೨ ಸುಗ್ರೀವನು ಮುಂದೆ, ವಾಲಿಯು ಅವನ ಹಿಂದೆ, ಹೀಗೆ ಒಬ್ಬರ ಹಿಂದೊಬ್ಬರು ಭೂಲೋಕದಲ್ಲೆಲ್ಲಾ ಓಡಿಯಾಡಿ ತೀರಾಸೋತು ಬೆಂಡಾದಾಗ ಎಲ್ಲಿಯೂ ಔತುಕೊಳ್ಳಲಾಗದೆ ಸುಗ್ರೀವನಿಗೆ ದುಂದುಭಿಯ ಸ್ಮರಣೆಯುಂಟಾಯಿತು

೨೩ ಈ ಸಂದರ್ಭದಲ್ಲಿ ದುಂದುಭಿಯು ವಾಲಿಯನ್ನು ಕೊಂದಮೇಲೆ ನಡೆದ ಕಥೆಯೊಂದಷ್ಟನ್ನು ಇಲ್ಲಿ ಹೇಳಬೇಕಾಗಿದೆ. ಈ ವಿಚಾರವು ವಾಲಿಗೆ ಮತಂಗ ಋಷಿಯಿಂದ ಶಾಪ ಬಂದ ವೃತ್ತಾಂತ ಇದಿಷ್ಟನ್ನು ವಾಚಕರು ಕೇಳಬೇಕಾಗಿದೆ ದುಂದುಭಿಯು ತನ್ನಿಂದ ಸಂಗ್ರಾಮದಲ್ಲಿ ಪ್ರಾಣಬಿಟ್ಟ ಬಳಿಕ ವಾಲಿಯು ಅವನ ಹೆಣವನ್ನು ಕಾಲುಹೆಬ್ಬೆಟ್ಟಿನಿಂದ ಚಿಮ್ಮಿಬಿಟ್ಟನು

**ಚಿಕ್ಷೇಪ ರಾಕ್ಷಸಶ್ರೇಷ್ಠಂ ಮತಂಗಸ್ಯಾಶ್ರಮಂ ಪ್ರತಿ ।**
**ಮತಂಗಸ್ಯಾಶ್ರಮಂ ದೃಷ್ಟ್ವಾ ರುಧಿರೇಣ ಸಮನ್ವಿತಂ ॥ ೨೪ ॥**

**ಶಶಾಪ ವಾಲಿನಂ ರೋಷಾತ್ತಸ್ಯಾಸ್ಮಿನ್ಮೇ ಮಹದ್ವನೇ ।**
**ಸದ್ಯಃ ಪ್ರವಿಷ್ಟಮಾತ್ರಸ್ಯ ಜೀವಿತಂ ನ ಭವಿಷ್ಯತಿ ॥ ೨೫ ॥**

**ಅಗಮ್ಯಂ ವಾಲಿನೋ ಜ್ಞಾತ್ವಾ ಮತಂಗಸ್ಯ ಮಹದ್ವನಂ ।**
**ಚತುರ್ಭಿಃ ಸಚಿವೈಃ ಸಾರ್ಧಂ ಸುಗ್ರೀವಸ್ತಮುಪಾಶ್ರಿತಃ ॥ ೨೬ ॥**

**ನಲೇನ ರಾಜನ್ನೀಲೇನ ತಾರೇಣ ಚ ಹನೂಮತಾ ।**
**ಹನೂಮಾನ್ಸಚಿವಸ್ತಸ್ಯ ದೇವಾನಾಮಪಿ ನಿರ್ಭಯಃ ॥ ೨೭ ॥**

---

೨೪ ಆ ಮಹಾಮೇರುಗಿರಿಯಂತಹ ದುಂದುಭಿಯ ದೇಹವು ವಾಲಿಯು ಹೆಬ್ಬೆಟ್ಟಿನಿಂದ ಚಿಮ್ಮಿದೊಡನೆ ಹಾರಿಹೋಗಿ ಮತಂಗಋಷಿಗಳ ಆಶ್ರಮಪ್ರವೇಶದಲ್ಲಿ ಬಿದ್ದು ಆ ದೇಹದಿಂದ ಹೊರಟ ರಕ್ತದಿಂದ ಆ ಋಷ್ಯಾಶ್ರಮವೆಲ್ಲಾ ನೆನೆದು ಹೋಗಿ ಬಿಟ್ಟಿತು.

೨೫ ತನ್ನಾಶ್ರಮವು ಶವದ ರಕ್ತದಿಂದ ಅಪರಿಶುದ್ಧವಾದುದನ್ನು ನೋಡಿ ಮತಂಗಋಷಿಗೆ ಬಹು ಸಿಟ್ಟು ಬಂದಿತು. ಇದು ವಾಲಿಯು ಮಾಡಿದ ಚೇಷ್ಟೆಯೆಂದ ರಿತು, ವಾಲಿಗೆ ಆಗ ಒಂದು ಶಾಪವನ್ನು ಕೊಟ್ಟನು ಈ ಆಶ್ರಮಕ್ಕೆ ವಾಲಿಯು ಎಂದಾದರೂ ಹೆಜ್ಜೆಯಿಟ್ಟರೆ ಅವನ ಜೀವವೇ ಹಾರಿಹೋಗಲಿ (ಸಾಯಲಿ) ಇದೇ ಮತಂತನಿಂದ ವಾಲಿಗೆ ಬಂದ ಶಾಪವೃತ್ತಾಂತ

೨೬. ಹೀಗೆ ಶಾಪ ಬಂದ ವೃತ್ತಾಂತವು ಸುಗ್ರೀವನಿಗೆ ತಿಳಿದಿತ್ತು ಇದು ಸ್ಮರಣೆಗೆ ಬಂದಾಗ ಸುಗ್ರೀವನಿಗೆ ಬಹು ಧೈರ್ಯವುಂಟಾಗಿ, ಇಲ್ಲಿ ವಾಲಿಯ ಭಯ ವಿಲ್ಲವೆಂದು ನಿರ್ಧರಿಸಿ ತನ್ನ ನಾಲ್ಕು ಜನ ಮಂತ್ರಿಗಳೊಡನೆ ಆ ಮತಂಗಾಶ್ರಮಕ್ಕೆ ಪ್ರವೇಶಿಸಿದನು

೨೭. ಸುಗ್ರೀವನ ನಾಲ್ಕುಮಂದಿ ಮಂತ್ರಿಗಳಾರಾರೆಂದರೆ --ನಲ, ನೀಲ, ತಾರ, ಹನುಮಂತ ಈ ನಾಲ್ವರು ಸಚಿವರೊಳಗೆ ಹನುಮಂತನೇ ಮುಖ್ಯಾಮಾತ್ಯ ನಾಗಿದ್ದನು ಇವನಿಗೆ ಎಲ್ಲಾ ದೇವತೆಗಳೂ ತೃಣಗಣಾಯಮಾನರಾಗಿದ್ದರು

ಜಾತಮಾತ್ರಸ್ತು ಯೋ ಬಾಲ್ಯೇ ವೀಕ್ಷ್ಯ ಸೂರ್ಯಂ ಖಮಾಪ್ಲುತಃ ।
ಭಕ್ಷ್ಯಾರ್ಥೀ ತಸ್ಯ ಪಾರ್ಶ್ವಸ್ಥಂ ರಾಹುಂ ದೃಷ್ಟ್ವಾ ನಿಶಾಚರಂ ॥ ೨೮ ॥

ಸೂರ್ಯಮುತ್ಸೃಜ್ಯ ಭಕ್ಷ್ಯಾರ್ಥೀ ತದಾ ರಾಹುಂ ಪ್ರದುದ್ರುವೇ ।
ರಾಹುರ್ಜಗಾಮ ಶರಣಂ ಭಯಾದ್ಭೀತಂ ಚ ವಾಸವಂ ॥ ೨೯ ॥

ತಸ್ಯಾನು ಪ್ರಯಯಾವೇವ ಸ ತು ಬಾಲೋ ಮಹಾಬಲಃ ।
ಸ ದದರ್ಶ ಮಹಾಕಾಯಂ ತದಾ ಶಕ್ರಸ್ಯ ದಂತಿನಂ ॥ ೩೦ ॥

---

## ಆಂಜನೇಯನ ವಿಚಿತ್ರವಾದ ಚರಿತ್ರೆ.

೨೮ ಪ್ರಸಕ್ತಾನು ಪ್ರಸಕ್ತಿಯಿಂದ ಈ ಹನುಮಂತನ ಚರಿತ್ರೆಯನ್ನು ಇಲ್ಲಿ ಸ್ವಲ್ಪವಾದರೂ ಬರೆದು ಮುಂದಿನ ವೃತ್ತಾಂತಕ್ಕೆ ತಿರುಗೋಣ--ಹನುಮಂತನು ಅಂಜನಾದೇವಿಯ ಹೊಟ್ಟೆಯಲ್ಲಿ ವಾಯುವಿನಿಂದ ಉತ್ಪನ್ನನಾದ ಮಹಾನುಭಾವ ನೆಂದು ಸಕಲರಿಗೂ ತಿಳಿದೇ ಇರಬಹುದು ಈ ಹನುಮಂತನು ಹುಟ್ಟಿದಾಗ ಸೂರ್ಯ ಗ್ರಹಣ ಕಾಲ ಸೂರ್ಯನು ಆಕಾಶದಲ್ಲಿ ಥಳ ಥಳಿಸಿ ಹೊಳೆಯುತ್ತಿದ್ದುದನ್ನು ನೋಡಿದ ಫಲ್ಗುಣಫ್ಯಜನು, ಇದೊಂದು ಫಲಾಹಾರಕ್ಕರ್ಹವಾದ ಫಲವೆಂದು ಭಾವಿಸಿ ಆ ಫಲವನ್ನು ತಿನ್ನಬೇಕೆಂದು ಆಕಾಶಮಾರ್ಗದಲ್ಲಿ ಹಾರಿ, ಹರಿದಶ್ವ (ಸೂರ್ಯ) ನ ಹತ್ತಿರಕ್ಕೆ ಬಂದೇಬಿಟ್ಟನು ಆಗ ಆ ಅಹಸ್ಕರನ ಹತ್ತಿರದಲ್ಲೇ ಅವನನ್ನು ಆಹಾರ ವಾಗಿ ಪರಿಗ್ರಹಿಸಲು ರಾಹುಗ್ರಹವು ಬಾಯಿ ತೆರೆದುಕೊಂಡು ಕೂತಿತ್ತು.

೨೯ ಸೂರ್ಯನನ್ನೇ ಭಕ್ಷ್ಯವೆಂದು ಭ್ರಮಿಸಿ ಭೋಜನಮಾಡಬೇಕೆಂದು ಬಂದ ಅಂಜನಾನಂದನನು ಅವನ ಬಳಿ ಕೂತಿದ್ದ ರಾಹುವನ್ನೇ ಫಲಹಾರಮಾಡಿಬಿಡ ಬೇಕೆಂದಾಲೋಚಿಸಿ ಸೂರ್ಯನ ತಂಟಗೇ ಹೋಗದೆ ರಾಹುವನ್ನು ತಿನ್ನಲು ಅವನ ಹತ್ತಿರ ಓಡಿಬಂದನು ಆಗ ಆ ರಾಹುವು ಆ ಆಂಜನೇಯನಿಗ ಅಂಜಿ, ಇಂದ್ರನ ಬಳಿ ಹೋಗಿ ಬದುಕಿನೆಂದು ಅಂಗಲಾಚಿ ಬೇಡಿಕೊಳ್ಳುತ್ತಾ ಅವನನ್ನು ಶರಣು ಹೊಂದಿದನು

೩೦ ಇಂದ್ರನ ಮರೆಹೊಂದಿದ ರಾಹುವನ್ನು ನೋಡಿ ಆ ಮಹಾಬಲಶಾಲಿ ಯಾದ ಬಾಲಾಂಜನೇಯನು, ತನಗೆ ಇನ್ನೂ ಹೆಚ್ಚಾಗಿ ತಿಂಡಿ ಸಿಕ್ಕಿತೆಂದು ಹಿಗ್ಗುತ್ತಾ ಆ ರಾಹುವನ್ನೂ, ಇಂದ್ರನನ್ನೂ, ಒಟ್ಟಿಗೆ ತಿಂದು ತೇಗಬೇಕೆಂದು ಅವರ ಹಿಂದ ಹೊರಟನು ಆಗ ಅಲ್ಲಿ ಪರ್ವತಾಕಾರದಂತೆ ನಿಂತಿದ್ದ ಐರಾವತವು ಕಣ್ಣಿಗೆ ಕಾಣಿಸಿತು.

**ಚಿಕ್ಷೇಪ ರಾಕ್ಷಸಶ್ರೇಷ್ಠಂ ಮತಂಗಸ್ಯಾಶ್ರಮಂ ಪ್ರತಿ ।**
**ಮತಂಗಸ್ಯಾಶ್ರಮಂ ದೃಷ್ಟ್ವಾ ರುಧಿರೇಣ ಸಮನ್ವಿತಂ ॥ ೨೪ ॥**

**ಶಶಾಪ ವಾಲಿನಂ ರೋಷಾತ್ತಸ್ಯಾಸ್ಮಿನ್ಮೇ ಮಹದ್ವನೇ ।**
**ಸದ್ಯಃ ಪ್ರವಿಷ್ಟಮಾತ್ರಸ್ಯ ಜೀವಿತಂ ನ ಭವಿಷ್ಯತಿ ॥ ೨೫ ॥**

**ಅಗಮ್ಯಂ ವಾಲಿನೋ ಜ್ಞಾತ್ವಾ ಮತಂಗಸ್ಯ ಮಹದ್ವನಂ ।**
**ಚತುರ್ಭಿಃ ಸಚಿವೈಃ ಸಾರ್ಧಂ ಸುಗ್ರೀವಸ್ತಮುಪಾಶ್ರಿತಃ ॥ ೨೬ ॥**

**ನಲೇನ ರಾಜನ್ನೀಲೇನ ತಾರೇಣ ಚ ಹನೂಮತಾ ।**
**ಹನೂಮಾನ್ಸಚಿವಸ್ತಸ್ಯ ದೇವಾನಾಮಪಿ ನಿರ್ಭಯಃ ॥ ೨೭ ॥**

---

೨೪ ಆ ಮಹಾಮೇರುಗಿರಿಯಂತಹ ದುಂದುಭಿಯ ದೇಹವು ವಾಲಿಯು ಹೆಬ್ಬೆಟ್ಟಿನಿಂದ ಚಿಮ್ಮಿದೊಡನೆ ಹಾರಿಹೋಗಿ ಮತಂಗಋಷಿಗಳ ಆಶ್ರಮಪ್ರವೇಶದಲ್ಲಿ ಬಿದ್ದು ಆ ದೇಹದಿಂದ ಹೊರಟ ರಕ್ತದಿಂದ ಆ ಋಷ್ಯಾಶ್ರಮವೆಲ್ಲಾ ನೆನೆದು ಹೋಗಿ ಬಿಟ್ಟಿತು.

೨೫ ತನ್ನಾಶ್ರಮವು ಶವದ ರಕ್ತದಿಂದ ಅಪರಿಶುದ್ಧವಾದುದನ್ನು ನೋಡಿ ಮತಂಗಋಷಿಗೆ ಬಹು ಸಿಟ್ಟು ಬಂದಿತು ಇದು ವಾಲಿಯು ಮಾಡಿದ ಚೇಷ್ಟೆಯೆಂದರಿತು, ವಾಲಿಗೆ ಆಗ ಒಂದು ಶಾಪವನ್ನು ಕೊಟ್ಟನು ಈ ಆಶ್ರಮಕ್ಕೆ ವಾಲಿಯು ಎಂದಾದರೂ ಹೆಜ್ಜೆಯಿಟ್ಟರೆ ಅವನ ಜೀವವೇ ಹಾರಿಹೋಗಲಿ (ಸಾಯಲಿ) ಇದೇ ಮತಂತನಿಂದ ವಾಲಿಗೆ ಬಂದ ಶಾಪವೃತ್ತಾಂತ

೨೬ ಹೀಗೆ ಶಾಪ ಬಂದ ವೃತ್ತಾಂತವು ಸುಗ್ರೀವನಿಗೆ ತಿಳಿದಿತ್ತು ಇದು ಸ್ಮರಣೆಗೆ ಬಂದಾಗ ಸುಗ್ರೀವನಿಗೆ ಬಹು ಧೈರ್ಯವುಂಟಾಗಿ, ಇಲ್ಲಿ ವಾಲಿಯ ಭಯವಿಲ್ಲವೆಂದು ನಿರ್ಧರಿಸಿ ತನ್ನ ನಾಲ್ಕು ಜನ ಮಂತ್ರಿಗಳೊಡನೆ ಆ ಮತಂಗಾಶ್ರಮಕ್ಕೆ ಪ್ರವೇಶಿಸಿದನು

೨೭. ಸುಗ್ರೀವನ ನಾಲ್ಕುಮಂದಿ ಮಂತ್ರಿಗಳಾರಾರೆಂದರೆ —ನಲ, ನೀಲ, ತಾರ, ಹನುಮಂತ ಈ ನಾಲ್ವರು ಸಚಿವರೊಳಗೆ ಹನುಮಂತನೇ ಮುಖ್ಯಾಮಾತ್ಯನಾಗಿದ್ದನು ಇವನಿಗೆ ಎಲ್ಲಾ ದೇವತೆಗಳೂ ತೃಣಗಣಾಯಮಾನರಾಗಿದ್ದರು

ಜಾತಮಾತ್ರಸ್ತು ರೋ ಬಾಲ್ಯೇ ವೀಕ್ಷ್ಯ ಸೂರ್ಯಂ ಖಮಾಪ್ಲುತಃ ।
ಭಕ್ಷ್ಯಾರ್ಥೀ ತಸ್ಯ ಪಾರ್ಶ್ವಸ್ಥಂ ರಾಹುಂ ದೃಷ್ಟ್ವಾ ನಿಶಾಚರಂ ॥ ೨೮ ॥

ಸೂರ್ಯಮುತ್ಸೃಜ್ಯ ಭಕ್ಷ್ಯಾರ್ಥೀ ತದಾ ರಾಹುಂ ಪ್ರದುದ್ರುವೇ ।
ರಾಹುರ್ಜಗಾಮ ಶರಣಂ ಭಯಾದ್ಭೀತಂ ಚ ವಾಸವಂ ॥ ೨೯ ॥

ತನ್ಯಾನು ಪ್ರಯಯಾವೇವ ಸ ತು ಬಾಲೋ ಮಹಾಬಲಃ ।
ಸ ದದರ್ಶ ಮಹಾಕಾಯಂ ತದಾ ಶಕ್ರಸ್ಯ ದಂತಿನಂ ॥ ೩೦ ॥

---

## ಆಂಜನೇಯನ ವಿಚಿತ್ರವಾದ ಚರಿತ್ರೆ.

೨೮　ಪ್ರಸಕ್ತಾನುಪ್ರಸಕ್ತಿಯಿಂದ ಈ ಹನುಮಂತನ ಚರಿತ್ರೆಯನ್ನು ಇಲ್ಲಿ ಸ್ವಲ್ಪವಾದರೂ ಬರೆದು ಮುಂದಿನ ವೃತ್ತಾಂತಕ್ಕೆ ತಿರುಗೋಣ --ಹನುಮಂತನು ಅಂಜನಾದೇವಿಯು ಹೊಟ್ಟೆಯಲ್ಲಿ ವಾಯುವಿನಿಂದ ಉತ್ಪನ್ನನಾದ ಮಹಾನುಭಾವ ನೆಂದು ಸಕಲರಿಗೂ ತಿಳಿದೇ ಇರಬಹುದು ಈ ಹನುಮಂತನು ಹುಟ್ಟಿದಾಗ ಸೂರ್ಯ ಗ್ರಹಣ ಕಾಲ ಸೂರ್ಯನು ಆಕಾಶದಲ್ಲಿ ಫಳ ಫಳನೆ ಹೊಳೆಯುತ್ತಿದ್ದದನ್ನು ನೋಡಿದ ಫಲ್ಗುಣಸ್ವಜನು, ಇದೊಂದು ಫಲಾಹಾರಕ್ಕರ್ಹವಾದ ಫಲವೆಂದು ಭಾವಿಸಿ ಆ ಫಲವನ್ನು ತಿನ್ನಬೇಕೆಂದು ಆಕಾಶಮಾರ್ಗದಲ್ಲಿ ಹಾರಿ, ಹರಿದಶ್ವ (ಸೂರ್ಯ) ನ ಹತ್ತಿರಕ್ಕೆ ಬಂದೇಬಿಟ್ಟನು ಆಗ ಆ ಅಹಸ್ಕರನ ಹತ್ತಿರದಲ್ಲೇ ಅವನನ್ನು ಆಹಾರ ವಾಗಿ ಪರಿಗ್ರಹಿಸಲು ರಾಹುಗ್ರಹವು ಬಾಯಿ ತೆರೆದುಕೊಂಡು ಕೂತಿತ್ತು.

೨೯　ಸೂರ್ಯನನ್ನೇ ಭಕ್ಷ್ಯವೆಂದು ಭ್ರಮಿಸಿ ಭೋಜನಮಾಡಬೇಕೆಂದು ಬಂದ ಅಂಜನಾನಂದನನು ಅವನ ಬಳಿ ಕೂತಿದ್ದ ರಾಹುವನ್ನೇ ಫಲಹಾರಮಾಡಿಬಿಡ ಬೇಕೆಂದಾಲೋಚಿಸಿ ಸೂರ್ಯನ ತಂಟಗೇ ಹೋಗದ ರಾಹುವನ್ನು ತಿನ್ನಲು ಅವನ ಹತ್ತಿರ ಓಡಿಬಂದನು ಆಗ ಆ ರಾಹುವು ಆ ಆಂಜನೇಯನಿಗ ಅಂಜಿ, ಇಂದ್ರನ ಬಳಿ ಹೋಗಿ ಬದುಕಿನಂದು ಅಂಗಲಾಚಿ ಬೇಡಿಕೊಳ್ಳುತ್ತಾ ಅವನನ್ನು ಶರಣು ಹೊಂದಿದನು

೩೦　ಇಂದ್ರನ ಮರೆಹೊಂದಿದ ರಾಹುವನ್ನು ನೋಡಿ ಆ ಮಹಾಬಲಶಾಲಿ ಯಾದ ಬಾಲಾಂಜನೇಯನು, ತನಗೆ ಇನ್ನೂ ಹೆಚ್ಚಾಗಿ ತಿಂಡಿ ಸಿಕ್ಕಿತೆಂದು ಹಿಗ್ಗುತ್ತಾ ಆ ರಾಹುವನ್ನೂ, ಇಂದ್ರನನ್ನೂ, ಒಟ್ಟಿಗೆ ತಿಂದು ತೇಗಬೇಕೆಂದು ಅವರ ಹಿಂದೆ ಹೊರಟನು ಆಗ ಅಲ್ಲಿ ಪರ್ವತಾಕಾರದಂತೆ ನಿಂತಿದ್ದ ಐರಾವತವು ಕಣ್ಣಿಗೆ ಕಾಣಿಸಿತು.

**ತಂ ಪ್ರದುದ್ರಾವ ಭಕ್ಷ್ಯಾರ್ಥೀ ಸಶಕ್ರಂ ಕುಂಜರೋತ್ತಮಂ ।**
**ಪ್ರಾಹರತ್ತ್ವರಯಾ ವಜ್ರಂ ತತಸ್ತಸ್ಯ ಸುರಾಧಿಪಃ ॥ ೩೧ ॥**

**ತಸ್ಯ ವಜ್ರಪ್ರಹಾರೇಣ ವಾಮೋ ಹನುರಭಜ್ಯತ ।**
**ಹನುಮಾನಿತಿ ತೇನಾಸ್ಯ ನಾಮ ಚಕ್ರೇ ಪಿತಾಮಹಃ ॥ ೩೨ ॥**

**ಕ್ರುದ್ಧಂ ಚ ಜಗತಾಂ ವಾಯುಂ ಸಾಂತ್ವಯಿತ್ವಾ ಪಿತಾಮಹಃ ।**
**ವರೇಣ ಛಂದಯಾಮಾಸ ಹನುಮಂತಂ ಮಹಾಬಲಂ ॥ ೩೩ ॥**

**ಸರ್ವೈರ್ದೇವಗಣೈಃ ಸಾರ್ಧಂ ಲೋಕಾನಾಂ ಹಿತಕಾಮ್ಯಯಾ ।**
**ಅಜರಾಮರತಾಂ ತಸ್ಯ ಅಜೇಯತ್ವಂ ತಥಾ ರಣೇ ॥ ೩೪ ॥**

---

೩೧ ಆಗಲೀಗ ಆಂಜನೇಯನು ಬಹಳವಾಗಿ ಹಿಗ್ಗಿಹೋದನು ಇಂದ್ರ, ರಾಹು, ಐರಾವತ ಈ ಮೂರನ್ನೂ ತಿಂದರೆ ಚೆನ್ನಾಗಿ ಹೊಟ್ಟೆ ತುಂಬುವುದೆಂದು ಅವರೆಲ್ಲರನ್ನೂ ಕಬಳಿಸಲು ಪ್ರಯತ್ನಿಸಿದನು. ಇನ್ನು ತಾವು ಉಳಿಯುವ ಸಂಭವ ವಿಲ್ಲವೆಂದು ಇಂದ್ರನಿಗೆ ತೋರಲು ತನ್ನ ವಜ್ರಾಯುಧದಿಂದ ಅವನನ್ನು ಚೆನ್ನಾಗಿ ಪ್ರಹಾರಮಾಡಿದನು

೩೨. ಆ ವಜ್ರಾಯುಧದ ಏಟು ಆಂಜನೇಯನ ಎಡಕೆನ್ನೆಗೆ ತಗುಲಿ, ಆ ಕೆನ್ನೆಗೆ ಬಲವಾಗಿ ಏಟು ಬಿದ್ದುದರಿಂದ ಆಂಜನೇಯನು ಬಿದ್ದುಹೋದನು ಆಗ ಬ್ರಹ್ಮನು ಬಂದು ಅವರವರಿಗೆ ರಾಜಿಮಾಡಿಸಿ ಕೆನ್ನೆಗೆ ಏಟು ತಿಂದ ಆಂಜನೇಯನಿಗೆ ಹನುಮಂತನೆಂದು ಹೆಸರನ್ನು ಕರೆದನು

೩೩ ಇಂದ್ರನು ತನ್ನ ಅರಿಯದ ಹಸುಳೆಯಾದ ಹನುಮನಿಗೆ ಹೊಡೆದು ದನ್ನು ನೋಡಿ, ವಾಯುವು ತನ್ನ ಹೊಟ್ಟೆಯುರಿಯನ್ನು ತಡೆಯಲಾರದೆ ಬಹಳ ಕೋಪದಿಂದ ಎಲ್ಲೋ ಹೋಗಿ ಓತುಕೊಂಡುಬಿಟ್ಟನು ಜಗತ್ಪ್ರಾಣನಾದ ಪ್ರಾಣ ದೇವರೇ ಇಲ್ಲದೇ ಹೋದ ಮೇಲೆ ಜಗತ್ತೆಲ್ಲಿ ಉಳಿದೀತು ? ಲೋಕವೆಲ್ಲಾ ಉಸಿರು ಕಟ್ಟಿಕೊಂಡು ಪ್ರಾಣಬಿಡುವಂತಾಯಿತು. ಆಗ ಬ್ರಹ್ಮನು ವಾಯುವನ್ನು ಕಂಡು ಹಿಡಿದು ಅವನನ್ನು ಸಮಾಧಾನಪಡಿಸಿ, ಅವನ ಮಗನಾದ ಬಹು ಬಲಶಾಲಿಯಾದ ಹನುಮಂತನಿಗೆ, ಸಕಲ ದೇವತೆಗಳೊಡನೆ ಕೂಡಿ ಇದರ ಕೆಳಗೆ ವಿವರಿಸುವಂತೆ ವರ ವನ್ನು ಕೊಟ್ಟನು.

೩೪. ನಿನಗೆ ಮುಪ್ಪೂ, ಮರಣವೂ ಎಂದೆಂದಿಗೂ ಸಂಭವಿಸದೇ ಇರಲಿ

**ಪ್ರದದುರ್ದೇವತಾಃ ಸರ್ವೇ ಬಲಂ ಚಾಪ್ರತಿಮಂ ತಥಾ ।**
**ಸ್ವಯಂ ಭಗವತಾ ತಸ್ಯ ಸೂರ್ಯೇಣ ಸುಮಹಾತ್ಮನಾ　　　　॥ ೩೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನಾನುಶಾಸನೇ**
**ಮಾಲಿರಾಕ್ಷಸವಧವರ್ಣನೋ ನಾಮ**
**ತ್ರಯೋವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.**

---

ನೀನು ರಣರಂಗದಲ್ಲಿ ಜಯಶಾಲಿಯಾಗಿರುತ್ತೀಯೆ ! ಹೀಗೆ ವರವನ್ನು ಕೊಟ್ಟ ಬಳಿಕ ಲೋಕದಲ್ಲಿ ವಾಯು ಸಂಚಾರವಾಗಿ ಎಲ್ಲರೂ ಬದುಕಿಕೊಂಡರು

೩೫　ಆಗ ಸಕಲ ದೇವತೆಗಳಿಂದೊಡಗೂಡಿ ಸೂರ್ಯನು ಹನುಮಂತನ ಹತ್ತಿರಕ್ಕೆ ಬಂದು, ನೀನು ಅಪ್ರತಿಮ ಬಲಶಾಲಿಯಾಗಿ ಬದುಕೆಂದು ವರವನ್ನು ಅನುಗ್ರಹಿಸಿದನು

ಟಿಪ್ಪಣಿ —ಬೊಂಬಾಯಿ ಶ್ರೀವೇಂಕಟೇಶ್ವರ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾಗಿರುವ ಸಂಸ್ಕೃತ ಮೂಲ ಪುಸ್ತಕದಲ್ಲಿ ಈ ೩೫ ನೇ ಶ್ಲೋಕವಾದ ಬಳಿಕ
.. 　　　ಈ ರೀತಿ ಚುಕ್ಕೆಗಳನ್ನು ಹಾಕಿ ಆ ಗ್ರಂಥದ ೧೪೨ನೇ ಪುಟದ ಕೊನೆಯಭಾಗದಲ್ಲಿ ಗೀಟೆಳೆದು ಈ ಮಾತನ್ನು ಬರೆದಿರುತ್ತಾರೆ —

**ಅತ್ರ ಪಾಠೋ ಭ್ರಷ್ಟ ಇತಿ ಪ್ರತೀಯತೇ**

ಅಂದರೆ, ಇಲ್ಲಿ ಕೆಲವು ಪಾಠವು ಬಿಟ್ಟು ಹೋಗಿರುವಂತೆ ತೋರುತ್ತದೆ, ಎಂದರ್ಥ.

ಹನುಮಂತನ ಕಥೆಯನ್ನು ಬರೆಯುತ್ತಾ ಬರೆಯುತ್ತಾ ಮುಂದಿನ ಕಥೆಯು ತ್ರಿಪುರಸಂಹಾರ ಕಥೆಯ ಕಡೆಗೆ ತಿರುಗಿ, ಈಶ್ವರನು ತ್ರಿಪುರಸಂಹಾರ ಕಾಲದಲ್ಲಿ

ಮೊದಲು ಮೊದಲು ಗಣಪತಿ ಪೂಜೆಯನ್ನು ಮಾಡಿ ಗಣಪತಿಯ ಸ್ತೋತ್ರಮಾಡುವ ವಿಚಾರಕ್ಕೆ ತಿರುಗಿಬಿಟ್ಟಿದೆ

ಹಿಂದಿನ ೨೨೨ ನೆಯ ಅಧ್ಯಾಯವು ಮುಗಿದ ಬಳಿಕ ಈಗ ಬರೆಯುತ್ತಿರುವ ೨೨೩ ನೆಯ ಅಧ್ಯಾಯದಲ್ಲಿ ೩೫ ಶ್ಲೋಕಗಳನ್ನು ಬರೆದು, ಇದರ ಮುಂದಕ್ಕೆ ೨೨೫ ನೆಯ ಅಧ್ಯಾಯದ ೧೨ ಶ್ಲೋಕಗಳನ್ನು ಮುಗಿಸಿ ಕಡೆಯಲ್ಲಿ ಇಲ್ಲಿಗೆ ಇನ್ನೂರಿಪ್ಪತ್ತೈದನೆಯ ಅಧ್ಯಾಯ ಮುಗಿಯಿತೆಂದು ಬರೆದಿರುವುದನ್ನು ನೋಡಿದರೆ, ೨೨೩ ನೆಯ ಅಧ್ಯಾಯದ ಕೆಲವು ಭಾಗವೂ, ೨೨೪ನೆಯ ಅಧ್ಯಾಯ ಪೂರ್ತಿಯಾಗಿಯೂ ಸಿಕ್ಕಿಲ್ಲವೆಂದು ಇದರಿಂದ ಗೊತ್ತಾಗುತ್ತದೆ

ಬೊಂಬಾಯಿ ಆಧಿಪತ್ಯದಲ್ಲಿ ಮಹಾ ಮಹಾ ಪ್ರಚಂಡ ಪಂಡಿತರು ತುಂಬಿ ತುಳುಕಾಡುತ್ತಲಿದ್ದಾರೆ ಕಾಶಿಯಲ್ಲಿ ಸಿಂಹದಂತಹ ಪಂಡಿತರಿದ್ದಾರೆ ಇವರಲ್ಲಿ ಯಾರಿಂದಲಾದರೂ ಸಂದರ್ಭಕ್ಕೆ ತಕ್ಕಂತೆ ಏನಾದರೊಂದು ವಿಚಾರವನ್ನು ಬರೆಸಿ ಬಿಟ್ಟು ಹೋಗಿರುವ ಅಧ್ಯಾಯಗಳನ್ನು ಬರೆಸಬಹುದಾಗಿತ್ತು. ಹಾಗೆ ಮಾಡದೆ ಇದ್ದ ಸಂಗತಿಯನ್ನು ಮೂಲ ಗ್ರಂಥಶೋಧಕರು ಹಾಗೆಯೇಬರೆದು ಬಿಟ್ಟಿದ್ದಾರೆ "ರವಿ ಕಾಣದುದನ್ನು ಕವಿ ಕಂಡನೆಂಬ ಗಾದೆಯನ್ನನುಸರಿಸಿ" ಈಭಾಗದಲ್ಲಿ ಏನಾದರೊಂದು ಕಥೆಯನ್ನು ಕಥಾಸಂದರ್ಭಕ್ಕೆ ತಕ್ಕಂತೆ ಹೊಂದಿಸಿ ಬರೆಯೋಣವೆಂದು ಬಹಳಹೊತ್ತು ಯೋಚನೆಮಾಡಿದೆವಾದರೂ, ಹೀಗೆ ಮಾಡುವುದು ಅಪರಾಧವೆಂದು ತೋರಿದುದರಿಂದ ಮೂಲಗ್ರಂಥದಲ್ಲಿರುವಂತೆ ಆ ಸಂದರ್ಭವನ್ನನುಸರಿಸಿಯೇ ಈಶ್ವರನು ಮಾಡಿದಂತೆ ಮುಂದೆ ಗಣಪತಿಸ್ತೋತ್ರಕ್ಕೆ ಆರಂಭಿಸುತ್ತೇವೆ

ಗೋಬ್ರಾಹ್ಮಣೇಭ್ಯಶ್ಶುಭಮಸ್ತು ನಿತ್ಯಂ ।
ಲೋಕಾಸ್ಸಮಸ್ತಾ ಸ್ಸುಖಿನೋಭವಂತು ।
ಸರ್ವೇಜನಾಸ್ಸುಖಿನೋಭವಂತು ॥



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಪಂಚವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ॥

ವಿನಾಯಕಂ ತು ತುಷ್ಟಾವ ತತಃ ಶಂಭುಸ್ತ್ರಿಲೋಕಧೃಕ್ ।
ಪುರಾಣಾಂ ಸಂಗಮಾರ್ಥಾಯ ಅವಿಘ್ನೇನೇತಿ ಮಾನದ ॥ ೧ ॥

---

### ಇನ್ನೂರ ಇಪ್ಪತ್ತೈದನೆಯ ಅಧ್ಯಾಯವು
### ತ್ರಿಪುರ ಸಂಹಾರದ ಕಥೆ

೧ ಪೂರ್ವದಲ್ಲಿ ತ್ರಿಪುರರೆಂಬ ಹೆಸರಿನ ಮೂರು ಮಂದಿ ರಾಕ್ಷಸರು ಲೋಕ ಹಿಂಸಕರಾಗಿ ಬೇರೆ ಬೇರೆ ಕಡೆಗಳಲ್ಲಿ ಸಂಚರಿಸುತ್ತಿದ್ದರು ಅವರು ಮೂವರೂ ಒಂದು ಕಡೆ ಯಾವಾಗ ಸೇರುವರೋ ಆಗ ಅವರಿಗೆ ಮರಣವುಂಟಾಗಲೆಂದು ಬ್ರಹ್ಮನ ಶಾಸನವಿದ್ದುದರಿಂದ, ಅವರು ಬೇರೆ ಬೇರೆಯಾಗಿಯೇ ಸಂಚರಿಸುತ್ತಿದ್ದರು. ಹೀಗಿರುವಲ್ಲಿ ಇವರ ಉಪಟಲವು ಹೆಚ್ಚಾಗಲು ದೇವತೆಗಳು ವಿಷ್ಣುವಿನ ಬಳಿಗೆ ಹೋಗಿ ಶರಣಾಗತರಾದರು ಆಗ ಆ ಮಹಾವಿಷ್ಣುವು ದೇವತೆಗಳಿಗೆ ಇಂತು ಹೇಳಿದನು.—ನೀವು ಈಶ್ವರನನ್ನು ಪ್ರಾರ್ಥಿಸಿರಿ ಆ ಮೂವರೂ ಒಂದು ಕಡೆ ಸೇರಿದ ಕಾಲದಲ್ಲಿ ಅವನು ಬಾಣವನ್ನು ಬಿಡಲಿ ನಾನು ಅವನ ಬಾಣದಲ್ಲಿ ನಿಂತು ತ್ರಿಪುರಾಸುರನನ್ನು ಸಂಹರಿಸುತ್ತೇನೆಂದು ಹೇಳಲು, ಅದರಂತೆ ದೇವತೆಗಳು ಈಶ್ವರನನ್ನು ಪ್ರಾರ್ಥಿಸಿದರು ಅವರ ಮಾತಿನಂತೆ ಈಶ್ವರನು ತ್ರಿಪುರರನ್ನು ಒಟ್ಟುಗೂಡಿಸುವಂತೆ ಸರ್ವವಿಘ್ನಪರಿಹಾರಕನಾದ ವಿನಾಯಕನನ್ನು ಪ್ರಾರ್ಥಿಸಿ ಅವನನ್ನು ಸ್ತೋತ್ರಮಾಡಿದನು.

ತ್ರಿಲೋಕಧರನಾದ ಶಂಭುವು ಆ ಮೂವರಿಗೂ ಅಜ್ಞಾನವನ್ನು ತಂದೊಡ್ಡಿ ಒಂದು ಕಡೆ ಆ ತ್ರಿಪುರರೂ ಸಂಗಮವಾಗುವಂತೆ ಮಾಡಬೇಕೆಂದು ವಿಘ್ನೇಶ್ವರನನ್ನಿಂತು ಸ್ತುತಿಗೈದನು.

॥ ಶಂಕರ ಉವಾಚ ॥

ನಮಸ್ಯಾಮಿ ಮಹಾಬಾಹುಂ ದೇವದೇವಂ ಗಣೇಶ್ವರಂ ।
ಹಸ್ತಿವಕ್ತ್ರಂ ಮಹಾಕಾಯಂ ವ್ಯಾಘ್ರಚರ್ಮಾಂಬರಚ್ಛದಂ ॥ ೨ ॥

ಚಂದ್ರರಶ್ಮಿಪ್ರತೀಕಾಶಂ ಚಾರುದಂಷ್ಟ್ರೋಜ್ಜ್ವಲಾನನಂ ।
ಭಕ್ತಾನಾಂ ವಿಘ್ನಶಮನಂ ಸುರಾದ್ಯಂ ಪಾರ್ವತೀಸುತಂ ॥ ೩ ॥

ಪರಶ್ವಧಧರಂ ವೀರಮಕ್ಷಮಾಲಾ ವಿಭೂಷಿತಂ ।
ಬ್ರಹ್ಮಣ್ಯಂ ವರದಂ ಸೌಮ್ಯಂ ವಿಘ್ನಾನಾಂ ಪತಿಮೂರ್ಜಿತಂ ॥ ೪ ॥

ಪೀನಾಸ್ಯಂ ಲಂಬಜಠರಂ ಹಾರಭಾರಾರ್ಪಿತೋದರಂ ।
ಅಷ್ಟಮೀ ಚ ಚತುರ್ಥೀ ಚ ವೃತಾ ಯೇನ ಚತುರ್ದಶೀ ॥ ೫ ॥

---

೨ ಈಶ್ವರನು ಹೇಳುತ್ತಾನೆ —ಮಹಾಬಲಶಾಲಿಯೂ, ದೇವದೇವೋತ್ತಮನೂ ಗಜಮುಖನೂ, ಮಹಾಕಾಯನೂ, ವ್ಯಾಘ್ರಚರ್ಮಾಂಬರವನ್ನು ಹೊದ್ದಿರುವವನೂ, ಆದ ಎಲೈ ಗಣನಾಯಕನೇ, ನಿನಗೆ ನಮಸ್ಕಾರ.

೩. ಚಂದ್ರರಶ್ಮಿಯಂತೆ ಹೊಳೆಯುತ್ತಿರುವ ಕೊಂಬುಗಳನ್ನು ಧರಿಸಿರುವ ಎಲೈ ಗಜಮುಖನೇ ! ನೀನು ಪಾರ್ವತೀ ಸುತನಾಗಿದ್ದರೂ, ನೀನು ದೇವತೆಗಳಿಗೆಲ್ಲರಿಗಿಂತ ಶ್ರೇಷ್ಠನಾದುದರಿಂದ ನನ್ನ ಮಗನಾದರೂ ನಿನ್ನನ್ನು ನಾನು ಭಕ್ತಿಯಿಂದ ಭಜಿಸುತ್ತೇನೆ

೪ ನೀನು ಕೈಯಲ್ಲಿ ಪಿಚ್ಚುಕೊಡಲಿಯನ್ನು ಹಿಡಿದು, ಕಂಠದಲ್ಲಿ ಅಕ್ಷಮಾಲೆಗಳನ್ನು ಧರಿಸಿರುತ್ತೀಯೆ ನೀನು ಸಮಸ್ತ ವಿಘ್ನಗಳಿಗೂ ರಾಜನಾಗಿದ್ದೀಯೆ. ಬ್ರಹ್ಮಣ್ಯನೂ, ವರದನೂ, ಸೌಮ್ಯನೂ ಆದ ನಿನ್ನನ್ನು ನಾನು ಸೋತ್ರಮಾಡುತ್ತೇನೆ.

೫ ಉದ್ದವಾದ ಸೊಂಡಿಲುಳ್ಳ, ಜೋಲಾಡುತ್ತಿರುವ ಹೊಟ್ಟೆಯುಳ್ಳ, ಹೊಟ್ಟೆಯ ಮೇಲೆಲ್ಲಾ ಹಾರದ ಹೊರೆಯನ್ನು ಹೇರಿಕೊಂಡಿರುವ, ಅಷ್ಟಮೀ, ಚತುರ್ಥೀ, ಚತುರ್ದಶೀ ದಿವಸಗಳಲ್ಲಿ ಪೂಜೆಮಾಡಿಸಿಕೊಳ್ಳಲಾಶೆಯುಳ್ಳಗಣಪತಿಯೇ! ನಿನಗೆ ನಮಸ್ಕಾರ.

ಕುಲ್ಮಾಷೋತ್ಕೋಲಪಿಕಾಪೂಪೈರ್ಮೋದಕೈರೋದನೇನ ಚ ।
ಪೂಜಯಂತಿ ಜನಾ ಲೋಕೇ ಧೂಪಮಾಲ್ಯಾನುಲೇಪನೈಃ　　　॥ ೬ ॥

ಸ್ವಸ್ತಿವಾಚನಕೈಶ್ಚೈವ ತೇಷಾಂ ನಾಸ್ತೀಹ ದುರ್ಲಭಂ ।
ಪುತ್ರಾರ್ಥೀ ಲಭತೇ ಪುತ್ರಾನ್ ಧನಾರ್ಥೀ ಧನಮುತ್ತಮಂ　　　॥ ೭ ॥

ವ್ಯಾಧಿತಶ್ಚ ತಥಾಽಽರೋಗ್ಯಂ ಬದ್ಧೋ ಮುಚ್ಯೇತ ಬಂಧನಾತ್ ।
ತ್ವಾಂ ತು ಸಂಪೂಜಯಿತ್ವಾ ವೈ ವರದಂ ಕಾಮರೂಪಿಣಂ　　　॥ ೮ ॥

ಇಷ್ಟಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಯಶ್ಚಾಧೀತೇ ಸ್ತವಮಿದಂ ತವ ನಿತ್ಯಂ ಗಣೇಶ್ವರ　　　॥ ೯ ॥

ತಸ್ಯಾಪಿ ಸರ್ವಕಾಮಾನಾಂ ಸದಾ ದಾತಾ ಭವಿಷ್ಯಸಿ ।
॥ ನಾರಾಯಣ ಉವಾಚ ॥
ಇತ್ಯೇವಂ ಸಂಸ್ತುತಃ ಶ್ರೀಮಾನ್ ಶಂಕರೇಣ ವಿನಾಯಕಃ　　　॥ ೧೦ ॥

---

೬ ಎಲೈ ಮಹಾನುಭಾವನಾದ ಗಜಾನನನೇ! ನಿನ್ನನ್ನು ಯಾರು ಯಾವಾಗಲೂ ಆಸನಾವಾಹನಾದಿಗಳಿಂದಲೂ, ಗಂಧಪುಷ್ಪಾಕ್ಷತೆಗಳಿಂದಲೂ ಪೂಜಿಸಿ ಅನ್ನ, ಕಡುಬು, ಹಲಸಂದೆಯ ಆಂಬೊಡೆಗಳನ್ನು ನಿವೇದನ ಮಾಡಿ ಧೂಪದೀಪಾದಿಗಳನ್ನರ್ಪಿಸುವರೋ ಅವರಿಗೆ ನೀನು ಪ್ರಸನ್ನನಾಗುತ್ತೀಯೆ

೭ ನಿನ್ನ ಮುಂದೆ ಕುಳಿತು ಯಾರು ಸ್ವಸ್ತಿವಾಚನವನ್ನು ಮಾಡುತ್ತಾರೋ ಅಂತಹ ಮಹನೀಯರಿಗೆ ದುರ್ಲಭವಾದುದಾವುದೂ ಇರುವುದಿಲ್ಲ ನಿನ್ನನ್ನು ಯಾರು ಭಕ್ತಿಯಿಂದ ಪೂಜಿಸುವರೋ ಅವರು ಕೇಳಿಕೊಂಡ ಇಷ್ಟಾರ್ಥಗಳನ್ನೆಲ್ಲಾ ನೀನು ಕೊಡತಕ್ಕವನಾಗಿದೀಯೆ

೮ ಖಾಯಿಲೆ ಇದ್ದ ಮನುಷ್ಯನು ನಿನ್ನನ್ನು ಪೂಜಿಸಿದರೆ ಆರೋಗ್ಯವಂತನಾಗುತ್ತಾನೆ ಬಂಧನದಲ್ಲಿದ್ದವನು ಬಂಧನದಿಂದ ಬಿಡುಗಡೆ ಹೊಂದುತ್ತಾನೆ ನೀನು ಕಾಮರೂಪಿಯೂ ಇಷ್ಟಾರ್ಥಪ್ರದನೂ ಆಗಿದ್ದೀಯೆ.

೯. ಈಗ ಹೇಳಿರುವಂತೆ ಯಾರು ನಿತ್ಯವೂ ನಿನ್ನನ್ನು ಸ್ತೋತ್ರಮಾಡುವರೋ, ಯಾರು ಈ ಸ್ತುತಿಯನ್ನು ಪಾರಾಯಣ ಮಾಡುವರೋ ಅವರು ತಮ್ಮ ಇಷ್ಟಾರ್ಥಗಳನ್ನೆಲ್ಲಾ ಸಂದೇಹವಿಲ್ಲದೆ ಹೊಂದುತ್ತಾರೆ

೧೦ ನೀನು ಸಕಲ ಕಾಮನೆಗಳನ್ನೂ ಕರುಣಿಸುವ ಶಕ್ತಿಯುಳ್ಳ ಮಹಾನು

ಏಕಸ್ಥಾನಗತಂ ಚಕ್ರೇ ವಿನಾ ವಿಘ್ನಂ ಪುರತ್ರಯಂ।
ಏಕಸ್ಥಂ ತ್ರಿಪುರಂ ವಿಷ್ಣುಃ ಶರಾಗ್ರಸ್ಥೋ ಧನುಷ್ಮತಃ।
ಶಂಕರಪ್ರೇರಿತಃ ಶೀಘ್ರಂ ತದಾ ಚಕ್ರೇ ಸ ಭಸ್ಮಸಾತ್ ॥ ೧೧ ॥

ಪುರತ್ರಯೋ ದೇವವರೇಣ ತೇನ
ವಿನಿರ್ಮಿತೇಽಭೂಜ್ಜಗತಾಂ ಪ್ರಹರ್ಷಃ।
ಜಗ್ಮುಸ್ತದಾ ದೇವಗಣಾಃ ಪ್ರಹೃಷ್ಟಾಃ
ಸ್ಥಾನಾನಿ ರಾಜೇಂದ್ರ ತಥಾ ಸ್ವಕಾನಿ ॥ ೧೨ ।

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಶೈಲೂಷಂ ಪ್ರತಿ
ನಾಡಾಯನವಾಕ್ಯೇ ತ್ರಿಪುರದಾಹವರ್ಣನೋನಾಮ
ಪಂಚವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.

---

ಭಾವನು! ಹೀಗೆಂದು ಶೈಲೂಷನನ್ನು ಕುರಿತು ನಾಡಾಯನ ಋಷಿಗಳು ಹೇಳುತ್ತಾ ತ್ರಿಪುರಾಸುರರ ವೃತ್ತಾಂತವನ್ನು ಮುಂಬರಿಸಿದರು

೧೧ ಕೇಳೈ! ಶೈಲೂಷನೆ! ಯಾವಾಗ ಈರೀತಿ ಶಂಕರನು ಗಣಪತಿಯನ್ನು ಕುರಿತು ಸ್ತೋತ್ರಮಾಡಿದನೋ, ಆ ಕೂಡಲೆ ಆ ವಿನಾಯಕನು ಆ ತ್ರಿಪುರರಿಗೆ ಮಂಕುಬೂದಿಯನ್ನೆರಚಿ ಮೂವರೂ ಒಂದೇಕಡೆ ಸೇರುವಂತೆ ಮಾಡಿದನು ಆ ಸಂದರ್ಭವನ್ನು ನೋಡಿ ಆ ಕೂಡಲೆ ಈಶ್ವರನು ತನ್ನ ಶೈವಧನುಸ್ಸಿನಲ್ಲಿ ವೈಷ್ಣವಾಸ್ತ್ರವನ್ನು ಹೂಡಿ ಅವರ ಮೇಲೆ ಪ್ರಯೋಗಿಸಿದನು ಆ ಕೂಡಲೆ ಆ ಬಾಣದಲ್ಲಿ ಮಹಾವಿಷ್ಣುವು ತನ್ನ ತೇಜೋಜ್ವಾಲೆಯನ್ನು ಅಡಗಿಸಿಟ್ಟು ಆ ಜ್ವಾಲೆಯಿಂದ ಆ ತ್ರಿಪುರರನ್ನೂ ಸುಟ್ಟು ಬೂದಿಮಾಡಿ ಲೋಕವನ್ನುದ್ಧರಿಸಿದನು

೧೨ ಯಾವಾಗ ತ್ರಿಪುರರು ಸಂಹೃತರಾದರೋ ಆ ಕೂಡಲೇ ದೇವತೆಗಳು ಬಹು ಸಂತೋಷಪಡುತ್ತಾ ತಮ್ಮ ತಮ್ಮ ಸ್ಥಾನಗಳಿಗೆ ಹೋಗಿ ಸೇರಿಕೊಂಡರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಶೈಲೂಷನನ್ನು ಕುರಿತು ನಾಡಾಯನರು
ಹೇಳುವ ಮಾತಿನ ಸಂದರ್ಭದಲ್ಲಿ ತ್ರಿಪುರಾಸುರ ಸಂಹಾರ
ವರ್ಣನೆಯೆಂಬ ಹೆಸರಿನ ಇನ್ನೂರಿಪ್ಪತ್ತೈದನೆಯ
ಅಧ್ಯಾಯವು ಮುಗಿದುದು

## ಶ್ರೀಃ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಟ್ತ್ರಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

ತಸ್ಯೈವ ದೇವದೇವಸ್ಯ ಶೃಣು ಕರ್ಮೋದಮುತ್ತಮಂ ।
ಆಸೀದ್ದೈತ್ಯೋಽಂಧಕೋ ನಾಮ ಭಿನ್ನಾಂಜನಚಯೋಪಮಃ ॥ ೧ ॥

ತಪಸಾ ಮಹತಾ ಯುಕ್ತಸ್ತ್ವವಧ್ಯಶ್ಚ ದಿವೌಕಸಾಂ ।
ಸ ಕದಾಚಿನ್ಮಹಾದೇವಂ ಪಾರ್ವತ್ಯಾ ಸಹಿತಂ ಪ್ರಭುಂ ॥ ೨ ॥

ಕ್ರೀಡಮಾನಂ ತದಾ ದೃಷ್ಟ್ವಾ ಹರ್ತುಂ ದೇವೀಂ ಪ್ರಚಕ್ರಮೇ ।
ತಸ್ಯ ಯುದ್ಧಂ ತದಾ ಘೋರಮಭವತ್ಸಹ ಶಂಭುನಾ ॥ ೩ ॥

### ಇನ್ನೂರ ಇಪ್ಪತ್ತಾರನೆಯ ಅಧ್ಯಾಯವು.

೧. ನಾರಾಯಣರು ಶೈಲೂಷನನ್ನು ಕುರಿತು ಹೇಳುತ್ತಾರೆ —ಶೈಲೂಷನೇ ಕೇಳು. ಪರಮೇಶ್ವರನು ಇನ್ನೂ ಏನೇನು ಕಾರ್ಯಗಳನ್ನು ಮಾಡಿನೆಂಬುದನ್ನು ನಿನಗೆ ತಿಳಿಸುತ್ತೇನೆ ಒಬ್ಬಾನೊಬ್ಬ ಅಂಧಕಾಸುರನೆಂಬ ರಾಕ್ಷಸನಿದ್ದನು ಅವನನ್ನು ನೋಡಿದರೆ ಕಾಡಿಗೆಯ ಬೆಟ್ಟವೇ ನಿಂತಿದೆಯೋ ಎಂಬಂತೆ ಕಾಣುತ್ತಿದ್ದಿತು.

೨ ಆ ಅಂಧಕನು ಬ್ರಹ್ಮನನ್ನು ಕುರಿತು ತಪಸ್ಸನ್ನಾಡಿ ದೇವತೆಗಳಿಂದಲೂ ಮರಣವಾಗಬಾರದೆಂದು ವರವನ್ನು ಪಡೆದುಕೊಂಡನು

೩. ಈರೀತಿ ವರವನ್ನು ಪಡೆದಬಳಿಕ ಆ ಅಂಧಕಾಸುರನು ಕೈಲಾಸಕ್ಕೆ ಹೋದನು ಅಲ್ಲಿ ಈಶ್ವರನೂ ಪಾರ್ವತಿಯೂ ಆನಂದವಾಗಿ ವಿಹರಿಸುತ್ತಿದ್ದುದನ್ನು ನೋಡಿ ಆ ಪಾರ್ವತಿಯನ್ನು ಅಪಹರಿಸಿಕೊಂಡು ಹೋಗಬೇಕೆಂದು ಪ್ರಯತ್ನಮಾಡಿದನು ಆಗ ಈಶ್ವರನಿಗೂ ಅಂಧಕಾಸುರನಿಗೂ ಘೋರವಾದ ಯುದ್ಧಕ್ಕೆ ಆರಂಭವಾಯಿತು

ರುದ್ರವರ್ಣವಿನಿರ್ಭೇದೇ ರುಧಿರಾದಂಧಕಸ್ಯ ತು ।
ಅಂಧಕಾಶ್ಚ ಸಮುತ್ಪನ್ನಾ ಶತಶೋಥ ಸಹಸ್ರಶಃ ॥ ೪ ॥
ತೇಷಾಂ ಚ ದಾರ್ಯಮಾಣಾನಾಂ ರುಧಿರಾದಪರೇ ಪುನಃ । ॥ ೫ ॥

ಬಭೂವುರಂಧಕಾ ಘೋರಾ ಯೈರ್ವ್ಯಾಪ್ತಮಖಿಲಂ ಜಗತ್ ।
ಏವಂ ಮಾಯಾವಿನಂ ದೃಷ್ಟ್ವಾ ದೇವದೇವಸ್ತದಾಂಧಕಂ ॥ ೬ ॥

ಪಾನಾರ್ಥಮಂಧಕಾಸ್ರಸ್ಯ ಸಸೃಜೇ ಮಾತರಸ್ತಥಾ ।
ಮಾಹೇಶ್ವರೀಂ ತಥಾ ಬ್ರಾಹ್ಮೀಂ ಕೌಬೇರೀಂ ಚಾನಲೀಂ ತಥಾ ॥ ೭ ॥

ಸೌಪರ್ಣೀಮಥ ವಾಯವ್ಯಾಂ ಶಾಕ್ರೀಂ ವೈ ನೈರ್ಋತೀಂ ತಥಾ
ಸೌರೀಂ ಸೌಮ್ಯಾಂ ಶಿವಾಂ ದೂತೀಂ ಚಾಮುಂಡಾಮಥ ವಾರುಣೀಂ ॥ ೮ ॥

ವಾರಾಹೀಂ ನಾರಸಿಂಹೀಂ ಚ ವೈಷ್ಣವೀಂ ಚ ಲಲತ್ಶಿಖಾಂ ।
ಶತಾನಂದಾಂ ಭಗಾನಂದಾಂ ಪಿಚ್ಛಿಲಾಂ ಭಗಮಾಲಿನೀಂ ॥ ೯ ॥

---

೪ ಈಶ್ವರನು ಆ ಅಂಧಕಾಸುರನ ಮೇಲೆ ಬಾಣ ಪ್ರಯೋಗಮಾಡಿದೊಡ ನೆಯೇ, ಆ ಬಾಣವು ಅವನ ಮೈಗೆ ತಗಲಿ ಅವನ ದೇಹದಿಂದ ರಕ್ತವು ಈಚೆಗೆ ಹೊರ ಟಿತು. ರಕ್ತಸ್ರಾವ ಹೊರಬೀಳುತನೆಯೇ ಆ ರಕ್ತಬಿಂದುಗಳಿಂದ ಅದೇ ಅಂಧಕ ನಂತೆ ರೂಪವುಳ್ಳ ನೂರಾರು ಸಾವಿರಾರು ಮಂದಿ ಅಂಧಕರು ಉತ್ಪನ್ನರಾದರು

೫ ಈಶ್ವರನು ಆ ರಾಕ್ಷಸರ ಗುಂಪಿನ ಮೇಲೆಲ್ಲಾ ಬಾಣಪ್ರಯೋಗ ಮಾಡುತ್ತಾ ಮಾಡುತ್ತಾ, ಅವರೆಲ್ಲರ ದೇಹಗಳಿಂದ ರಕ್ತವು ಸೋರುತ್ತಾ ಸೋರುತ್ತಾ ಎಣಿಸಲಾರದಷ್ಟು ಜನ ಅಂಧಕರು ಹುಟ್ಟುತ್ತಾ ಹುಟ್ಟುತ್ತಾ ಬಂದು ಪ್ರಪಂಚವಾದ ಪ್ರಪಂಚವೆಲ್ಲವೂ ಬರೀ ಅಂಧಕಾಸುರರ ಮಯವಾಗಿ ಹೋಯಿತು

೬. ಈ ಮೇರೆ ಆ ಮಾಯಾವಿಯಾದ ಅಂಧಕಾಸುರನು ಮಾಡುತ್ತಿರುವ ಯುದ್ಧವನ್ನು ನೋಡಿ ಪರಮೇಶ್ವರನು ಚಿಂತಾಕ್ರಾಂತನಾಗಿ ಆ ರಾಕ್ಷಸರ ರಕ್ತವನ್ನು ಹೀರುವುದಕ್ಕಾಗಿ ಕೆಲವು ಮಾತೃಗ್ರಹಗಳನ್ನು ಕೂಡಲೇ ನಿರ್ಮಿಸಿದನು

೭-೨೬ ಆ ಮಾತೃಕೆಯರ ಹೆಸರನ್ನು ಇಲ್ಲಿ ತಿಳಿಸುತ್ತೇವೆ!—ಮಾಹೇಶ್ವರೀ,

ಬಲಾಮತಿಬಲಾಂ ರಕ್ತಾಂ ಸುರಭೀಂ ಮುಖಮುಂಡಿಕಾಂ ।
ಮಾತೃನಂದಾಂ ಸುನಂದಾಂ ಚ ಬಿಡಾಲೀಂ ಶಾಕುನೀಂ ತಥಾ　॥ ೧೦ ॥

ರೇವತೀಂ ಚ ಮಹಾರಕ್ತಾಂ ತಥೈವ ಪಿಲಿಪಿಚ್ಛಕಾಂ ।
ಜಯಾಂ ಚ ವಿಜಯಾಂ ಚೈವ ಜಯಂತೀಂ ಚಾಪರಾಜಿತಾಂ　॥ ೧೧ ॥

ಕಾಲೀಂ ಚೈವ ಮಹಾಕಾಲೀಂ ಕಾಲದೂತೀಂ ತಥೈವ ಚ ।
ಸುಭಗಾಂ ದುರ್ಭಗಾಂ ಚೈವ ಕರಾಲೀಂ ದೇಹನೀಂ ತಥಾ　॥ ೧೨ ॥

ಅದಿತಿಂ ಚ ದಿತಿಂ ಚೈವ ಮಾಲಿನೀಂ ಮೃತ್ಯುಮೇವ ಚ ।
ಕರ್ಣಮೋಟೀಂ ತಥಾ ಯಾಮ್ಯಾಂ ಉಲೂಕೀಂ ಚ ಘಟೋದರೀಂ ॥

ಕಪಾಲೀಂ ವಜ್ರಹಸ್ತಾಂ ಚ ಪಿಶಾಚೀಂ ರಾಕ್ಷಸೀಂ ತಥಾ ।
ಭುರುಂಡೀಂ ಹಾಂಕರೀಂ ಚಂಡಾಂ ಶ್ವಾನಾಂ ಚ ಕಟಕೀಂ ತಥಾ　॥ ೧೪ ॥

ಘಂಟಾಂ ಸುಲೋಚನಾಂ ಧೂಮ್ರಾಮೇಕವಾಲೀಂ ಕಪಾಲಿನೀಂ ।
ವಿಶಾಲಾಂ ದ್ರಷ್ಟಿಕಾಂ ಶ್ಯಾಮಾಂ ತ್ರಿಜಟೀಂ ಕುಕುಹೂಂ ತಥಾ　॥ ೧೫ ॥

---

ಬ್ರಾಹ್ಮೀ, ಕೌಬೇರೀ, ಆನಲೀ, ಸೌಪರ್ಣೀ, ವಾಯವ್ಯಾ, ಶಾಕ್ರೀ, ನೈಋತೀ ಸೌಮ್ಯಾ, ಶಿವಾ, ದೂತೀ, ಚಾಮುಂಡಾ, ವಾರುಣೀ, ವಾರಾಹೀ, ನಾರಸಿಂಹೀ, ವೈಷ್ಣವೀ ಲಲತ್ಜಿಕಾ, ಶತಾನಂದಾ, ಭಗಾನಂದಾ, ಪಿಚ್ಛಿಲಾ, ಭಗಮಾಲಿನೀ, ಬಲಾ, ಅತಿಬಲಾ ರಕ್ತಾ, ಸುರಭೀ, ಮುಖಮುಂಡಿಕಾ, ಮಾತೃನಂದಾ, ಸುನಂದಾ, ಬಿಡಾಲೀ ಶಾಕುನೀ, ರೇವತೀ, ಮಹಾರಕ್ತಾ, ಪಿಲಿಪಿಚ್ಛಿಕಾ, ಜಯಾ, ವಿಜಯಾ, ಜಯಂತೀ, ಅಪರಾಜಿತಾ ಕಾಳೀ, ಮಹಾಕಾಳೀ, ಕಾಲದೂತಿ, ಸುಭಗಾ, ದುರ್ಭಗಾ, ಕರಾಳೀ, ದೇಹನೀ, ಅದಿತಿ, ದಿತಿ, ಮಾಲಿನೀ, ಮೃತ್ಯು, ಕರ್ಣಮೋಟೀ, ಯಾಮ್ಯಾ, ಉಲೂಕೀ, ಘಟೋದರೀ, ಕಪಾಲಿ,ವಜ್ರಹಸ್ತಾ, ಪಿಶಾಚೀ, ರಾಕ್ಷಸೀ, ಭುರುಂಡೀ, ಹಾಂಕಾರೀ, ಚಂಡಿ, ಶೈವಾ, ಕಟಕೀ, ಘಂಟಾ, ಸುಲೋಚನಾ, ಧೂಮ್ರಾ, ಏಕವಾಲೀ,, ಕಪಾಲಿನೀ, ವಿಶಾಲಾ, ದ್ರಷ್ಟಿಕಾ, ಶ್ಯಾಮಾ, ತ್ರಿಜಟೀ, ಕುಕುಹೂ, ವಿನಾಯಕೀ, ವೇತಾಳೀ, ಉನ್ಮತ್ತಾ, ಶುಭನಾ, ಸಿದ್ಧಿ, ಲೇಲಿಹಾನಾ, ಕೇಕರಾ, ಗರ್ದಭೀ, ತರ್ಕಟೀ, ಬಹುಪುತ್ರಾ, ಪ್ರೇತಯಾನಾ, ವಿಟಂಪುರಾ, ಕ್ರೌಂಚಿ, ಸೂಕರಮುಖೀ, ವಿತತಾ, ಸರಮಾ, ದನು, ಉಷಾರಂಭಾ, ಪಿನಾಕಾ, ಲಲಿತಾ, ಚಿತ್ರರೂಪಿಣೀ, ಸ್ವಧಾಕಾರ, ವಷಟ್ಕಾರ

ವಿನಾಯಕೀಂ ಚ ವೈತಾಲೀಮುನ್ಮತ್ತಾಂ ಶುಭನಾಂ ತಥಾ ।
ಸಿದ್ಧಿಂ ಚ ಲೇಲಿಹಾನಾಂ ಚ ಕೇಕರಾಂ ಗರ್ದಭೀಂ ತಥಾ ॥ ೧೬ ॥

ತರ್ಕಟೀಂ ಬಹುಪುತ್ರಾಂ ಚ ಪ್ರೇತಯಾನಾಂ ವಿಟಂಪುರಾಂ ।
ಕ್ರೌಂಚೀಂಚ ಸೂಕರಮುಖೀಂ ವಿತತಾಂ ಸರಮಾಂ ದನುಂ ॥ ೧೭ ॥

ಉಷಾರಂಭಾಂ ಪಿನಾಕಾಂ ಚ ಲಲಿತಾಂ ಚಿತ್ರರೂಪಿಣೀಂ ।
ಸ್ವಧಾಕಾರಾಂ ವಷಟ್ಸ್ವಾಹಾಂ ಧೃತಿಂ ಜ್ಯೇಷ್ಠಾಂ ಕಪರ್ದಿನೀಂ ॥ ೧೮ ॥

ಮಾಯಾವಿಚಿತ್ರರೂಪಾಂ ಚ ಕಾಮರೂಪಾಂ ವಶಂಗಮಾಂ ।
ಸ್ವಕಂಬಿಲಾಂ ಸಿಂಜಿಕಾಂ ಚ ಮಹಾನಾಸಾಂ ಮಹಾಮುಖೀಂ ॥ ೧೯ ॥

ಕೌಮಾರೀಂ ರೋಚನಾಂ ಭೀಮಾಂ ಸದಾಹಾಸಾಂ ಮದೋದ್ಧತಾಂ ।
ಆರಕ್ತಾಕ್ಷೀಂ ಕಾಲಕರ್ಣೀಂ ಭರ್ತುಕರ್ಣೀಂ ಮಹಾಸ್ವನೀಂ ॥ ೨೦ ॥

ಕೇಶಿನೀಂ ಶಿಖಿನೀಂ ಲಂಬಾಂ ಪಿಂಗಾಕ್ಷೀಂ ಲೋಹಿತಾಮುಖೀಂ ।
ಘಂಟಾರವಾಂ ಚ ದಂಷ್ಟ್ರಾಲಾಂ ಲೋಚನಾಂ ಕಾಚಜಂಘಿಕಾಂ ॥೨೧॥

ಗೋಕರ್ಣಿಕಾಂ ಗೋಮುಖಿಕಾಂ ಮಹಾಗ್ರೀವಾಂ ಮಹಾಮುಖೀಂ ।
ಉಲ್ಕಾಮುಖೀಂ ಧೂಮ್ರಶಿಖಾಂ ಕವನಾಂ ಪರಿಕಂಪಿತಾಂ ॥ ೨೨ ॥

ಮೋಹಿನೀಂ ಕುಂಡಿನೀಂ ತ್ವೇಡಾಂ ನಿರ್ಭಯಾಂ ಬಾಹುಶಾಲಿನೀಂ ।
ಶೂರ್ಪಕರ್ಣೀಂ ತಥೈಕಾಕ್ಷೀಂ ವಿಶೋಕಾಂ ನಂದಿನೀಂ ರುಚಂ ॥ ೨೩ ॥

---

ಧೃತಿ, ಜ್ಯೇಷ್ಠಾ, ಕಪರ್ದಿನೀ, ಮಾಯಾವಿನೀ, ಚಿತ್ರರೂಪಾ, ಕಾಮರೂಪಾ, ವಶಂಗಮಾ, ಸ್ವಕಂಬಲಾ, ಸಿಂಜಿಕಾ, ಮಹಾನಾಸಾ, ಮಹಾಮುಖೀ, ಕೌಮಾರೀ, ರೋಚನಾ, ಭೀಮಾ, ಸದಾಹಾಸಾ, ಮದೋದ್ಧತಾ, ಆರಕ್ತಾಕ್ಷೀ, ಕಾಲಕರ್ಣೀ, ಭರ್ತುಕರ್ಣೀ, ಮಹಾಸ್ವನೀ, ಕೇಶಿನೀ, ಶಿಬಿನೀ, ಲಂಬಾ, ಪಿಂಗಾಕ್ಷೀ ಲೋಹಿತಾಮುಖೀ, ಘಂಟಾರವಾ, ದಂಷ್ಟ್ರಾಲಾ, ಲೋಚಲಾ, ಕಾಚಜಂಘಿಕಾ, ಗೋಕರ್ಣಿಕಾ, ಗೋಮುಖಿಕಾ, ಮಹಾಗ್ರೀವಾ, ಮಹಾಮುಖೀ, ಉಲ್ಕಾಮುಖೀ ಧೂಮ್ರಶಿಖಾ, ಕವನಾ, ಪರಿಕಂಪಿತಾ, ಮೋಹಿನೀ, ಕುಂಡಿನೀ, ತ್ವೇಡಾ, ನಿರ್ಭಯಾ, ಬಾಹುಶಾಲಿನಿ, ಶೂರ್ಪಕರ್ಣೀ, ಏಕಾಕ್ಷೀ, ವಿಶೋಕಾ, ನಂದಿನೀ, ರಾಜೀ, ಜ್ಯೋತ್ಸ್ನಾಮುಖೀ ವರ

ಜ್ಯೋತ್ಸ್ನಾಮುಖೀಂ ವರಪರಾಂ ನಿಕುಂಭಾಂ ರಕ್ತಕಂಪನಾಂ ।
ಅವಿಕಾರಾಂ ಮಹಾಚಿತ್ರಾಂ ಚಿತ್ರಸೇನಾಂ ಮನೋರಮಾಂ　　॥ ೨೪ ॥

ಸುದರ್ಶನಾಂ ಹರತ್ಪಾಪಾಂ ಮಾತಂಗೀಂ ಲಂಬಮೇಖಲಾಂ ।
ಸುಬಾಲಾಂ ಬಾಲತರ್ಕಾರೀಂ ಪ್ರೇಮೋದಾಂ ಲಾಂಗಲಾವತೀಂ ॥ ೨೫ ॥

ಚಿತ್ತಾಂ ವಿತ್ತಾಂ ಜಡಾಂ ಕೋಣಾಂ ಶಾಂತಿಕಾಂ ಭಸಿತಾಶನೀಂ ।
ಲಂಬಸ್ತನೀಂ ಲಂಬಘಂಟಾಂ ವಿತತಾಂ ವಾಮಚೂಡಿನೀಂ　　॥ ೨೬ ॥

ಸ್ಪಲತೀದೀರ್ಘಕೇಶೀ ಚ ಸುಲತಾ ಸುಂದರೀ ಸಮಾ ।
ಅಧೋಮುಖೀ ಕಟುಮುಖೀ ಕ್ರೋಧನೀ ವಸುವಾಶಿನೀ　　॥ ೨೭ ॥

ಅರಾವಿಣೀ ವತ್ಸರುತಾ ಮಾಷಾಭಾಜಿನಶಾಲಿನೀ ।
ಕುಟುಂಬಿಕಾ ಶುಕ್ತಿಕಾ ಚ ಚಂಡಿಕಾ ಬಲಮೋಹಿನೀ　　॥ ೨೮ ॥

ಮಾಂಸಾನ್ಯಹಾಸಿನೀ ಲಂಬಾ ಗೋವಿಧಾರೀ ಸಮಾಗಧೀ ।
ಏತಾಶ್ಚಾನ್ಯಾಃ ಸ ದೇವೇಂದ್ರ ಸಸೃಜೇ ಮಾತರಸ್ತದಾ　　॥ ೨೯ ॥

---

ಪರಾ, ನಿಕುಂಭಾ, ರಕ್ತಕಂಪನಾ, ಅವಿಕಾರಾ, ಮಹಾಚಿತ್ರಾ, ಚಿತ್ರಸೇನಾ, ಮನೋರಮಾ, ಸುದರ್ಶನಾ, ಹರತ್ಪಾಪಾ, ಮಾತಂಗೀ, ಲಂಬಮೇಖಲಾ, ಸುಬಾಲಾ, ಬಾಲತರ್ಕಾರೀ, ಪ್ರೇಮೋದಾ, ಲಾಂಗಲಾವತೀ, ಚಿತ್ತಾ, ವಿತ್ತಾ, ಜಡಾ, ಕೋಣಾ, ಶಾಂತಿಕಾ, ಭಸಿತಾಶನೀ, ಲಂಬಸ್ತನೀ, ಲಂಬಘಂಟಾ, ವಿನೀತಾ, ವಾಮಚೂಡಿನೀ, ಸ್ಪಲತೀ ದೀರ್ಘಕೇಶೀ, ಸುಲತಾ, ಸುಂದರೀ, ಸಮಾ ಅಧೋಮುಖೀ, ಕಟುಮುಖೀ, ಕ್ರೋಧಿನೀ ವಸುವಾಶಿನೀ, ಇವರಲ್ಲದೇ,—

೨೭-೨೮　ವಿರಾವಿಣೀ, ವತ್ಸರುತಾ, ಮಾಷಾಭಾಜನಶಾಲಿನೀ, ಕುಟುಂಬಿಕಾ, ಶುಕ್ತಿಕಾ, ಚಂಡಿಕಾ, ಬಲಮೋಹಿನೀ, ಮಾಂಸಾನ್ಯಹಾಸಿನೀ, ಲಂಬಾ, ಗೋವಿಧಾರೀ, ಸಮಾಗಧೀ

೨೯　ಕೇಳಯ್ಯ! ಶೈಲೂಷರಾಜ! ಆ ಪರಮೇಶ್ವರನು ಇಂತಹ ಇನ್ನೂ ಎಷ್ಟೆಷ್ಟೋ ಮಾತೃಗ್ರಹಗಣಗಳನ್ನು ನಿರ್ಮಿಸಿದೊಡನೆ, ಆ ಮಾತೃ ಮಹಾಮಂಡಲವು ಪ್ರಪಂಚದಲ್ಲೆಲ್ಲಾ ಪ್ರವಾಹರೂಪವಾಗಿ ಅಂಧಕರ ದೇಹದಿಂದ ಸುರಿಯುತ್ತಿದ್ದ ರಕ್ತ ಪ್ರವಾಹವನ್ನು ಸೊರ್ರೆಂದು ಹೀರಲಾರಂಭಿಸಿದರು.

**ಅಂಧಕಾನಾಂ ಮಹಾಘೋರಂ ಪಪುಸ್ತದ್ರುಧಿರಂ ತದಾ ।**
**ತತೋಂಧಕಾಸೃಜಾ ಸರ್ವಾಃ ಪರಾಂ ತೃಪ್ತಿಮುಪಾಗತಾಃ ॥ ೩೦ ॥**

**ತಾಸ್ತು ತೃಪ್ತಾಃ ಸುಸಂಭೂತಾ ಭೂಯ ಏವಾಂಧಕಾಸ್ರಜಾ ।**
**ಅರ್ದಿತೋಽಯ್ಯೈರ್ಮಹಾದೇವಃ ಶೂಲಮುದ್ಗರಪಟ್ಟಿಶೈಃ ॥ ೩೧ ॥**

**ತತಃ ಸ ಶಂಕರೋ ದೇವಸ್ತ್ವಂಧಕೈರ್ವ್ಯಾಕುಲೀಕೃತಃ ।**
**ಜಗಾಮ ಶರಣಂ ದೇವಂ ವಾಸುದೇವಮಜಂ ವಿಭುಂ ॥ ೩೨ ॥**

**ತತಸ್ತು ಭಗವಾನ್ವಿಷ್ಣುಃ ಸೃಷ್ಟವಾಂಚ್ಛುಷ್ಕರೇವತೀಂ ।**
**ಸಾ ಪಪೌ ಸತ್ವರಂ ತೇಷಾಮಂಧಕಾನಾಮಸೃಕ್ ಕ್ಷಣಾತ್ ॥ ೩೩ ॥**

---

೩೦. ಇಂತಹ ಕೋಟ್ಯನುಕೋಟಿ, ಮಾತೃಗ್ರಹಗಳು ಕುಣಿ ಕುಣಿಯುತ್ತಾ ಅಂಧಕರ ದೇಹದಿಂದ ಹೊರಟ ರಕ್ತವನ್ನು ಹೀರಿ ಹೀರಿ ಬಹಳ ತೃಪ್ತಿಯನ್ನು ಹೊಂದಿದರು

೩೧ ಮಾತೃಗಳು ಎಷ್ಟೋ ರಕ್ತಪಾನ ಮಾಡಿ ತೃಪ್ತಿಹೊಂದಿದಾಗ್ಯೂ ಇನ್ನೂ ಎಷ್ಟೋ ರಕ್ತವು ಭೂಮಿಯಲ್ಲಿ ಸುರಿಯುತ್ತಲೇ ಇತ್ತು. ಪುನಃ ಪುನಃ ಎಷ್ಟೋ ಅಂಧಕರು ಉತ್ಪತ್ತಿಯಾಗುತ್ತಲೇ ಇದ್ದರು. ಮಾತೃಗ್ರಹಗಳು ರಕ್ತವನ್ನು ಹೀರಿ ಹೀರಿ ಹೊಟ್ಟೆಯುಬ್ಬರಿಸುವುದಕ್ಕೆ ಆರಂಭವಾಯಿತು ಕೊನೆಗೆ ಹುಟ್ಟಿದ ಅಂಧಕರು ಗಳು, ಶೂಲ ಮುದ್ಗರ ಪಟ್ಟಸಾದ್ಯಾಯುಧಗಳನ್ನು ಧರಿಸಿ ಈಶ್ವರನ ಮೇಲೆಯೇ ಬೀಳುವುದಕ್ಕೆ ಬಂದರು.

೩೨. ಪುನಃ ಪುನಃ ಅಧಿಕ ಸಂಖ್ಯೆಯಿಂದ ಹುಟ್ಟುತ್ತಾ ಇದ್ದ ಅಂಧಕವೃಂದ ವನ್ನು ನೋಡಿ ಈಶ್ವರನಿಗೆ ದಿಗಿಲಾಗಿ ಬಹು ವ್ಯಾಕುಲಚಿತ್ತನಾಗಿ ಅನಾದ್ಯಂತ ರಹಿತ ದಾದ ವಾಸುದೇವನನ್ನು ಶರಣು ಹೊಂದಿದನು.

೩೩. ಮಹಾವಿಷ್ಣುವು ಶಂಕರನ ದುರವಸ್ಥೆಯನ್ನೂ, ಒಂದುಕಡೆ ರಕ್ತವನ್ನು ಹೀರಿ ಹೀರಿ ಹೊಟ್ಟೆಯುಬ್ಬರಿಸಿಕೊಂಡು ನಿಂತಿದ್ದ ಅಗಾಧ ಮಾತೃಗಣಗಳನ್ನೂ, ಬೆಟ್ಟದಂತೆ ಬೆಳೆಯುತ್ತಲಿದ್ದ ಅಂಧಕಪರಿವಾರವನ್ನೂ ನೋಡಿ, ಶಂಕರನ ಮೇಲೆ ಕನಿಕರಗೊಂಡು ಶುಷ್ಕರೇವತಿಯೆಂಬ ಗ್ರಹವನ್ನು ಸೃಷ್ಟಿಮಾಡಿದನು

ಯಥಾಯಥಾ ಚ ರುಧಿರಂ ಪಿಬಂತ್ಯಂಧಕಸಂಭವಂ ।
ತಥಾ ತಥಾಽಧಿಕಂ ದೇವೀ ಸಂಶುಷ್ಯತಿ ಜನಾಧಿಪ ॥ ೩೪ ॥

ಪೀಯಮಾನೇ ತದಾ ತೇಷಾಮಂಧಕಾನಾಂ ತಥಾಽಸೃಜಿ ।
ಅಂಧಕಾಸ್ತು ಕ್ಷಯಂ ನೀತಾಃ ಸರ್ವೇ ತೇ ತ್ರಿಪುರಾರಿಣಾ ॥ ೩೫ ॥

ಮೂಲಾಂಧಕಂ ತು ವಿಕ್ರಮ್ಯ ತದಾ ಸರ್ವತ್ರ ಲೋಕಕೃತ್ ।
ಚಕಾರ ವೇಗಾಂಚ್ಛೂಲಾಗ್ರೇ ತದಾ ತುಷ್ಟಾವ ಶಂಕರಂ ॥ ೩೬ ॥

ಅಂಧಕಃ ಸುಮಹಾವೀರ್ಯಃ ತಸ್ಯ ತುಷ್ಟೋಽಭವದ್ಭವಃ ।
ಸಾಮೀಪ್ಯಂ ಪ್ರದದೌ ನಿತ್ಯಂ ಗಣೇಶತ್ವಂ ತಥೈವ ಚ ॥ ೩೭ ॥

---

೩೪. ಭಗವತ್ಸಂಕಲ್ಪಸಂಭೂತಳಾದ ರೇವತಿಯು ಅಲ್ಲಿ ನಿಂತಿದ್ದ ಅಗಣಿತ ರಾದ ಅಂಧಕರ ರಕ್ತವನ್ನೂ ಒಂದುಕ್ಷಣದಲ್ಲಿ ಹೀರಿಬಿಡಲು (ರಕ್ತವು ಶೋಷಿಸುತ್ತಾ ಬಂದಂತೆ ಅಂಧಕರೂ ಶೋಷಿಸಿ ಪ್ರಾಣಬಿಡುತ್ತ ಬಂದರು. ಅಂಧಕರ ರಕ್ತವು ಹೊಟ್ಟೆಗೆ ಎಷ್ಟೆಷ್ಟು ಹೆಚ್ಚಾಗಿ ಬಿದ್ದರೂ ಸಹ ಆ ಶುಷ್ಕರೇವತಿಯು ಶುಷ್ಕ (ಚಕ್ಕೆ) ದಂತೆಯೇ ಆಗಿದ್ದಳೇ ಹೊರ್ತು ಸ್ವಲ್ಪವೂ ವ್ಯತ್ಯಾಸ ಹೊಂದಲಿಲ್ಲ

೩೫. ಅಂಧಕರ ರಕ್ತವು ಶುಷ್ಕರೇವತಿಯಿಂದ ಹೀರಲ್ಪಡಲಾರಂಭವಾದೊಡ ನೆಯೇ ಆ ಅಂಧಕರರಕ್ತವೂ ಸಹ ಶೋಷಿಸಿ ಅವರೂ ಶುಷ್ಕರಂತಾಗುತ್ತಾ ಬರಲು, ಅವರೆಲ್ಲರನ್ನೂ ಶಂಕರನು ನಾಶಮಾಡುತ್ತಾಬಂದನು. ಮುಂದೆ ಮುಂದೆ ರಕ್ತ ವರ್ಷವು ನಿಂತು ಶೋಷಿಸಿ ಹೋಗುತ್ತ ಬಂದಂತೆ ಸಕಲಾಂಧಕರೂ ಶಂಕರನಿಂದ ನಾಶಹೊಂದಿದರು.

೩೬. ಕಡೆಗೆ ಶುಷ್ಕರೇವತಿಯೂ ಸಹ ಮೂಲ (ಮೊದಲು ಇದ್ದ) ಅಂಧಕನ ರಕ್ತವನ್ನೂ ಶೋಷಿಸಿ ಹೀರಿದೊಡನೆ ಶೂಲಿಯು ಆ ಅಂಧಕನನ್ನು ತನ್ನ ತ್ರಿಶೂಲ ದಿಂದ ಮೇಲಕ್ಕೆತ್ತಿ ಹಿಡಿದನು ಇಲ್ಲಿಗೆ ಅಂಧಕನ ಅವತಾರವು ಪೂರ್ತಿಯಾಗಲು • ಈಶ್ವರನ ತ್ರಿಶೂಲದ ಮೇಲೆ ನಿಂತಿದ್ದ ಅಂಧಕಾಸುರನು ಪರಮೇಶ್ವರನನ್ನು ಸ್ತೋತ್ರ ಮಾಡಲಾರಂಭಿಸಿದನು

೩೭ ಮಹಾಪರಾಕ್ರಮಶಾಲಿಯಾದ ಅಂಧಕನ ಸ್ತೋತ್ರಕ್ಕೆ ಸಂತೃಪ್ತನಾದ ಪರಮೇಶ್ವರನು ಆ ಅಂಧಕನಿಗೆ ತನ್ನ ಸಮೀಪದಲ್ಲೇ ಇರುವಂತೆ ಅನುಗ್ರಹಿಸಿದನಲ್ಲದೆ ಅವನಿಗೆ ಗಾಣಾಪತ್ಯಪದವಿಯನ್ನೂ ಸಹ ಕೊಟ್ಟನು

ತತೋ ಮಾತೃಗಣಾಃ ಸರ್ವೇ ಶಂಕರಂ ವಾಕ್ಯಮಬ್ರುವನ್ ।
ಭಗವನ್ ಭಕ್ಷಯಿಷ್ಯಾಮಃ ಸದೇವಾಸುರಮಾನುಷಂ ॥ ೩೮ ॥

ತ್ವತ್ಪ್ರಸಾದಾಜ್ಜಗತ್ಸರ್ವಂ ತದನುಜ್ಞಾತುಮರ್ಹಸಿ ।
॥ ಶಂಕರ ಉವಾಚ ॥
ಭವತೀಭಿಃ ಪ್ರಜಾಃ ಸರ್ವಾ ರಕ್ಷಣೀಯಾ ನ ಸಂಶಯಃ ॥ ೩೯ ॥

ತಸ್ಮಾದ್ಘೋರಾದಭಿಪ್ರಾಯಾನ್ಮನಃ ಶೀಘ್ರಂ ನಿವರ್ತ್ಯತಾಂ ।
॥ ನಾರಾಯಣ ಉವಾಚ ॥
ಇತ್ಯೇವಂ ಶಂಕರೇಣೋಕ್ತಂ ತ್ವನಾದೃತ್ಯ ವಚಸ್ತು ತಾಃ ॥ ೪೦ ।

ಕ್ಷೋಭಯಾಮಾಸುರವ್ಯಗ್ರಾಸ್ತ್ರೈಲೋಕ್ಯಂ ಸಚರಾಚರಂ ।
ತ್ರೈಲೋಕ್ಯೇ ಭಕ್ಷ್ಯಮಾಣೇ ತು ತದಾ ಮಾತೃಗಣೈರ್ನವೈಃ ॥ ೪೧ ॥

---

೩೮ ಇಷ್ಟಾದ ಮೇಲೆ ಅಗಣಿತವಾದ ಆ ಮಾತೃಕಾಗಣವು ಈಶ್ವರನನ್ನು ಕುರಿತು ಈ ಮಾತನ್ನು ಹೇಳಿದುವು —

ಸ್ವಾಮಿಾ ! ಪರಮೇಶ್ವರನೇ ! ನಮಗೆ ಹೊಟ್ಟೆ ಹಸಿವುಂಟಾಗಿದೆ ನಿನ್ನ ಅಪ್ಪಣೆಯಾದರೆ ಈ ತ್ರಿಲೋಕದಲ್ಲೂ ಇರುವ ದೇವಮನುಷ್ಯರುಗಳನ್ನೆಲ್ಲಾ ಹಿಡಿದು ತಿಂದುಬಿಡುತ್ತೇವೆ ಅಪ್ಪಣೆಯಾಗಬೇಕೆಂದು ಬೇಡಿಕೊಂಡುವು

೩೯ ಆಗ ಶಂಕರನು ಮಾತೃಗಣಗಳನ್ನು ಕುರಿತು ಹೇಳಿದುದೇನೆಂದರೆ —

ತಾಯಿಯರಾ ! ನಿಮ್ಮಿಂದ ಈ ಸಕಲ ಪ್ರಪಂಚವೂ ಸಂರಕ್ಷಿಸಲ್ಪಡಬೇಕಲ್ಲದ, ಸಂಹೃತವಾಗಕೂಡದು ಆದ್ದರಿಂದ ನಿಮ್ಮ ಮನಸ್ಸಿನಲ್ಲಿರುವ ಭಯಂಕರವಾದ ಅಭಿಪ್ರಾಯವನ್ನು ಮನಸ್ಸಿನಿಂದ ಈಚೆಗೆ ಕಿತ್ತೊಗೆಯಿರಿ

೪೦ ನಾರಾಯಣನು ಶೈಲೂಷನನ್ನು ಕುರಿತು ಹೇಳುತ್ತಾನೆ:—ಕೇಳಿದೆಯಾ ? ಶೈಲೂಷರಾಜ ! ಮುಂದಿನ ವೃತ್ತಾಂತವನ್ನು ಹೇಳುವೆನು ಮನಸ್ಸಿಟ್ಟು ಕೇಳು. ಮಾತೃಗಣಗಳನ್ನು ಕುರಿತು ಈಶ್ವರನು ಹೇಳಿದ ಮಾತನ್ನು ಕೇಳಿ ಸಕಲ ಮಾತೃಗಣವೂ ಆ ಈಶ್ವರನ ಮಾತನ್ನು ತಿರಸ್ಕಾರಮಾಡಿ ತಮ್ಮ ಹಠವನ್ನೇ ಮುಂದೆ ಮಾಡಿದುವು.

೪೧. ಹೀಗೆ ಹಠಹಿಡಿದ ಆ ಮಾತೃಗ್ರಹಗಳು ಮೂರು ಲೋಕವನ್ನೂ ಸಂಚರಿಸಿ ಅಲ್ಲಲ್ಲಿ ಸಿಕ್ಕಿದ ದೇವಮನುಷ್ಯಾದಿಗಳನ್ನು ಹಿಡಿದು ಹಿಡಿದು ಹೊಟ್ಟೆಗೆ ತುರುಕಿಕೊಳ್ಳುತ್ತಾ ಬಂದುವು.

ನೃಸಿಂಹಮೂರ್ತಿಂ ದೇವಂ ಚ ಪ್ರದಧ್ಯೌ ಭಗವಾಂಚ್ಛಿವಃ ।
ಅನಾದಿನಿಧನಂ ದೇವಂ ಸರ್ವಲೋಕಭವೋದ್ಭವಂ ॥ ೪೨ ॥

ದೈತ್ಯೇಂದ್ರವಕ್ಷೋರುಧಿರಪ್ರೋಕ್ಷಿತೋರುಮಹಾನಖಂ ।
ವಿದ್ಯುಜ್ಜಿಹ್ವಂ ಮಹಾದಂಷ್ಟ್ರಂ ಸ್ಫುಟಿಕೇಸರಸಂಕಟಂ ॥ ೪೩ ॥

ಕಲ್ಪಾಂತಮಾರುತಕ್ಷುಬ್ಧಸಪ್ತಾರ್ಣವಮಹಾಸ್ವನಂ ।
ವಜ್ರಾಂಗತೀಕ್ಷ್ಣನಖರಮಾಕರ್ಣದಾರಿತಾನನಂ ॥ ೪೪ ॥

ಮೇರುಶೈಲಪ್ರತೀಕಾಶಮುದಯಾರ್ಕಸಮೇಕ್ಷಣಂ ।
ಹಿಮಾದ್ರಿಶಿಖರಾಕಾರಂ ಚಾರುದಂಷ್ಟ್ರೋಜ್ಜ್ವಲಾನನಂ ॥ ೪೫ ॥

ಖವಿನಿಸ್ಸೃತರೋಮಾಗ್ನಿಂ ಜ್ವಾಲಾಕೇಸರಮಾಲಿನಂ ।
ಬದ್ಧಾಂಗದಂ ಸುಮುಕುಟಂ ಚಾರುಕೇಯೂರಭೂಷಣಂ ॥ ೪೬ ॥

---

೪೨ ಆಗ ಪರಮೇಶ್ವರನು ಈ ಮಾತೃಗ್ರಹ ಚೇಷ್ಟೆಯಿಂದ ವ್ಯಾಕುಲನಾಗಿ ಅವುಗಳ ಉಪಸಂಹಾರಕ್ಕೋಸ್ಕರ ಭಗವಾನ್ ನರಸಿಂಹಸ್ವಾಮಿಯನ್ನು ಮನಸ್ಸಿನಲ್ಲಿ ತದೇಕಾಯತ್ತ ಚಿತ್ತನಾಗಿ ಧ್ಯಾನಮಾಡಲಾರಂಭಿಸಿದನು

## ಪರಮೇಶ್ವರನು ಮಾಡಿದ ನರಸಿಂಹ ಸ್ತೋತ್ರ.

೪೩-೪೮. ಸ್ವಾಮಿ ! ಆದಿಮಧ್ಯಾಂತರಹಿತನೇ, ಸಕಲ ಲೋಕಗಳ ಉತ್ಪತ್ತಿಗೂ, ಸ್ಥಿತಿಗೂ ಕಾರಣನೇ, ಹಿರಣ್ಯಕಶಿಪುವಿನ ಎದೆಯನ್ನು ಉಗುರಿನಿಂದ ಬಗಿದು ರಕ್ತವನ್ನು ಬಾಯಿನಲ್ಲಿ ಹೀರಿದಾಗ ಬಾಯಿ ಕೈಯೆಲ್ಲಾ ರಕ್ತಮಯವಾಗಿ ಕೆಂಪಾಗಿ ಕಾಣುತ್ತಿದ್ದ ಉಗ್ರಮೂರ್ತಿಯೇ, ಮೇರುಪರ್ವತದಂತೆ ಚಿನ್ನದ ಬಣ್ಣದಿಂದ ಕೂಡಿ ಉನ್ನತಾಕಾರನಾಗಿ ಉದ್ಭವಿಸಿದ ನರಹರಿಮೂರ್ತಿಯೇ, ಪ್ರಾತಃಕಾಲ ಸಾಯಂಕಾಲಗಳ ಉದಯಾಸ್ತಗಳಂತಿರುವ ನೇತ್ರಗಳುಳ್ಳವನೇ, ಹಿಮಾದ್ರಿಯಂತೆ ಆಕಾರವುಳ್ಳ ನಾರಸಿಂಹನೇ, ಭಯಂಕರವಾದ ಕೋರೆದಾಡೆಗಳಿಂದೊಡಗೂಡಿದ ಮುಖವುಳ್ಳ ಮೂರ್ತಿಯೇ, ಕಿಡಿಗಳನ್ನೆರಚುತ್ತಿರುವಂತಿರುವ ಅಗ್ನಿರೋಮರಾಜಿಯುಳ್ಳ ಪರಮಪುರುಷನೇ, ಅಗ್ನಿಜ್ವಾಲೆಗಳಂತಿರುವ ಕೇಸರ (ಸಟಾ ಅಥವಾ ತಲೆಗೂದಲು) ವುಳ್ಳ ಸ್ವಾಮಿಯೇ, ಕಿರೀಟಾಂಗದ ಕೇಯೂರ ಭೂಷಣಗಳಿಂದ ವಿಭೂಷಿತನಾದ ವಿಶ್ವ

ಶ್ರೋಣೀಸೂತ್ರೇಣ ಮಹತಾ ಕಾಂಚನೇನ ವಿರಾಜಿತಂ ।
ನೀಲೋತ್ಪಲದಲಶ್ಯಾಮಂ ವಾಸೋಯುಗವಿಭೂಷಿತಂ ॥ ೪೭ ॥

ತೇಜಸಾಕ್ರಾಂತಸಕಲಬ್ರಹ್ಮಾಂಡಾಂತರಮಂಡಪಂ ।
ಸಾದರಂಬ್ರಾಮ್ಯಮಾಣಾನಾಂ ಹುತಹವ್ಯಘನಾರ್ಚಿಷಾಂ ॥ ೪೮ ॥

ಆವರ್ತ್ಯೈಃ ಸದೃಶಾಕಾರೈಃ ಸಂಯುಕ್ತಂ ದೇಹಲೋಮಜೈಃ ।
ಸರ್ವಪುಷ್ಪವಿಚಿತ್ರಾಂ ಚ ಧಾರಯಾನಂ ಮಹಾಸ್ರಜಂ ॥ ೪೯ ॥

ಸ ಧ್ಯಾತಮಾತ್ರೋ ಭಗವಾನ್ಪ್ರದದೌ ತಸ್ಯ ದರ್ಶನಂ ।
ಯಾದೃಶೇನೈವ ರೂಪೇಣ ಧ್ಯಾತೋ ರುದ್ರೇಣ ಭಕ್ತಿತಃ ॥ ೫೦ ॥

ತಾದೃಶೇನೈವ ರೂಪೇಣ ದುರ್ನಿರೀಕ್ಷ್ಯೇಣ ದೇವತೈಃ ।
ಪ್ರಣಿಪತ್ಯ ತು ದೇವೇಶಂ ತದಾ ತುಷ್ಟಾವ ಶಂಕರಃ ॥ ೫೧ ॥

---

ವಿಭುವೇ, ಉಡಿಯಲ್ಲಿ ಕಟ್ಟಿರುವ ಚಿನ್ನದ ಉಡಿದಾರದಿಂದ ಕಂಗೊಳಿಸುವ ನರಹರಿಯೇ, ನೀಲಮೇಘಶ್ಯಾಮಲನಾದ ವಸ್ತ್ರಯುಗ್ಮದಿಂ ವೇಷ್ಟಿತನಾದ ವನ ಮಾಲಿಯೇ, ನಿನ್ನ ತೇಜಸ್ಸಿನಿಂದಲೇ ಆಕ್ರಮಿಸಲ್ಪಟ್ಟ ಬ್ರಹ್ಮಾಂಡಮಂಡಲವುಳ್ಳ ಮಹಾಸ್ವಾಮಿಯೇ, ಯಾವಾಗಲೂ ನಿನ್ನ ದೇಹದ ಸುತ್ತಲೂ ಜ್ವಾಲಾಮುಖಿಯಿಂದ ವ್ಯಾಪಿಸಿರುವ ಯಜ್ಞೇಶ್ವರರೋ ಎಂಬಂತಿರುವ ಗುಂಗುರು ಗುಂಗುರಾಗಿ ಸುತ್ತಿಕೊಂಡಿ ರುವ ಶರೀರದ ಮೇಲಿನ ರೋಮವುಳ್ಳ ರಮಾರಮಣನೇ, ಸಕಲ ಪುಷ್ಪಗಳಿಂದಲೂ ಕಟ್ಟಲ್ಪಟ್ಟ ಪುಷ್ಪಮಾಲೆಯನ್ನು ಧರಿಸಿರುವ ವಕ್ಷಸ್ಥಳವುಳ್ಳ ಶ್ರೀವತ್ಸಾಂಕಿತನೇ, ನಿನ್ನನ್ನು ಧ್ಯಾನಮಾಡುತ್ತೇನೆ ಮತ್ತು ನಮಸ್ಕರಿಸುತ್ತೇನೆ.

೫೦. ಈ ಪ್ರಕಾರವಾಗಿ ಈಶ್ವರನು ನರಸಿಂಹಸ್ವಾಮಿಯನ್ನು ಸ್ತೋತ್ರಮಾಡಿ ದೊಡನೆಯೇ ಆ ಉಗ್ರನರಸಿಂಹನು, ತನ್ನನ್ನು ಈಶ್ವರನು ಹೇಗೆ ಹೇಗೆ ಧ್ಯಾನಮಾಡಿ ದನೋ ಅದೇ ವಿಧವಾದ ರೂಪದಿಂದ ಈಶ್ವರನಿಗೆ ಪ್ರತ್ಯಕ್ಷನಾದನು.

೫೧ ಇತರ ದೇವತೆಗಳಿಗೆ ದುರ್ಲಭದರ್ಶನವಾದ ಆ ನರಸಿಂಹನು ಈಶ್ವರನ ಭಕ್ತಿಗೆ ಮೆಚ್ಚಿ,ಈಶ್ವರನು ಮುಂದೆ ಬಂದು ನಿಂತುಕೊಂಡೊಡನೆಯೇ ಆ ಪರಮೇಶ್ವರನ ಮುಂದೆ ಕೈಜೋಡಿಸಿ ನಿಂತುಕೊಂಡು ಮುಂದೆ ಹೇಳುವಂತೆ ಸ್ತೋತ್ರಮಾಡಿದನು.

॥ ಶಂಕರ ಉವಾಚ ॥

ನಮಸ್ತೇಽಸ್ತು ಜಗನ್ನಾಥ ನರಸಿಂಹವಪುರ್ಧರ ।
ದೈತ್ಯನಾಥಾಸ್ಥಿಸಂಪೂರ್ಣ ನಖಶುಕ್ತಿವಿರಾಜಿತ　　॥ ೫೨ ॥

ತದಸ್ರಕಣಸಂಲಗ್ನಹೇಮಪಿಂಗಲವಿಗ್ರಹ ।
ಮೇರೋಃ ಸಪದ್ಮರಾಗಸ್ಯ ಶೋಭಾಂ ಧತ್ಸೇ ಜಗದ್ಗುರೋ　　॥ ೫೩ ॥

ಕಲ್ಪಾಂತಾಂಭೋದನಿರ್ಘೋಷ ಸೂರ್ಯಕೋಟಿಸಮಪ್ರಭ ।
ಸಹಸ್ರಯಮಸಂಕ್ರೋಧ ಸಹಸ್ರೇಂದ್ರಪರಾಕ್ರಮ　　॥ ೫೪ ॥

ಸಹಸ್ರಧನದಸ್ಫೀತ ಸಹಸ್ರವರುಣಾತ್ಮಕ ।
ಸಹಸ್ರಕಾಲರಚಿತ ಸಹಸ್ರನಿಯತೇಂದ್ರಿಯ　　॥ ೫೫ ॥

---

೫೨-೫೮　ಶಂಕರನು ನರಸಿಂಹನನ್ನು ಸ್ತೋತ್ರ ಮಾಡಲಾರಂಭಿಸುತ್ತಾನೆ —

ಶ್ಲೋಕ॥ ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಂ ।
ನೃಸಿಂಹಂ ಭೀಷಣಂ ಭದ್ರಂ ಮೃತ್ಯು ಮೃತ್ಯುಂ ನಮಾಮ್ಯಹಂ ॥

ಈ ಲೇಖಕನ ಕುಲದೇವತೆಯೂ ನೃಸಿಂಹಸ್ವಾಮಿಯೇ ಆದ್ದರಿಂದ ತನ್ನ ನಿತ್ಯ ಧ್ಯಾನದಲ್ಲಿಟ್ಟಿರುವ ಮೇಲಿನ ಧ್ಯಾನಶ್ಲೋಕವನ್ನು ಮೊದಲು ಬರೆದು, ಅನಂತರ ನರಸಿಂಹಸ್ವಾಮಿಯ ಸ್ತೋತ್ರವನ್ನು ಬರೆಯುತ್ತಾನೆ

ಓ ಜಗದೊಡೆಯನೇ ! ನರಸಿಂಹನಂತೆ ರೂಪವನ್ನು ಧರಿಸಿರುವ ನಿನಗೆ ನಮಸ್ಕಾರವನ್ನು ಮಾಡುತ್ತೇನೆ. ದೈತ್ಯರ ಧೊರೆಯಾದ ಹಿರಣ್ಯಕಶಿಪುವಿನ ಶರೀರದ ಮೂಲೆ ಮೂಲೆಯಲ್ಲಿರುವ ಮೂಳೆಯನ್ನೂ ಉಗುರಿನ ತುದಿಯಿಂದಲೇ ಬಗಿದು ಚೂರುಚೂರು ಮಾಡಿದ ಚಾರುಲೋಚನನಾದ ನರಹರಿಯೇ, ಹಿರಣ್ಯಕಶಿಪುವಿನ ರಕ್ತದ ಹನಿಗಳಿಂದ ತಗಲಿಕೊಂಡಿರುವ ಹೇಮದಂತೆ ಹೊಂಬಣ್ಣವುಳ್ಳ ಮನೋಹರವಾದ ಶರೀರವನ್ನು ಧರಿಸಿರುವ ಸ್ವಾಮಿಯೇ, ನೀನು ಪದ್ಮರಾಗದಿಂದ ಕೂಡಿರುವ ಮೇರುಪರ್ವತದಂತೆ ಮಿರುಮಿರುಗುವವನಾಗಿ ಮನೋಹರಾಕಾರನಾಗಿರುವಿ ನಿನ್ನ (ಸಿಂಹ) ಗರ್ಜನೆಯನ್ನು ಕೇಳಿದರೆ ಪ್ರಳಯಕಾಲದಲ್ಲಿ ಮೇಘವು ಗುಡುಗಿದಂತೆ ಕೇಳಿಸುತ್ತಲಿದೆ ನಿನ್ನ ಕಾಂತಿಯನ್ನು ಕೋಟಿ ಸೂರ್ಯರು ಏಕಕಾಲದಲ್ಲಿ ಹುಟ್ಟಿದರೂ

**ಸಹಸ್ರಭೂಮಿಸದ್ಧೈರ್ಯ ಸಹಸ್ರಾನಂತಮೂರ್ತಿಮತ್ ।**
**ಸಹಸ್ರಚಂದ್ರಪ್ರತಿಮ ಸಹಸ್ರಹರಿವಿಕ್ರಮ ॥ ೫೬ ॥**

**ಸಹಸ್ರರುದ್ರತೇಜಸ್ಕ ಸಹಸ್ರಬ್ರಹ್ಮಸಂಸ್ತುತ ।**
**ಸಹಸ್ರವಾಯುವೇಗೋಗ್ರ ಸಹಸ್ರಜ್ಯೋತಿರೀಕ್ಷಣ ॥ ೫೭ ॥**

**ಸಹಸ್ರಯಂತ್ರಮಥನ ಸಹಸ್ರಾಬಾಧಮೋಚನ ।**
**ಅಂಧಕಸ್ಯ ವಿನಾಶಾಯ ಸೃಷ್ಟಾ ಯಾ ಮಾತರೋ ಮಯಾ ॥ ೫೮ ॥**

**ಅನಾದೃತ್ಯ ತು ಮದ್ವಾಕ್ಯಂ ಭಕ್ಷಯಂತ್ಯಶ್ಚ ತಾಃ ಪ್ರಜಾಃ ।**
**ಕೃತ್ವಾ ತಾಶ್ಚ ನ ಶಕ್ತೋಽಹಂ ಸಂಹಂತುಮಪರಾಜಿತ ॥ ೫೯ ॥**

---

ಸರಿಹೋಲಲಾರರು ಸಹಸ್ರ ಮಂದಿ ಯಮರಾದರೂ ನಿನ್ನ ಒಬ್ಬನ ಕ್ರೋಧಕ್ಕೆ ಸರಿಬರಲಾರು ಎಲೈ ಸಹಸ್ರ ಇಂದ್ರರಂತೆ ಪರಾಕ್ರಮವುಳ್ಳ ಪ್ರಭುವೇ, ಸಹಸ್ರ ಕುಬೇರರಂತೆ ಪ್ರಕಾಶಿಸುತ್ತಿರುವವನೇ, ಸಹಸ್ರ ಕಾಲಪುರುಷರಂತೆ ಚರಿತ್ರೆಯುಳ್ಳವನೇ, ಸಹಸ್ರಾರು ಮಂದಿ ಜಿತೇಂದ್ರಿಯರನ್ನೂ ಜಯಿಸಬಲ್ಲ ಶಕ್ತಿಯುಳ್ಳ ಜಿತೇಂದ್ರಿಯ (ಬ್ರಹ್ಮಚಾರಿಯೆ) ನೇ, ಸಹಸ್ರ ಭೂಮಿಯರನ್ನು ಹೋಲುವ ಧೈರ್ಯವುಳ್ಳ ಧೀರನೇ, ಅನಂತಾನಂತ ಸಹಸ್ರ ರೂಪಗಳನ್ನು ಧರಿಸಬಲ್ಲ ಧೊರೆಯೇ ! ಸಹಸ್ರ ಚಂದ್ರರಂತೆ ಪ್ರಕಾಶಮಾನನಾದವನೇ, ಸಹಸ್ರ ಸಿಂಹಗಳಂತೆ ಪರಾಕ್ರಮವುಳ್ಳವನೇ, ಸಹಸ್ರ ರುದ್ರರಂತೆ ತೇಜಸ್ಸುಳ್ಳವನೇ ಸಹಸ್ರ ಬ್ರಹ್ಮರಿಂದ ಏಕಕಾಲದಲ್ಲಿ ಸ್ತುತಿಸಲ್ಪಡುವ ಸ್ವಾಮಿಯೇ, ಸಹಸ್ರ ವಾಯುಗಳಂತೆ ಉಗ್ರವಾದ ವೇಗವುಳ್ಳವನೇ, ಸಹಸ್ರ ಸೂರ್ಯರಂತೆ ಕಣ್ಣುಳ್ಳವನೇ, ಸಹಸ್ರ ಯಂತ್ರಗಳನ್ನಾದರೂ ಒಂದೇ ಏಟಿಗೆ ಪುಡಿಪುಡಿ ಮಾಡಬಲ್ಲ ಪ್ರಭುವೇ, ಸಹಸ್ರ ಮಂದಿ ಶರಣಾಗತರನ್ನು ಬಾಧೆಯಿಲ್ಲದಂತೆ ಕಾಪಾಡುವ ಬಾಲಮುಕುಂದನೇ, ನನ್ನ ಪ್ರಾರ್ಥನೆಯನ್ನು ಸಾವಧಾನವಾಗಿ ಲಾಲಿಸೈ ಪ್ರಭುವೇ, ಅಂಧಕಾಸುರನ ಸಂಹಾರಕ್ಕಾಗಿ ನಾನು ಅನೇಕ ಮಾತೃಗಣಗಳನ್ನು ಸೃಷ್ಟಿಮಾಡಿದೆನು

೫೯ ಅಂಧಕಾಸುರನು ಸಂಹೃತನಾದ ಬಳಿಕ ನನಗೆ ಸಹಾಯಕರಾಗಿ ಸೃಷ್ಟರಾಗಿದ್ದ ಆ ಮಾತೃಗ್ರಹಗಳನ್ನು ಲೋಕವನ್ನು ಸಂರಕ್ಷಿಸಿರೆಂದು ಕೇಳಿಕೊಂಡೆನಾದರೂ ಅವರೆಲ್ಲರೂ ನನ್ನ ಮಾತನ್ನುಲ್ಲಂಘಿಸಿ, ಲೋಕದ ಜನರನ್ನೆಲ್ಲಾ ತಿನ್ನುತ್ತ ಬಂದಿದ್ದಾರೆ ಅವರನ್ನು ಮೊದಲು ನಾನು ಸೃಷ್ಟಿಮಾಡಿಬಿಟ್ಟೆನಾದರೂ ಈಗ ಅವರನ್ನು ನಿಗ್ರಹಿಸುವ ಶಕ್ತಿ ನನಗಿಲ್ಲವಾಗಿದೆ.

ಸ್ವಯಂ ಕೃತ್ವಾ ಕಥಂ ತಾಸಾಂ ವಿನಾಶಮಪಿ ರೋಚತೇ ।
॥ ನಾಡಾಯನ ಉವಾಚ ॥
ಏವಮುಕ್ತಃ ಸ ರುದ್ರೇಣ ನಾರಸಿಂಹವಪುರ್ಧರಃ ॥ ೬೦ ॥

ಸಸರ್ಜ ದೇವೀಂ ಜಿಹ್ವಾತಃ ತದಾ ವಾಗೀಶ್ವರೀಂ ಹರಿಃ ।
ಹೃದಯಾಚ್ಚ ತಥಾ ಮಾಯಾಂ ಗುಹ್ಯಾಚ್ಚ ಭಗಮಾಲಿನೀಂ ॥ ೬೧ ॥

ಅಸ್ಥಿಭ್ಯಶ್ಚ ತದಾ ಕಾಲೀ ಸೃಷ್ಟ್ವಾ ಪೂರ್ವಂ ಮಹಾತ್ಮನಾ ।
ಯಯಾ ತದ್ರುಧಿರಂ ಪೀತಮಂಧಕಾನಾಂ ಮಹಾತ್ಮನಾಂ ॥ ೬೨ ॥

ಯಾ ತಸ್ಮಿನ್ಕಥಿತಾ ಲೋಕೇ ನಾಮತಃ ಶುಷ್ಕರೇವತೀ ।
ದ್ವಾತ್ರಿಂಶನ್ಮಾತರಃ ಸೃಷ್ಟ್ವಾ ಗಾತ್ರೇಭ್ಯಶ್ಚಕ್ರಿಣಾ ತತಃ ॥ ೬೩ ॥

---

೬೦ ಅದಲ್ಲದೆ ನಾನೇ ಸೃಷ್ಟಿಸಿದ ಅವರನ್ನು ನಾನೇ ಕೈಯಾರ ಕೊಲ್ಲಲು ಮನಸ್ಸು ಬರುವುದಿಲ್ಲ ಮಹಾಪ್ರಭು, ಇವರಿಂದ ನಾನು ಬಿಡುಗಡೆ ಹೊಂದುವಂತೆಯೂ, ಇಲ್ಲ

ಮಧ್ಯೆ ನಾಡಾಯನನು ಶೈಲೂಷನೊಡನೆ ಹೇಳುತ್ತಾನೆ —ಕೇಳಿದೆಯಾ ? ಶೈಲೂಷ ! ಈ ರೀತಿಯಾಗಿ ಈಶ್ವರನಿಂದ ಹೇಳಲ್ಪಟ್ಟ ಈ ಮಾತನ್ನು ಕೇಳಿ ನರಸಿಂಹಸ್ವಾಮಿಯು ಮುಂದೇನು ಮಾಡಿದನೆಂಬುದನ್ನು ಹೇಳುತ್ತೇನೆ, ಕೇಳು

೬೧ ಆ ಕೂಡಲೆ ನರಸಿಂಹಸ್ವಾಮಿಯು ತನ್ನ ನಾಲಿಗೆಯನ್ನು ಉದ್ದವಾಗಿ ನೀಡಿ, ಆ ನಾಲಿಗೆಯ ತುದಿಯಿಂದ ವಾಗೀಶ್ವರಿಯನ್ನು ಸೃಷ್ಟಿಸಿದನು. ಹೃದಯದಿಂದ ಮಾಯೆಯನ್ನು ಸೃಷ್ಟಿಸಿದನು ರಹಸ್ಯೇಂದ್ರಿಯದಿಂದ ಭಗಮಾಲಿನೀದೇವಿಯನ್ನು ಸೃಷ್ಟಿಸಿದನು

೬೨ ಇದಕ್ಕಿಂತ ಮುಂಚೆಯೇ ಆ ಸ್ವಾಮಿಯು ತನ್ನ ದೇಹದ ಮೂಳೆಗಳಿಂದ ಕಾಳಿಯನ್ನು ಸೃಷ್ಟಿಸಿದ್ದನು ಆ ಕಾಳಿಯೇ ಅಂಧಕಾಸುರ ಕೋಟಿ ಕೋಟಿಗಳ ರುಧಿರವನ್ನು ಹೀರಿದವಳು

೬೩ ಯಾವಳನ್ನು ಶುಷ್ಕರೇವತಿಯೆಂದು ಹೇಳಿದೆಯಷ್ಟೆ ? ಆ ಶುಷ್ಕರೇವತಿಯೆಂಬುವಳೇ ಈ ಕಾಳಿಯೆಂದು ತಿಳಿಯಬೇಕು. ಇದಲ್ಲದೆ ಆಗ ಭಗವಾನ್ ನರಸಿಂಹಮೂರ್ತಿಯು ತನ್ನ ದೇಹದಿಂದ ಮೂವತ್ತೆರಡು ಮಂದಿ ಬೇರೆ ಬೇರೆ ದೇವತೆಯರನ್ನು ಸೃಷ್ಟಿಮಾಡಿದನು

**ತಾಸಾಂ ನಾಮಾನಿ ವಕ್ಷ್ಯಾಮಿ ತಾನಿ ಮೇ ಗದತಃ ಶೃಣು ।**
**ಸರ್ವಕ್ಲಿಷ್ಟಾ ಮಹಾಭಾಗಾ ಕಂರಕರ್ಣೀ ತಥೈವ ಚ ॥ ೬೪ ॥**

**ತ್ರೈಲೋಕ್ಯಮೋಹಿನೀ ಪುಣ್ಯಾ ಸರ್ವಸತ್ತ್ವವಶಂಕರೀ ।**
**ತಥಾ ಚ ಚಕ್ರಹೃದಯಾ ಪಂಚಮಾ ವ್ಯೋಮಚಾರಿಣೀ ॥ ೬೫ ॥**

**ಶಂಖಿನೀ ಲೇಖಿನೀ ಚೈವ ಕಾಲಸಂಕರ್ಷಿಣೀ ತಥಾ ।**
**ಇತಿ ದೇವ್ಯಷ್ಟಕಂ ರಾಜನ್ವಾಗೀಶ್ಯನುಚರಂ ಸ್ಮೃತಂ ॥ ೬೬ ॥**

**ಅಜಿತಾ ಸೂಕ್ಷ್ಮಹೃದಯಾ ವೃಕ್ಷಾವೇಶಾಶ್ಮದರ್ಶನಾ ।**
**ನೃಸಿಂಹಭೈರವಾ ಚಿಲ್ಲಾ ಗರುತ್ಪಕ್ಷಹೃದಾನಯಾ ॥ ೬೭ ॥**

**ಭಗಮಾಲಿನ್ಯನುಚರಾ ಇತ್ಯಷ್ಟೌ ನೃಪ ಮಾತರಃ ।**
**ಆಕರ್ಷಿಣೀ ಚ ಭಾರೂಟೀ ತಥೈವೋತ್ತರಮಾಲಿಕಾ ॥ ೬೮ ॥**

---

೬೪-೬೯ ಓ, ತ್ರೈಲೂಪ! ಅವರ ಹೆಸರನ್ನೆಲ್ಲಾ ವಿವರವಾಗಿ ಹೇಳುವೆನು ಕೇಳು. ಸರ್ವಕ್ಲಿಷ್ಟೆಯೆನಿಸಿದ ಮಹಾಭಾಗೆ, ಕಂರಕರ್ಣೀ, ತ್ರೈಲೋಕ್ಯಮೋಹಿನಿ, ಪುಣ್ಯಾಧಿಕಳಾದ ಸರ್ವಸತ್ವವಶಂಕರೀ, ಚಕ್ರಹೃದಯಾ, ಐದನೆಯ ವ್ಯೋಮ ಚಾರಿಣೀ, ಶಂಖಿನೀ, ಲೇಖಿನೀ, ಕಾಲಸಂಕರ್ಷಿಣೀ, ಈ ಎಂಟು ಮಂದಿಯೂ ವಾಗೀಶ್ವರಿಯ ಅನುಚಾರಿಣಿಯರಾದ ಮಾತೃಕೆಯರೆಂದು ತಿಳಿಯಬೇಕು

ಅಜಿತಾ, ಸೂಕ್ಷ್ಮಹೃದಯಾ ವೃಕ್ಷಾವೇಶಾ, ಅಶ್ಮದರ್ಶನಾ, ನೃಸಿಂಹಭೈರವಿ, ಚಿಲ್ಲಾ, ಗರುತ್ಪಕ್ಷಹೃದಾ, ನಯಾ ಈ ಎಂಟು ಮಂದಿಯೂ ಭಗಮಾಲಿನಿಯ ಅನು ಚರರಾದ ಮಾತೃಕೆಯರು

ಆಕರ್ಷಿಣೀ, ಭಾರುಟೀ, ಉತ್ತರಮಾಲಿಕಾ, ಜ್ವಾಲಾಮುಖೀ, ಭೀಷಣಿಕಾ, ಕಾಮಧೇನು, ಬಾಲಿಕಾ, ಪದ್ಮಕರಾ ಈ ಎಂಟು ಮಂದಿ ಮಾತೃಗ್ರಹಗಳೂ ಶುಷ್ಕ ರೇವತೀ ಮಾತೆಯ ಅನುಚಾರಿಣಿಯರು

ಇದರಂತೆ ಮಾಯೆಯ ಅನುಚರಿಯರೂ ಸೇರಿ ಒಟ್ಟು ಮೂವತ್ತೆರಡು ಮಾತೃ ಗಳು. ಇವರೆಲ್ಲರೂ ದೇವತೆಗಳ ದೇಹಗಳಿಂದ ಹುಟ್ಟಿದವರು ಮತ್ತು ಈ ಸಕಲ

ಜ್ವಾಲಾಮುಖೀ ಭೀಷಣಿಕಾ ಕಾಮುಧೇನುಶ್ಚ ಬಾಲಿಕಾ ।
ತಥಾ ಪದ್ಮಕರಾ ರಾಜನ್ರೇವತ್ಯನುಚರಾಃ ಸ್ಮೃತಾಃ ॥ ೬೯ ॥

ಅಷ್ಟೌ ಮಹಾಬಲಾಃ ಸರ್ವಾ ದೇವಗಾತ್ರಸಮುದ್ಭವಾಃ ।
ತ್ರೈಲೋಕ್ಯಸೃಷ್ಟಿಸಂಹಾರಸಮರ್ಥಾಃ ಸರ್ವದೇವತಾಃ ॥ ೭೦ ॥

ತಾಃ ಸೃಷ್ಟಮಾತ್ರಾ ದೇವೇನ ಕ್ರುದ್ಧಾ ಮಾತೃಗಣಸ್ಯ ತು ।
ಪ್ರಧಾವಿತಾ ಮಹಾರಾಜ ಕ್ರೋಧವಿಸ್ಫೂರ್ಜಿತೇಕ್ಷಣಾಃ ॥ ೭೧ ॥

ಅವಿಷಹ್ಯತಮಂ ತಾಸಾಂ ದೃಷ್ಟ್ವಾ ತೇಜಃ ಸುದಾರುಣಂ ।
ಭಯೇನ ಶರಣಂ ಪ್ರಾಪ್ತಾ ದೇವೇಶಂ ಪೂರ್ವಮಾತರಃ ॥ ೭೨ ॥

ಶರಣಾರ್ಥಮನುಪ್ರಾಪ್ತಾ ನೃಸಿಂಹೋ ವಾಕ್ಯಮಬ್ರವೀತ್ ।

॥ ನರಸಿಂಹ ಉವಾಚ ॥

ಯಥಾ ಮನುಷ್ಯಾಃ ಪಶವಃ ಪಾಲಯಂತಿ ವರಾನನಾಃ ॥ ೭೩ ॥

---

ದೇವತೆಯರೂ ಒಬ್ಬೊಬ್ಬರೇ ಈ ಪ್ರಪಂಚ ಸೃಷ್ಟಿಸಂಹಾರಗಳನ್ನು ಮಾಡಲು ಸಮರ್ಥರಾದವರು

೭೦-೭೨ ಈ ದ್ವಾತ್ರಿಂಶನ್ಮಾತೃಕೆಯರು ಸೃಷ್ಟರಾಗಿ ಅಲ್ಲಿ ತಂಡೋಪತಂಡವಾಗಿ ನಿಂತಿದ್ದ ಅಂಧಕರ ರಕ್ತವಂ ಹೀರಿದ್ದ, ಮಾತೃಗ್ರಹಗಳ ಮೇಲೆ ಕ್ರೋಧಪೂರಿತರಾಗಿ ಅವರ ಮೇಲೆ ಆಕ್ರೋಶಮಾಡುತ್ತಾ ಕ್ರೂರದೃಷ್ಟಿಯಂ ಬೀರಲಾಗಿ, ಆ ಅಗಣಿತ ಮಾತೃವೃಂದವೆಲ್ಲವೂ ತಾವೂ ಹುಬ್ಬುಗಂಟು ಹಾಕಿಕೊಂಡು ಕೋಪವನ್ನು ಹೊಂದಿದರಾದಾಗ್ಯೂ, ಈ ನವೀನ ಮಾತೃಕೆಯರ ಮುಂದೆ ನಿಲ್ಲಲಾರದೆ ದಿಕ್ಕಾಪಾಲಾಗಿ ಚಲ್ಲಾಪಿಲ್ಲಿಯಾಗಿ ಓಡಲಿಕ್ಕಾರಂಭಿಸಿದರು ಮತ್ತೆ ಕೆಲವರು ಪೂರ್ವ ಮಾತೃಗಳು ನವೀನ ಮಾತೃಗಣಕ್ಕೆ ಹೆದರಿ ಅವರ ಮುಂದೆ ಅಡ್ಡಬಿದ್ದು ಶರಣಾಗತರಾದರು

೭೩ ಈ ರೀತಿಯಾಗಿ ತನ್ನಿಂದ ಸೃಷ್ಟರಾದ ಮಾತೃಗಣಗಳನ್ನು ಕಂಡು ಹೆದರಿ ಅವನಿಗೆ ಶರಣಾಗತರಾದ ಪೂರ್ವಮಾತೃಕೆಯರನ್ನು ಕುರಿತು ನರಸಿಂಹಸ್ವಾಮಿಯು ಅಪ್ಪಣೆಕೊಡಿಸಿದುದೇನೆಂದರೆ —ಎಲೌ ಮಾತೃಗ್ರಹಗಣಗಳಿರಾ! ನೀವು ಇನ್ನು ಮುಂದೆ ಮನುಷ್ಯ, ಪಶು, ದೇವತೆಗಳೇ ಮುಂತಾದವರ ತಂಟೆಗೆ ಹೋಗಬೇಡಿರಿ ಅವರನ್ನು ಹಿಂಸೆಮಾಡಬೇಡಿ

**ಯಜಂತಿ ತೈಶ್ಚ ಪಶುಭಿಃ ತಥಾ ವೈ ದೇವತಾಗಣಾಃ ।**
**ಭವತ್ಯಶ್ಚ ತಥಾ ಲೋಕಾನ್ಪಾಲಯಂತು ಮಯೇರಿತಾಃ ॥ ೭೪ ॥**

**ಮನುಜೈಶ್ಚ ತಥಾ ದೇವಂ ಯಜಧ್ವಂ ತ್ರಿಪುರಾಂತಕಂ ।**
**ಯೇ ಚ ಮಾಂ ಸಂಸ್ಮರಂತೀಹ ತೇ ಚ ರಕ್ಷ್ಯಾ ಸದಾ ನರಾಃ ॥ ೭೫ ॥**

**ಬಲಿಕರ್ಮ ಕರಿಷ್ಯಂತಿ ಯುಷ್ಮಾಕಂ ಯೇ ಸದಾ ನರಾಃ ।**
**ಸರ್ವಕಾಮಪ್ರದಾಸ್ತೇಷಾಂ ಭವಿಷ್ಯಧ್ವಂ ತಥೈವ ಚ ॥ ೭೬ ॥**

**ತತ್ಸಾದನಾದಿಕಂ ಯೇ ಚ ಕರಿಷ್ಯಂತಿ ಹರೇರಿತಂ ।**
**ತೇ ಚ ರಕ್ಷ್ಯಾ ಸದಾ ಲೋಕೇ ರಕ್ಷಿತವ್ಯಂ ಚ ಶಾಸನಂ ॥ ೭೭ ॥**

---

೭೪ ಮನುಷ್ಯರು ಪಶುಗಳ ಸಹಾಯದಿಂದ ದೇವತೆಗಳನ್ನು ತೃಪ್ತಿಪಡಿಸುತ್ತಾ (ಯಜ್ಞಯಾಗಾದಿಗಳನ್ನು ಮಾಡುತ್ತಾ) ಹೇಗೆ ಪರಸ್ಪರ ಸಹಾಯಕರಾಗಿರುವರೋ, ಅದರಂತೆ ನೀವೂ ಸಹ ಲೋಕದ ಜನರನ್ನು ನಾನು ಹೇಳಿದಂತೆ ಕಾಪಾಡಿಕೊಂಡು ಬರಬೇಕು

೭೫ ಮನುಷ್ಯರೂ ಕೂಡ ಅದೇ ರೀತಿಯಾಗಿ ಈಶ್ವರ ತೃಪ್ತಿಯಾಗುವಂತೆ ಪೂಜೆಮಾಡುತ್ತಾ ಬರಬೇಕು ಯಾರು ನನ್ನನ್ನು (ನರಸಿಂಹಸ್ವಾಮಿಯನ್ನು) ಸ್ಮರಣೆ ಮಾಡುತ್ತಿರುವರೋ ಅವರ ತಂಟಗೆ ನೀವು ಹೋಗಬೇಡಿ ಅವರನ್ನು ಕಾಪಾಡುತ್ತಾ ಬನ್ನಿ

೭೬ ಎಲೌ, ಮಾತೃಗ್ರಹ ದೇವತೆಗಳಿರಾ! ಲೋಕದಲ್ಲಿ ಯಾರು ನಿಮಗೋಸ್ಕರ ಬಲಿಕರ್ಮಗಳನ್ನು ಮಾಡುತ್ತಾ ಬರುವರೋ, ಅವರೆಲ್ಲರಿಗೂ ನೀವು ಇಷ್ಟಾರ್ಥಗಳನ್ನು ಕೊಟ್ಟುಕೊಂಡು ಕಾಪಾಡುತ್ತ ಬನ್ನಿರಿ

೭೭ ಮೇಲೆ ಹೇಳಿದ ಮೇರೆ ಈಶ್ವರೋಕ್ತವಾದ ಕ್ರಮದಿಂದ ನನ್ನನ್ನು ಧ್ಯಾನಿಸಿ ಪೂಜಿಸುವರೋ, ಅವರೆಲ್ಲರನ್ನೂ ನೀವು ಲೋಕದಲ್ಲಿ ಕಾಪಾಡುತ್ತಾ ಅವರಿಗೆ ಯಶಸ್ಸನ್ನುಂಟುಮಾಡಬೇಕೆಂದು ನಾನು ಈ ಮೂಲಕ ಶಾಸನ (ಅಪ್ಪಣೆ) ಮಾಡಿರುತ್ತೇನೆ

ರೌದ್ರಾಂ ಚೈವ ಪರಾಂ ಮೂರ್ತಿಂ ಮಹಾದೇವಃ ಪ್ರದಾಸ್ಯತಿ ।
ಯುಷ್ಮಭ್ಯಂ ಸಮಯಾಸಾರ್ಧಂ ತೇನ ಸಾರ್ಧಂ ವರಸ್ಯಥ ॥ ೭೮ ॥

...ಯಾ ಮಾತೃಗಣಾಃ ಸೃಷ್ಟೋ ಯೋಯಂ ವಿಗತಸಾಧ್ವಸಃ ।
ಏಷ ನಿತ್ಯಂ ವಿಶಾಲಾಕ್ಷ್ಯೋ ಮಯ್ಯೈವ ಸಹರಂಸ್ಯತಿ ॥ ೭೯ ॥

ಮಯಾ ಸಾರ್ಧಂ ತಥಾ ಪೂಜಾಂ ವೀರೇಭ್ಯಶ್ಚೈವ ಲಪ್ಸ್ಯಸಿ ।
ಪೃಥಕ್ ಚ ಪೂಜಿತೋ ಲೋಕೇ ಸರ್ವಾನ್ಕಾಮಾನ್ಪ್ರದಾಸ್ಯತಿ ॥ ೮೦ ॥

ಶುಷ್ಕಾಂ ಸಂಪೂಜಯಿಷ್ಯಂತಿ ಯೇ ತು ಪುತ್ರಾರ್ಥಿತೋ ಜನಾಃ ।
ತೇಷಾಂ ಪುತ್ರಪ್ರದಾ ದೇವೀ ಭವಿಷ್ಯತಿ ನ ಸಂಶಯಃ ॥ ೮೧ ॥

---

೭೮ ನಿಮಗೆಲ್ಲರಿಗೂ ಈಶ್ವರನು ಭಯಂಕರವಾದ ಸ್ವರೂಪವನ್ನು ಕೊಡುತ್ತಾನೆ ನೀವು ಅವನ ಮಾತನ್ನು ಲವಲೇಶವೂ ಮೀರದೆ ನಡೆಯಿಸಿಕೊಂಡು ಲೋಕವನ್ನು ಸಂರಕ್ಷಿಸುತ್ತಾ ಬರಬೇಕು ಅವನಿಂದ ನಿಮಗೆ ಶ್ರೇಯಸ್ಸು ಉಂಟಾಗುವುದು

೭೯ ಈಗ ನನ್ನಿಂದ ಸೃಷ್ಟವಾಗಿ ನಿರ್ಭಯವಾಗಿ ಇಲ್ಲಿ ನಿಂತಿರುವ ಯಾವ ವೈಷ್ಣವೀ ಮಾಯಾಮಾತೃಗಳುಂಟೋ ಆ ಮಾತೃಗಣಗಳೆಲ್ಲವೂ ನನ್ನನ್ನು ಸಂತೋಷಪಡಿಸುತ್ತಾ ಸುಖವಾಗಿರಲಿ

೮೦ ನನ್ನನ್ನು ಪೂಜಿಸುವಾಗಲೆಲ್ಲಾ ಯಾವ ಶೂರರಾದ ಜನರು ಈ ವೈಷ್ಣವೀಶಕ್ತಿಗಳನ್ನೂ ಸಹ ಪೂಜಿಸುತ್ತಾ ಬರುವರೋ ಅಥವಾ ಬೇರೆಬೇರೆಯಾಗಿ ಯಾದರೂ ಪೂಜೆಮಾಡುವರೋ ಅವರೆಲ್ಲರೂ ಸಕಲ ಮನೋರಥಗಳನ್ನೂ ಪಡೆಯುತ್ತಾರೆ

೮೧. ಮಕ್ಕಳಾಗದೆ ಇದ್ದವರು ಈ ಶುಷ್ಕರೇವತಿ (ಕಾಳಿ) ಯನ್ನು ಹರಿಸಿಕೊಂಡು ಪೂಜೆಮಾಡುತ್ತ ಬಂದವರಾದರೆ, ಅಂಥವರಿಗೆ ಈ ಮಾತೆಯು ಖಂಡಿತವಾಗಿ ಮಕ್ಕಳನ್ನು ಕೊಟ್ಟೇ ಕೊಡುವಳು

॥ ನಾಡಾಯನ ಉವಾಚ ॥

ಏತಾವದುಕ್ತ್ವಾ ಭಗವಾನ್ಸಹ ಮಾತೃಗಣೇನ ಚ ।
ಜ್ವಾಲಾಮಾಲಾಕುಲವಪುಸ್ತತ್ರೈವಾಂತರಧೀಯತ ॥ ೬೨ ॥

ಸಮಾತೃವರ್ಗೋಽಪಿ ಹರಸ್ಯ ಮೂರ್ತಿಂ ।
ಸದಾ ಯಜಂಸ್ತಿಷ್ಠತಿ ತತ್ಸಮೀಪೇ ।
ದೇವೇಶ್ವರಸ್ಯಾಪಿ ನೃಸಿಂಹಮೂರ್ತೇಃ
ಪೂಜಾಂ ವಿಧತ್ತೇ ತ್ರಿಪುರಾಂತಕಾರೀ ॥ ೬೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನವಾಕ್ಯೇ
ಅಂಧಕಾರಜಯವರ್ಣನೋ ನಾಮ
ಷಡ್ವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ

---

೬೨ ಕೇಳಿದೆಯಾ ? ಶೈಲೂಷ ! ಮಾತೃಗಣಕ್ಕೆ ಬಂದ ಈ ವರಪ್ರದಾನ ವೃತ್ತಾಂತವನ್ನು, ಹೀಗೆಂದು ನಾಡಾಯನರು ವಿವರಿಸಿ, ಶೈಲೂಷನನ್ನು ಕುರಿತು ಹೇಳುತ್ತಾರೆ —ಇಷ್ಟು ಮಾತನ್ನು ಹೇಳಿದ ಬಳಿಕ ಸುತ್ತಲೂ ಜ್ವಾಲಾಮಾಲೆಯಿಂದ ವ್ಯಾಪ್ತವಾದ ದೇಹವುಳ್ಳ ಆ ನರಸಿಂಹಸ್ವಾಮಿಯು ಆ ಮಾತೃಗಣಗಳೊಡನೆ ಅಲ್ಲಿಯೇ ಅಂತರ್ಧಾನನಾ (ಮರೆಯಾ) ದನು

೬೩ ಈ ಮೇರೆ ನೃಸಿಂಹಾಂತರ್ಧಾನಾನಂತರದಲ್ಲಿ ಈಶ್ವರನಿಂದ ಸೃಷ್ಟವಾಗಿದ್ದ ಸಕಲ ಮಾತೃವರ್ಗವೂ ನರಸಿಂಹದೇವರ ಮಾತಿನಂತೆ ಈಶ್ವರನ ಮಾತನ್ನು ಮೀರದೆ ಈಶ್ವರಮೂರ್ತಿಯನ್ನು ಸರ್ವದಾ ಪೂಜೆಮಾಡುತ್ತಾ, ಆ ಈಶ್ವರನೂ ಸಹ ತ್ರಿಪುರಸಂಹಾರ, ಅಂಧಕಾಸುರ ಸಂಹಾರಗಳ ಸಮನಂತರದೊಳ್ ನೃಸಿಂಹಸ್ವಾಮಿಯನ್ನು ಪೂಜೆಮಾಡಿಕೊಂಡು ಸುಖವಾಗಿದ್ದನೆಂದು ನಾಡಾಯಣರು ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಅಂಧಕಾಸುರ ಸಂಹಾರವೆಂಬ ಹೆಸರಿನ
ಇನ್ನೂರ ಇಪ್ಪತ್ತಾರನೆಯ ಅಧ್ಯಾಯವು
ಮುಗಿದುದು.

—ಮಂಗಳಂ—